# ಕಸ್ತೂರಿ

ಕನ್ನಡ ಡೈಜೆಸ್ಟ್

ಪ್ರತಿತಿಂಗಳ ೧ನೆ ದಿನಾಂಕ ಪ್ರಕಟವಾಗುವದು.

ಮುಖ್ಯ ಸಂಪಾದಕರು :

**ಮೊಹರೆ ಹನುಮಂತರಾಯರು**

ಪ್ರಕಾಶಕರು :

**ಲೋಕಶಿಕ್ಷಣ ಟ್ರಸ್ಟ್-ಹುಬ್ಬಳ್ಳಿ**

ಕಚೇರಿ :

ಸಂಯುಕ್ತ ಕರ್ನಾಟಕ ಕಾರ್ಯಾಲಯ

ಹುಬ್ಬಳ್ಳಿ

ಮುದ್ರಕರು :

ಸಂಯುಕ್ತ ಕರ್ನಾಟಕ ಮುದ್ರಣಾಲಯ

ಹುಬ್ಬಳ್ಳಿ

ಚಿತ್ರಕಾರರು :

**ಸದಾಶಿವ**

**ಮಾರ್ಶಲ್ ಡಿಸೋಜ**

ಮುಖಪುಟ ಚಿತ್ರ :

ವಿಜಾಪುರದ ಗೋಲಗುಮ್ಮಟ

ಚಂದಾ ದರ :

ವಾರ್ಷಿಕ (ಅಂಚೆಸೇರಿ) ರೂ. ೮-೦-೦

ಅರ್ಧ ವರ್ಷ — ರೂ. ೪-೮-೦

ಬಿಡಿ ಸಂಚಿಕೆ — ರೂ. ೦-೧೩-೦

## ಲೇಖಕರಿಗೆ ಸೂಚನೆ

ಕಸ್ತೂರಿಯಲ್ಲಿ ಪ್ರಕಟನೆಗಾಗಿ ಲೇಖ, ಪ್ರಬಂಧ, ಕಥೆ ಮೊದಲಾದವನ್ನು ಸ್ವೀಕರಿಸಲಾಗುವದು. ಕಾಗದದ ಒಂದೇ ಮಗ್ಗಲಿಗೆ ವಿರಳವಾಗಿ ಬರೆದು ಕಳಿಸಬೇಕು. ಲೇಖಕರು ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ತಿಳಿಸಬೇಕಲ್ಲದೆ, ಅನುವಾದ, ರೂಪಾಂತರ ಇಲ್ಲವೆ ಸಾಧಾರ ಲೇಖಗಳಾದರೆ ಅವುಗಳ ಮೂಲ ಲೇಖಕ ಹಾಗು ಪ್ರಕಾಶಕರ ಹೆಸರು ವಿಳಾಸಗಳನ್ನೂ ಒದಗಿಸಬೇಕು. ಅಸ್ವೀಕೃತ ಲೇಖಗಳು ತಿರುಗಿ ಬೇಕಾಗಿದ್ದರೆ **ಲೇಖಗಳ ಸಂಗಡವೇ** ತಿರುಗಿ ಕಳಿಸಲು ಅವಶ್ಯಬೀಳುವಷ್ಟು ಅಂಚೆ ತಿಕೀಟುಗಳನ್ನೂ ಕಳಿಸಿರಬೇಕು. ಲೇಖ ಸ್ವೀಕೃತವಾದರೆ ಯಥಾವಕಾಶ ಪ್ರಕಟಿಸಲಾಗುವದು; ಆದರೂ ಸಾಮಾನ್ಯವಾಗಿ ಸ್ವೀಕೃತ ಲೇಖಗಳ ಸ್ವೀಕಾರದ ಸುದ್ದಿಯನ್ನು ಲೇಖ ತಲುಪಿದ ನಾಲ್ಕು ವಾರದೊಳಗಾಗಿ ಲೇಖಕರಿಗೆ ತಿಳಿಸಲಾಗುವದು. ಲೇಖಕರು ತಮ್ಮ ಲೇಖಗಳ ಸ್ಥಳಪ್ರತಿಗಳನ್ನು ಕಾಯ್ದಿಟ್ಟುಕೊಳ್ಳುವದೊಳಿತು.

ಲೇಖ ಪ್ರಕಟವಾದರೆ "ಕಸ್ತೂರಿ" ಯು ಆಗಿಂದಾಗ್ಗೆ ಗೊತ್ತುಪಡಿಸಿಕೊಂಡ ಕ್ರಮದಲ್ಲಿ ಪ್ರತಿಫಲವನ್ನು ಆದಷ್ಟು ಬೇಗ ಕೊಡಲಾಗುವದು. ಲೇಖಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ.

## ಚಂದಾದಾರರಿಗೆ ಸೂಚನೆ

ಪ್ರತಿತಿಂಗಳ "ಕಸ್ತೂರಿ" ಆಯಾ ತಿಂಗಳ ೧ನೇ ದಿನಾಂಕದೊಳಗೇ ಪ್ರಕಟವಾಗುವುದು. ಅದು ಚಂದಾದಾರರಿಗೆ ಆಯಾ ತಿಂಗಳ ೫ ನೇ ದಿನಾಂಕದೊಳಗೆ ತಲಪುವದು. ಹಾಗೆ ಬಾರದಿದ್ದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ನಮಗೆ ತಿಳಿಸಬೇಕು. ಚಂದಾದಾರರು ಕಾರ್ಯಾಲಯದೊಡನೆ ಪತ್ರ ವ್ಯವಹಾರ ಮಾಡುವಾಗ್ಗೆ ತಮ್ಮ ಚಂದಾ ನಂಬರು ಕಾಣಿಸಲು ಮರೆಯಬಾರದು.

# ಈ ಸಂಚಿಕೆಯಲ್ಲಿ





*Statement about ownership and other particulars about newspaper* **Kasturi**, *a Kannada Monthly Digest to be published in the first issue every year after the last day of February.*

**FORM IV**

( *See Rule* 8 )

| | | | |
|---|---|---|---|
| 1. | Place of Publication | .. | HUBLI |
| 2. | Periodicity of its publication | | Monthly ( 1st of every month ) |
| 3. | Printer's Name | .. | H. R. Moharay |
| | Nationality | .. | Indian |
| | Address : | .. | Post Box No. 30, Hubli |
| 4. | Publisher's Name | .. | H. R. Moharay |
| | Nationality | .. | Indian |
| | Address : | .. | Post Box No. 30, Hubli |
| 5. | Editor's Name | .. | H. R. Moharay |
| | Nationality | .. | Indian |
| | Address : | .. | Post Box No. 30, Hubli |
| 6. | Names and addresses of individuals who own the newspaper and partners or share-holders holding more than one per cent of the total capital. | .. | Loka Shikshana Trust, Hubli<br>Sole Trustee—<br>R. R. Diwakar. |

I, H. R. Moharay, hereby declare that the particulars given above are true to the best of my knowledge and belief.

**H. R. Moharay**
Signature of Publisher.

Dated 1-3-1957.

## ಸಂಪಾದಕರ ನುಡಿ

ಈ ಸಲದ "ಕಸ್ತೂರಿ" ಓದುಗರ ಕೈಸೇರು-ವಾಗ ಎರಡು ಮೂರು ದಿನ ತಡವಾದುದಕ್ಕೆ ನಾವು ಕ್ಷಮಾಪಣೆ ಕೇಳಬೇಕಾಗಿದೆ. ಕೆಲವು ಆಕಸ್ಮಿಕ ಯಾಂತ್ರಿಕ ತೊಂದರೆಗಳ ಕಾರಣ ದಿಂದ, ನಮ್ಮ ಮುದ್ರಣ ಶಾಖೆಯಲ್ಲಿ "ಕಸ್ತೂರಿ" ಗಾಗಿ ಉಪಯೋಗಿಸುತ್ತಿದ್ದ ಯಂತ್ರವನ್ನು ಈ ಸಲ ಉಪಯೋಗಿಸಲಾಗಲಿಲ್ಲ. ಆದ್ದರಿಂದ ಮುದ್ರಣ ತಡವಾಯಿತು. ಮತ್ತು ಅನೇಕ ಪುಟ ಗಳನ್ನು ಬಣ್ಣವಿಲ್ಲದೇ ಮುದ್ರಿಸಬೇಕಾಯಿತು.

ಮುಂದೆ ಈ ಬಗೆಯ ವಿಲಂಬಕ್ಕೆ ಅವಕಾಶ ವೀಯುವುದಿಲ್ಲೆಂದು ಆಶ್ವಾಸನವೀಯುತ್ತೇವೆ. "ಕಸ್ತೂರಿ"ಗಾಗಿಯೇ ಹೊಸ ಯಂತ್ರವೊಂದನ್ನು ತರಿಸಿದ್ದು ಅದು ಈಗ ಅಣಿಯಾಗಿದೆ. ಆದ್ದರಿಂದ ಮುಂದಿನ ಸಂಚಿಕೆಗಳು ಎಂದಿಗಿಂತಲೂ ಸುಂದ ರವಾಗಿ ಹೊರಬೀಳುವವು ಮತ್ತು ತಿಂಗಳ ಕೊನೆಯೊಳಗಾಗಿಯೇ ಓದುಗರ ಕೈಸೇರುವವು.

— **ಸಂಪಾದಕ**

## ತಿದ್ದುಪಡಿ

ಕಳೆದ ಸಂಚಿಕೆಯ ಮುಖಪತ್ರದ ಚಿತ್ರದ ವಿವರ ಕೊಡುವಾಗ "ಫತ್ತೇಪುರ ಸಿಕ್ರಿಯ ಮಹಾದ್ವಾರ" ಎಂದು ಬರೆದಿದ್ದೆವು. ಅದನ್ನು "ಮೈಸೂರರಮನೆಯ ಜಯಮಾರ್ತಂಡ ಮಹಾ ದ್ವಾರ"ವೆಂದು ತಿದ್ದಿಕೊಳ್ಳಬೇಕೆಂದು ವಿನಂತಿ. ಎರಡೂ ಚಿತ್ರಗಳು ನಮ್ಮ ಸಂಗ್ರಹದಲ್ಲಿದ್ದು ಅವುಗಳ ಸಾಮ್ಯದಿಂದ ಈ ತಪ್ಪಾಯಿತು.

ಈ ಸಲದ ಸಂಚಿಕೆಯ ೭೯ ನೇ ಪುಟದಲ್ಲಿ "೧೮ ಎಕರೆಗಳಲ್ಲಿ ೨೦ ರಾಷ್ಟ್ರಗಳು" ಎಂದಿರು ವುದನ್ನು ೮೦ ರಾಷ್ಟ್ರಗಳೆಂದು ತಿದ್ದಿಕೊಳ್ಳಬೇಕು.

## ಓದುಗರ ಓಲೆಗಳು

"ಕಸ್ತೂರಿಯಲ್ಲಿ ವಿದ್ಯಾರ್ಥಿಗಳ ಸಲುವಾಗಿ ಅನೇಕ ಲೇಖಗಳೂ ಇವೆ. ಇದರಿಂದ ವಿದ್ಯಾರ್ಥಿ ಗಳಿಗೆ ಹೊರಗಿನ ಮಹತ್ವದ ಮಾಹಿತಿ ಅಂದರೆ General Knowledge ದೊರೆಯುತ್ತದೆ."

— **ಸಿ. ಆರ್. ಕುಲಕರ್ಣಿ,**
**ನಂದಗಡ**

"....'ಕಸ್ತೂರಿ'ಯಲ್ಲಿ ಕವಿತೆಗಳು ಕಾಣು-ತ್ತಿಲ್ಲ, ಕಾರಣವೇನು?"

— **ಆರ್. ಜಿ. ಕುಲಕರ್ಣಿ,**
**ರಾಯಚೂರ**

[ಕೊಡಬಾರದೆಂದೇನೂ ಇಲ್ಲ. ಆದರೆ ಇಂದಿನ "ನವ್ಯ ಕವಿತೆ"ಗಳು ಸ್ವಲ್ಪ "ಬಿಗಿ" ಅಲ್ಲವೆ?
—ಸಂ.]

"ಫೆಬ್ರುವರಿ ಸಂಚಿಕೆಯ ಇದುವೆ ಜೀವ.... ವಿಭಾಗದಲ್ಲಿ ಶ್ರೀ ಕಾಜರೋಳರ ಲೇಖನದಲ್ಲಿ ಮರುದಿನ ಹೊಟೇಲ ಮಾಲಕನಿಗೆ ಮತ್ತೆ ನಾಲ್ಕಾಣೆ ಕೊಟ್ಟದ್ದಾಗಿ ಹೇಳಿದೆ. ಇದು ಆರಾಣೆ ಆಗಿರಬೇಕಲ್ಲವೆ?"

— **ಕಸ್ತೂರಿಯ ಭಕ್ತ, ಬೆಳಗಾವಿ**

[ 'ಭಕ್ತ'ರ ಕಣ್ಣು ಬಹಳ ಸೂಕ್ಷ್ಮವಿದೆ. ಅವರನ್ನುವುದು ನಿಜ; ಮುದ್ರಾರಾಕ್ಷಸ ಆರಾಣೆ ಯನ್ನು ನಾಲ್ಕಾಣೆ ಮಾಡಿದ್ದಾನಷ್ಟೆ!
—ಸಂ.]

"ಕಸ್ತೂರಿಯ ಲೇಖನಗಳು ಅಲ್ಪದಲ್ಲಿ ಅಗಾಧವನ್ನು ತುಂಬುವಂತಹವೇ ಇರಲಿ. ದೀರ್ಘ ಸಾಹಿತ್ಯ 'ಕೃತಿಗಳ ವಾಚನಕ್ಕೆ ದುಡಿಯುವ ಜನತೆಗೆ ಬಿಡುವಿರುವುದೆ?"

— **ಶಾರದಾ ಜಡೆ, ಹೊಸಪೇಟೆ**

[ಅದೇ ನಮ್ಮ ಯತ್ನ—ಸಂ]



ಕಸ್ತೂರಿ

ವರ್ಷ ೧ ಮಾರ್ಚ ೧೯೫೭ ಸಂಚಿಕೆ ೭

# ಕಾಶ್ಮೀರದ ದುರಂತ ನಾಟಕ

## ( ಒಂದು ಸಿಂಹಾವಲೋಕನ )

ಕಾಶ್ಮೀರದ ದುರಂತ ನಾಟಕದ ಪರದೆ ೧೯೪೭ ರ ಅಕ್ಟೋಬರ ೨೪ ರಂದು ಒಮ್ಮಿಂದೊಮ್ಮೆ ಮೇಲೇರಿ ಜಗತ್ತನ್ನು ಚಕಿತಗೊಳಿಸಿತು. ಪಾಕಿಸ್ತಾನದ ಗಡಿನಾಡ ಪ್ರಾಂತದಿಂದ ಸಾವಿರಗಟ್ಟಳೆ ರಾಕ್ಷಸ ಸಮಾನ ಗುಡ್ಡಗಾಡು ಜನರು ಕಾಶ್ಮೀರದ ಪ್ರಶಾಂತ-ಸುಂದರ ಕೊಳ್ಳದ ಮೇಲೆ ಕೊಲೆ ಸುಲಿಗೆ ಕೊಳ್ಳಿಗಳ ರುದ್ರಲೀಲೆಯೊಡನೆ ಪ್ರವೇಶಿಸಿದರೆಂದು ದಿಲ್ಲಿಗೆ ಸುದ್ದಿ ಬಂತು.

ಭಾರತಸರಕಾರಕ್ಕೆ ಇದು ಸಂಪೂರ್ಣ ಹೊಸ ಸುದ್ದಿಯಾಗಿತ್ತು. ಮರುದಿನ ಇನ್ನೂ ಹೊಸ ಸುದ್ದಿಯನ್ನು ಅದು ಕೇಳಬೇಕಾಯಿತು. ಈ ಬಾರಿ ಸುದ್ದಿ ಬಂದದ್ದು ಪಾಕಿಸ್ತಾನದ ಸೈನ್ಯ-ಖಾತೆಯಿಂದಲೇ: ಜನರಲ್ ಲಾಕ್‌ಹಾರ್ಟರಿಗೆ ಪಾಕ ಸೈನ್ಯದಿಂದ ಬಂದ ತಂತಿಯಲ್ಲಿ ೫,೦೦೦ ಗುಡ್ಡಗಾಡಿನ ಜನರು ಕಾಶ್ಮೀರದಲ್ಲಿ ಹೊಕ್ಕಿದ್ದಾರೆಂದು ಹೇಳಲಾಗಿತ್ತು. ಮುಜಫರಾಬಾದ ಮತ್ತು ದೋಮೇಲ್ ಆಗಲೇ ದಾಳಿಗಾರರ ವಶವಾಗಿದ್ದವೆಂದೂ ಇನ್ನಷ್ಟು ದಾಳಿಗಾರರು ಬರುವ ಲಕ್ಷಣವಿದೆಯೆಂದೂ ಆ ತಂತಿ ವರದಿ ಮಾಡಿತ್ತು. ದಾಳಿಗಾರರು ರಾಜಧಾನಿ ಶ್ರೀನಗರದಿಂದ ಬರಿ ೩೫ ಮೈಲಿನೊಳಗೆ ಬಂದಿದ್ದರು.

ಭಾರತದ ಸರಕಾರದ ಸಂರಕ್ಷಣ ಸಮಿತಿಯ ಮೇಲೆ ಈ ಅನಿರೀಕ್ಷಿತ ಸುದ್ದಿಯ ಆಘಾತ ಪ್ರಚಂಡವೇ ಆಗಿತ್ತು. ಇದು ಪಾಕಿಸ್ತಾನದಿಂದಾದ ಹೇಯ ಆಕ್ರಮಣವೇ ಸೈ. ಕಾಶ್ಮೀರವು ಪಾಕಿಸ್ತಾನದಲ್ಲಿ ಸೇರ್ಪಡೆ ಹೊಂದಬಯಸಿದ್ದರೆ ಭಾರತ ಸರಕಾರ ಅದಕ್ಕೇನೂ ಆಕ್ಷೇಪಿಸುತ್ತಿದ್ದಿಲ್ಲ. ಮಹಾರಾಜ ಹರಿಸಿಂಗರಿಗೆ ಭಾರತ ಸರಕಾರ ತನ್ನೀ ಅಭಿಪ್ರಾಯವನ್ನು ಎಂದೋ ಸ್ಪಷ್ಟವಾಗಿ ತಿಳಿಸಿತ್ತು. ಆದರೆ ಕಾಶ್ಮೀರದ ಸೇರ್ಪಡೆ ಪಡೆಯಲು ಈ ಕೊಲೆ ಸುಲಿಗೆ ದಾರಿಯೆ? ಕಾಶ್ಮೀರ ಸರಕಾರ ಆತ್ಮರಕ್ಷಣೆಗಾಗಿ ಬೇಡಿದ್ದ ಶಸ್ತ್ರಾಸ್ತ್ರಗಳನ್ನು ಕೂಡಲೆ ಕಳಿಸಲು ಸಮಿತಿ ನಿರ್ಣಯಿಸಿತು.

ಸಂರಕ್ಷಣ ಸಮಿತಿಯು ಕಾಶ್ಮೀರ ರಕ್ಷಣೆಗೆ ಭಾರತೀಯ ಸೈನ್ಯವನ್ನು ಕೂಡಲೆ ಕಳಿಸಬೇ-

ಕೆಂದಿತ್ತು. ಆದರೆ ಗವರ್ನರ ಜನರಲ್ಲರಾಗಿದ್ದ ಮೌಂಟ್‌ಬ್ಯಾಟನ್ನರು ಅದು ಸರಿಯಾಗದೆಂದರು. ಕಾಶ್ಮೀರ ಮಹಾರಾಜರು ಭಾರತಕ್ಕೆ ಸೇರ್ಪಡೆ ಹೊಂದುವ ಪತ್ರ ಬರೆದುಕೊಟ್ಟ ಹೊರತು ಭಾರತದ ಸೈನ್ಯಕ್ಕೆ ಕಾಶ್ಮೀರವನ್ನು ಪ್ರವೇಶಿಸಲು ಅಧಿಕಾರ ಬಾರದು. ಪ್ರವೇಶಿಸಿದರೆ ಈಗ ಅಪ್ರತ್ಯಕ್ಷವಾಗಿದ್ದ ದಾಳಿಯನ್ನು ಪ್ರತ್ಯಕ್ಷವಾಗಿಯೇ ಪಾಕಿಸ್ತಾನ ಪ್ರಾರಂಭಿಸೀತು ಎಂದು ಅವರು ವಾದಿಸಿದರು. ಅಂದಿನ ರಾತ್ರಿ ಏನೂ ನಿರ್ಣಯವಾಗಲಿಲ್ಲ. ಸಂಸ್ಥಾನಶಾಖೆಯ ವಿ. ಪಿ. ಮೆನನ್ನರನ್ನು ಶ್ರೀನಗರಕ್ಕೆ ವಿಮಾನದಲ್ಲಿ ಕಳಿಸಿ ಪರಿಸ್ಥಿತಿಯನ್ನು ತಿಳಿದುಕೊಳ್ಳಬೇಕೆಂದು ತೀರ್ಮಾನಿಸಲಾಯಿತು.

ಮರುದಿನ ಶ್ರೀನಗರದಿಂದ ಮೆನನ್ನರು ತಂದ ಸುದ್ದಿ ಇನ್ನಷ್ಟು ಗಂಭೀರವಾಗಿತ್ತು. ಮಹಾರಾಜರು ಕಂಗೆಟ್ಟಿದ್ದರು. ಭಾರತದ ಸಹಾಯ ಬಾರದಿದ್ದರೆ ಸರ್ವನಾಶ ಕಟ್ಟಿಟ್ಟದ್ದೆಂದು ಅವರಿಗೆ ಖಂಡಿತವಾಗಿತ್ತು. ಶ್ರೀನಗರದಲ್ಲಿ ಇದ್ದ ಕಾಶ್ಮೀರ ಸಂಸ್ಥಾನದ ಪಡೆಯೆಂದರೆ ಅಶ್ವದಳದ ಒಂದು ತುಕಡಿ ಮಾತ್ರ. ಸುಸಜ್ಜಿತರಾಗಿ ನುಗ್ಗುತ್ತಿದ್ದ ಸಾವಿರಗಟ್ಲೆ ದಾಳಿಗಾರರನ್ನು ತಡೆಯುವುದು ಅದರಿಂದ ಕನಸಿನಲ್ಲಿಯೂ ಆಗದು. ಆಗಲೇ ಆಕ್ರಮಣಕಾರರು ಬಾರಾಮುಲಾ ತನಕ ಬಂದುಬಿಟ್ಟಿದ್ದರು.

ಕಾಶ್ಮೀರವು ಭಾರತವನ್ನು ಸೇರಿದ್ದು ಈ ಗಂಡಾಂತರ ಪರಿಸ್ಥಿತಿಯಲ್ಲಿ. ಪಾಕಿಸ್ತಾನದಿಂದಾದ ಈ ಬಲಾತ್ಕಾರದ ದೆಸೆಯಿಂದಲೇ ಮಹಾರಾಜರು ಭಾರತದ ಆಶ್ರಯ ಪಡೆಯಲು ಸೇರ್ಪಡೆ ಪತ್ರಕ್ಕೆ ಅಂಕಿತವಿಕ್ಕಿದರು. ಇದು ೧೯೪೭ ಅಕ್ಟೋಬರ ೨೬ರಂದು.

ವಿ. ಪಿ. ಮೆನನ್ನರು ಸೇರ್ಪಡೆ ಪತ್ರಕ್ಕೆ ಅಂಕಿತ ತಂದ ಮೇಲೆ ಭಾರತ ಸರಕಾರ ಹಿಂದೆಮುಂದೆ ನೋಡಲಿಲ್ಲ. ತಾ॥ ೨೭ ನಸುಕಿಗೆ ಭಾರತದ ಪಡೆಗಳು ವಿಮಾನಗಳಿಂದ ಶ್ರೀನಗರದಲ್ಲಿ ಇಳಿಯತೊಡಗಿದವು. ಏನೇನೂ ಪೂರ್ವ ಯೋಜನೆಯಿಲ್ಲದೆ, ಅಪ್ಪೆತ್ತರದ ಪ್ರದೇಶದಲ್ಲಿ ವಿಮಾನ ಮೂಲಕ ಸೈನ್ಯವನ್ನು ಯಶಸ್ವಿಯಾಗಿ ಇಳಿಸಿದ್ದು ಮಿಲಿಟರಿ ಇತಿಹಾಸದಲ್ಲಿಯೆ ಅದ್ಭುತ ಸಾಹಸವೆಂದು ತಜ್ಞರು ಹೊಗಳಿದ್ದಾರೆ. ಭಾರತದ ಸೈನ್ಯ ನೇರವಾಗಿ ಬಾರಾಮುಲಾ ರಸ್ತೆಯಲ್ಲಿ ಮುನ್ನುಗ್ಗಿತು. ಇಡೀ ಕಾಶ್ಮೀರ ಕಂದರಕ್ಕೆ ಅಮಾನುಷ ಅತ್ಯಾಚಾರವಾಗುವುದನ್ನು ಭಾರತವು ತಪ್ಪಿಸಿತು.

ಈಗ ಆಶ್ಚರ್ಯಪಡುವ ಸರತಿ ಬಂದದ್ದು ಜಿನ್ನಾ ಸಾಹೇಬರಿಗೆ. ಅವರು ಲಾಹೋರಿನಲ್ಲಿದ್ದರು. ಅಬಟಾಬಾದಿನಿಂದ ಶ್ರೀನಗರಕ್ಕೆ ವಿಜಯದ ಮೆರವಣಿಗೆ ತೆಗೆಯುವ ವ್ಯವಸ್ಥೆಯಲ್ಲಿ ಅವರಿದ್ದರು. ಭಾರತದ ಸೈನ್ಯ ಕಾಶ್ಮೀರದಲ್ಲಿ ಪ್ರವೇಶಿಸಿದ್ದನ್ನು ಕೇಳಿ ಅವರಿಗೆ ಅಗಾಧ ಸಿಟ್ಟು ಬಂತು. ಕಾಶ್ಮೀರದ ದಾಳಿಯನ್ನು ತಡೆಯಲು ಭಾರತಕ್ಕೆ ಧೈರ್ಯ ಬರಲಾರದೆಂದೇ ಅವರು ಬಗೆದಿದ್ದರು. ಅದು ಇಷ್ಟು ವೇಗವಾಗಿ ಕಾಶ್ಮೀರದಲ್ಲಿಳಿದು ತಮ್ಮ ಯೋಜನೆಗಳನ್ನು ನಿರರ್ಥಕಗೊಳಿಸಬಹುದೆಂಬ ಲೆಕ್ಕಾಚಾರವಂತೂ ಅವರ ಕಲ್ಪನೆಗೆ ಹೊಳೆದೇ ಇದ್ದಿಲ್ಲ.

ಜಿನ್ನಾ ಸಾಹೇಬರು ಕೋಪೋದ್ರೇಕದಿಂದ ರಾವಳಪಿಂಡಿಗೆ ಟೆಲಿಫೋನ್ ಮಾಡಿದರು. "ಝೀಲಂ ಕೊಳ್ಳಕ್ಕೆ ನಮ್ಮ ಸೈನ್ಯವನ್ನೇ ಕಳಿಸಿರಿ!" ಎಂದು ಅವರು ಜನರಲ್ ಗ್ರೇಸಿಯವರಿಗೆ ಅಪ್ಪಣೆಕೊಟ್ಟರು. ಅವರ ಕಾಯದೆ ಪಾಂಡಿತ್ಯ ಆ ಗಳಿಗೆಯಲ್ಲಿ ಎಲ್ಲೋ ಓಡಿಬಿಟ್ಟಿತ್ತು. ಕಾಯದೆಯ ಮನೆ ಹಾಳಾಗ! ಅಪ್ರತ್ಯಕ್ಷ ದಾಳಿಯಿಂದಾಗದಿದ್ದರೆ ಪ್ರತ್ಯಕ್ಷ ದಾಳಿಯೇ ಆಗಲಿ! ಹೇಗಾದರೂ ಕಾಶ್ಮೀರ ಪಾಕಿಸ್ತಾನಕ್ಕೆ ಸೇರಲೇಬೇಕು!

ಜಿನ್ನಾರಿಗೆ ಸಿಟ್ಟು ಬಂದದ್ದು ಸಹಜವೇ. ಅವರು ಯಾವಾಗಲೂ ಕಾಯದೆಶೀರು ಮಾತಿನಿಂದ ಕಾಂಗ್ರೆಸ್ಸನ್ನು ಕಷ್ಟಕ್ಕೆ ಸಿಲುಕಿಸಿ ಗೆದ್ದಿದ್ದರು. ಜುನಾಗಡದ ನವಾಬ ಪಾಕಿಸ್ತಾನಕ್ಕೆ ಸೇರ್ಪಡೆಹೊಂದಿದಾಗ ಅದು ಕಾಯದೆಬದ್ಧವೆಂದು ಅವರು ಸಾಧಿಸಿದ್ದರು. ಈಗ ಕಾಶ್ಮೀರದ ಮಹಾರಾಜರು ಭಾರತಕ್ಕೆ ತಮ್ಮ ಸಂಸ್ಥಾನವನ್ನು ಸೇರಿಸಿದ್ದಕ್ಕೆ ಅವರು ಯಾವ ಬಾಯಿ

# ಮರೆಯಲಾರದ ಬಲಿದಾನ

ಮಾರ್ಗರೇಟ್ ಬರ್ಕ್-ವೈಟರ Halfway to Freedom ಗ್ರಂಥದಿಂದ

ಬಾರಾಮುಲಾದಲ್ಲಿ ಜನರು ಧಾರ್ಮಿಕ ಸಹಿಷ್ಣುತೆಯ ತತ್ವಕ್ಕಾಗಿ ಪ್ರಾಣಾರ್ಪಣ ಮಾಡಿದ ಒಬ್ಬ ಕಾಶ್ಮೀರಿ ಮುಸ್ಲಿಂ ಅಂಗಡಿಗಾರನ ಸಮಾಚಾರ ಹೇಳಿದರು. ಅವನ ಬಲಿದಾನವು ಅಲ್ಲಿನ ಕ್ರೈಸ್ತ ಸನ್ಯಾಸಿನೀಮಠದ ಗೋಡೆಗಳ ನೆರಳಲ್ಲೇ ನಡೆಯಿತೆನ್ನಬಹುದು. ನಿಷ್ಠಾವಂತ ಕಾಶ್ಮೀರಿಗಳ ಮನಸಿನಲ್ಲಿ ಅವನು ಒಬ್ಬ ಸಂತನಾಗಿ ನೆಲಸಿಬಿಟ್ಟಿದ್ದಾನೆ.

ಆಗ ಪಾಕಿಸ್ತಾನಿ ಗುಡ್ಡಗಾಡು ಜನರು ಕಾಶ್ಮೀರದ ಮೇಲೆ ದಾಳಿಮಾಡಿ ಹಳ್ಳಿಗಳಲ್ಲಿ ಕೊಲೆ ಸುಲಿಗೆ ಪ್ರಾರಂಭಿಸಿದ್ದರು. ಕಾಶ್ಮೀರ ಕೊಳ್ಳದ ಪ್ರತಿಯೊಂದು ಕಾಲ್ದಾರಿಯನ್ನು ಬಲ್ಲ ಅಂಗಡಿಗಾರ ಶೆರ್ವಾನಿ ಮುತ್ತಿಗೆಗೊಳಗಾದ ಹಳ್ಳಿಗರಲ್ಲಿ ಧೈರ್ಯವನ್ನು ತುಂಬುವ ಸಾಹಸದಲ್ಲಿ ತೊಡಗಿದನು. ಹಿಂದುಗಳಿರಲಿ, ಮುಸ್ಲಿಮರಿರಲಿ, ಸೀಖರಿರಲಿ ಎಲ್ಲರೂ ಒಂದಾಗಿ ದಾಳಿಗಾರರನ್ನು ಪ್ರತಿಭಟಿಸಬೇಕೆಂದು ಅವನು ಹುರಿದುಂಬಿಸಿದನು. ಭಾರತದ ಸೈನ್ಯವೂ ಕಾಶ್ಮೀರದ ಜನತಾಸೇನೆಯೂ ಸಹಾಯ ನೀಡಲು ಹೊರಟಿವೆಯೆಂದು ಧೈರ್ಯಕೊಟ್ಟನು.

ಮೂರು ಸಲ ಅವನು ಬಲು ಕೌಶಲದಿಂದ ಸುದ್ದಿಗಳನ್ನು ಹಬ್ಬಿಸಿ ದಾಳಿಗಾರರ ತಂಡಗಳು ಭಾರತದ ಕಾಲ್ದಳಗಳ ಕೈಯಲ್ಲಿ ಸಿಕ್ಕಿಬೀಳುವಂತೆ ಮಾಡಿದನು. ಆದರೆ ನಾಲ್ಕನೇ ಬಾರಿ ಅವನು ಸ್ವತಃ ಸಿಕ್ಕಿಬಿದ್ದನು.

ಪಾಕಿಸ್ತಾನಿ ದಾಳಿಗಾರರು ಶೆರ್ವಾನಿಯನ್ನು ತಮ್ಮ ಬಂದೂಕುಗಳಿಂದ ದೂಡುತ್ತ ಪಟ್ಟಣದ ಕೂಟಿನಲ್ಲಿದ್ದ ಒಂದು ಅಂಗಡಿಯ ಜಗಲಿಗೆ ಒಯ್ದರು. ಅವನು ಊರಲ್ಲಿ ತುಂಬ ಜನಪ್ರಿಯನೆಂದು ಅವರಿಗೆ ಗೊತ್ತಿತ್ತು. ಆದ್ದರಿಂದ "ಪಾಕಿಸ್ತಾನದಲ್ಲಿ ಸೇರುವುದೇ ಕಾಶ್ಮೀರಿ ಮುಸ್ಲಿಮರಿಗೆ ಹಿತ" ಎಂದು ಬಹಿರಂಗವಾಗಿ ಸಾರಲು ಅವನಿಗೆ ಆಜ್ಞಾಪಿಸಿದರು. ಶೆರ್ವಾನಿ ಅವರನ್ನು ಧಿಕ್ಕರಿಸಿದನು. ಆಗ ಅವರು ಅವನನ್ನು ಅಲ್ಲಿದ್ದ ಕಂಬಕ್ಕೆ ಹಗ್ಗದಿಂದ ಬಿಗಿದರು. ಅವನ ಕೈಗಳನ್ನು ಕ್ರಿಸ್ತನ ಸಿಲುಬೆಯಾಕೃತಿಯಲ್ಲಿ ಕಟ್ಟಿದರು. "ಪಾಕಿಸ್ತಾನ ಜಿಂದಾಬಾದ್! ಶೇರೇಕಾಶ್ಮೀರ ಮುರ್ದಾಬಾದ್" ಎಂದು ಘೋಷಿಸಲೇಬೇಕೆಂದು ದಬಾಯಿಸತೊಡಗಿದರು.

ಗುಡ್ಡಗಾಡು ಜನರು ಆ ಬಳಿಕ ಮಾಡಿದ ಕೃತಿ ವಿಚಿತ್ರವಾಗಿತ್ತು. ಅಲ್ಲೇ ಗುಡ್ಡದ ಮೇಲಿದ್ದ ಸಂತ ಜಾಸೇಫ ಪ್ರಾರ್ಥನಾಮಂದಿರದಲ್ಲಿದ್ದ ಸಂತರ ಮೂರ್ತಿಗಳನ್ನು ನೋಡಿಯೇ ಅವರಿಗೆ ಹಾಗೆ ಸ್ಫೂರ್ತಿ ಬಂದಿರಬಹುದು. ಅವರು ಶೆರ್ವಾನಿಯ ಅಂಗೈಗಳೆರಡಕ್ಕೂ ಮೊಳೆಗಳನ್ನು ಬಡಿದರು. ಅವನ ಹಣೆಗೆ ಒಂದು ಡಬ್ಬಿತಗಡನ್ನು ಹಚ್ಚಿ ಅದರ ಮೇಲೆ, "ದ್ರೋಹಿಗೆ ಮರಣದಂಡನೆಯೇ ಯೋಗ್ಯ" ಎಂದು ಬರೆದರು.

ಶೆರ್ವಾನಿ ಮತ್ತೆ ಘೋಷಿಸಿದ: "ಹಿಂದೂ ಮುಸ್ಲಿಂ ಐಕ್ಯಕ್ಕೆ ಜಯವಾಗಲಿ!" ತತ್‌ಕ್ಷಣ ಹದಿನಾಲ್ಕು ಜನ ದಾಳಿಗಾರರು ಅವನ ಮೇಲೆ ಗುಂಡುಗಳನ್ನು ಹಾರಿಸಿದರು.

---

ಯಿಂದ ಆಕ್ಷೇಪಿಸಲಾದೀತು? ಅವರ ಕಾಯದೆ ಅವರ ಕಾಲಿಗೇ ತೊಡಕು ಬಿತ್ತೆಂದು ಕ್ಯಾಂಬೆಲ್ ಜಾನ್ಸನ್ ಬರೆದಿದ್ದಾರೆ.

ಜಿನ್ನಾರಿಗೆ ಮತ್ತೊಂದು ಸೋಲು ಕಾದಿತ್ತು. ಜನರಲ್ ಗ್ರೇಸಿಯವರು ಕಾಶ್ಮೀರಕ್ಕೆ ಪಾಕ್‌ಸೈನ್ಯವನ್ನು ಕಳಿಸಲು ಒಪ್ಪಲಿಲ್ಲ. ಭಾರತ ಪಾಕಿಸ್ತಾನಗಳೆರಡರ ಸೈನ್ಯಗಳಿಗೂ ಆಗ ಆಚಿನ್‌ಲೆಕ್ಕರು ಅಧಿಪತಿಯಾಗಿದ್ದರು. ಅವರ ಅನುಮತಿ

ಪಡೆದ ಹೊರತು ಜಿನ್ನಾರ ಅಪ್ಪಣೆಯನ್ನು ಪಾಲಿಸಲು ಜನರಲ್ ಗ್ರೇಸಿ ನಿರಾಕರಿಸಿದರು.

ಮರುದಿನ (ತಾ. ೨೮) ಆಚಿನ್ ಲೆಕ್ಕರು ಲಾಹೋರಿಗೆ ಹೋದರು. ಅವರೂ ಗ್ರೇಸಿಯವರೂ ಸೇರಿ ಜಿನ್ನಾ ಸಾಹೇಬರ ತಲೆಯನ್ನು ಸ್ತಿಮಿತಕ್ಕೆ ತಂದರು. ಕಾಶ್ಮೀರವು ಕಾಯದೆಬದ್ಧವಾಗಿ (ಜಿನ್ನಾರೇ ಹೇಳಿದ್ದ ಕಾಯದೆ!) ಭಾರತದಲ್ಲಿ ಸೇರ್ಪಡೆಹೊಂದಿದೆ. ಅಲ್ಲಿ ಸೈನ್ಯ ಕಳಿಸಲು ಭಾರತಕ್ಕೆ ಹಕ್ಕಿದೆ. ಪಾಕಿಸ್ತಾನದ ಸೈನ್ಯ ಕಳಿಸಿದ್ದಾದರೆ ಎರಡು ರಾಷ್ಟ್ರಗಳಲ್ಲಿ ನೇರವಾದ ಯುದ್ಧವಾದೀತು. ಆಗ ಭಾರತದ ಸೈನ್ಯವನ್ನೆದುರಿಸುವ ಶಕ್ತಿ ಪಾಕಿಸ್ತಾನಕ್ಕಿದೆಯೆ? ಭಾರತ ನೇರವಾಗಿ ಪಶ್ಚಿಮ ಪಂಜಾಬದ ಮೇಲೆಯೇ ದಾಳಿಮಾಡಬಹುದು, ಎಂದವರು ಹೇಳಿದರು.

ಜಿನ್ನಾರಿಗೆ ಆಗ ವಿವೇಕೋದಯವಾಯಿತು. ಅವರು ಸೋಲೊಪ್ಪಿಕೊಂಡು ಸೈನ್ಯ ಕಳಿಸುವ ವಿಚಾರಕ್ಕೆ ತಿಲಾಂಜಲಿ ಕೊಡಬೇಕಾಯಿತು. ಆದರೆ ಕಾಶ್ಮೀರವು ಭಾರತದಲ್ಲಿ ಸೇರ್ಪಡೆ ಹೊಂದಿದ್ದನ್ನು ಪಾಕಿಸ್ತಾನ ಎಂದೂ ಒಪ್ಪಲಾರದೆಂದು ಅವರು ಸಾರದೆ ಬಿಡಲಿಲ್ಲ. "ಈ ಸೇರ್ಪಡೆ ಹಿಂಸೆ ಮತ್ತು ಮೋಸದಿಂದ ಪಡೆದದ್ದಾಗಿದೆ" ಎಂದು ಅವರು ಆಕ್ರೋಶ ಮಾಡಿದರು.

ನವಂಬರ ೧ ರಂದು ಮೌಂಟಬ್ಯಾಟನ್ನರೂ ಜಿನ್ನಾರೂ ಲಾಹೋರಿನಲ್ಲಿ ಮಾತುಕತೆ ನಡೆಸಿದಾಗ ಜಿನ್ನಾರು ಈ ಹಿಂಸೆ-ಮೋಸಗಳ ಪಲ್ಲವಿ




ಇಂದು ಕಾಶ್ಮೀರದ ಮೂರರಲ್ಲೊಂದಂಶ (ಪಶ್ಚಿಮ-ವಾಯುವ್ಯ ಭಾಗ) ಪಾಕಿಸ್ತಾನದ ವಶದಲ್ಲಿದೆ.

ಯನ್ನು ಪುನಃ ಪುನಃ ಹಾಡಿದರು. ತಲೆಚಿಟ್ಟೇರಿ ಮೌಂಟಬ್ಯಾಟನ್ನರು ಉತ್ತರವಿತ್ತರು: "ನಿಜ. ಹಿಂಸೆಯಿಂದ ಈ ಸೇರ್ಪಡೆ ಸಾಧ್ಯವಾಯಿತೆಂಬುದು ನಿಜ. ಆದರೆ ಹಿಂಸೆ ಬಂದದ್ದು ನಿಮ್ಮ ಕಡೆಯಿಂದ!" ಜಿನ್ನಾರು ಈ ಮಾತಿನ ಪೆಟ್ಟು ತಾಳಲಾರದೆ ಮೌಂಟಬ್ಯಾಟನ್ನರದು ವಕ್ರಬುದ್ಧಿಯೆಂದು ತೆಗಳಿದರಂತೆ!

ಕಾಶ್ಮೀರ ಮಹಾರಾಜರೂ ಭಾರತವೂ ಗುಡ್ಡಗಾಡು ಜನರ ದಾಳಿಯ ಬಗ್ಗೆ ಪಾಕ ಸರಕಾರಕ್ಕೆ ದೂರು ಕಳಿಸಿದಾಗ ಪಾಕಿಸ್ತಾನದ ನಾಯಕರು ಗುಡ್ಡಗಾಡು ಜನರ ಕೃತಿಗೆ ತಾವು ಹೊಣೆಗಾರರಲ್ಲ; ತಾವು ಅವರಿಗೆ ನೆರವಾಗಿಲ್ಲ; ತಮಗೆ ಅವರನ್ನು ತಡೆಯುವ ಶಕ್ತಿಯಿಲ್ಲ; ಕಾಶ್ಮೀರದ ತಮ್ಮ ಜಾತಿಬಾಂಧವರ ವಿಮೋಚನೆಗಾಗಿ ಸ್ವಯಂಪ್ರೇರಣೆಯಿಂದ ಅವರು ಕಾಶ್ಮೀರದಲ್ಲಿ ನುಗ್ಗಿದ್ದಾರೆ, ಎಂದು ಬಹಿರಂಗವಾಗಿ ಸಾರಿದ್ದರು.

ಆದರೆ ನವೆಂಬರ ೨ ರಂದು ಜಿನ್ನಾ—ಮೌಂಟ್‌ಬ್ಯಾಟನ್ ಸಂದರ್ಶನದಲ್ಲಿ ಜಿನ್ನಾರ ಬಾಯಿಂದಲೇ ಈ ಹೇಳಿಕೆಯ ಠಕ್ಕುತನ ಹೊರಬಿತ್ತೆಂದು ಕ್ಯಾಂಬೆಲ್ ಜಾನ್ಸನ್ನರು Mission with Mountbatten ಪುಸ್ತಕದಲ್ಲಿ ಬರೆದಿದ್ದಾರೆ:

"ಶ್ರೀನಗರವು ದಾಳಿಗಾರರ ವಶವಾದೀತೆಂಬ ಆಶೆಯನ್ನು ಬಿಟ್ಟುಬಿಡಿ" ಎಂದು ಜಿನ್ನಾರಿಗೆ ಮೌಂಟ್‌ಬ್ಯಾಟನ್ ಹೇಳಿದರು. ಆಗ ಜಿನ್ನಾರವರು, "ನೀವು ಭಾರತದ ಸೈನ್ಯವನ್ನು ಹಿಂತೆಗೆದುಕೊಳ್ಳುವುದಾದರೆ ನಾನು ಗುಡ್ಡಗಾಡು ಜನರ ದಾಳಿಯನ್ನು ಹಿಂದೆ ಕರೆಯುತ್ತೇನೆ" ಎಂದರು. ಆಗ, "ಗುಡ್ಡಗಾಡು ಜನ ನಿಮ್ಮ ಅಂಕೆಯಲ್ಲಿಲ್ಲ ಎಂದು ಸಾರುತ್ತಿದ್ದೀರಿ. ಈಗ ಅವರನ್ನು ಹಿಂತೆಗೆದುಕೊಳ್ಳಲು ಹೇಗೆ ನಿಮಗೆ ಸಾಧ್ಯವಾಗುತ್ತದೆ?" ಎಂದು ಮೌಂಟಬ್ಯಾಟನ್ ಕೇಳಿಯೇಬಿಟ್ಟರು.

# ಕಾಶ್ಮೀರ ದಾಳಿಯನ್ನು ಪಾಕಿಸ್ತಾನ ಹೇಗೆ ಯೋಜಿಸಿತು?

ಭಾರತ ಸರಕಾರವು ಕಾಶ್ಮೀರ ವಿಷಯದಲ್ಲಿ ಯಾವ ದ್ರೋಹಚಿಂತನೆಯನ್ನೂ ಮಾಡದೆ ಸುಮ್ಮನೆ ಕುಳಿತಿದ್ದಾಗ ಪಾಕಿಸ್ತಾನವು ಗುಡ್ಡಗಾಡಿನವರಿಂದ ಕಾಶ್ಮೀರದ ಮೇಲೆ ದಾಳಿಮಾಡಿಸಲು ಒಳಗಿಂದೊಳಗೇ ನಡೆಸಿದ ಹಂಚಿಕೆಯ ಪೂರ್ಣ ಕಥೆ ಹೊರಬಿದ್ದಾಗ ಅದು ಹಿಟ್ಲರನ ಯೋಜನೆಯಷ್ಟೇ ಅದ್ಭುತವಾಗಿ ಕಾಣಿಸಬಹುದು. ಪಾಕಿಸ್ತಾನಿ ನಾಯಕರೇ ಬಾಯಿಬಿಟ್ಟ ಹೊರತು ಅದರ ಇಡೀ ಕಥೆ ಜಗತ್ತಿಗೆ ಗೊತ್ತಾಗುವುದು ಸಂಶಯವೇ. ಆದರೆ ಈಗ ಹೊರಬಿದ್ದಿರುವ ತಥ್ಯಗಳೇ ಈ ಅಮಾನುಷ ದಾಳಿಯಲ್ಲಿ ಪಾಕಿಸ್ತಾನದ ಅಂಗವಿಚ್ಛಿತ್ತೆಂಬುದನ್ನು ನಿಸ್ಸಂದಿಗ್ಧವಾಗಿ ತೋರಿಸುತ್ತವೆ.

ಕಾಶ್ಮೀರದ ದುರ್ದೈವ ಬಹುಸಂಖ್ಯಾಕ ಮುಸ್ಲಿಂ ಸಂಸ್ಥಾನಕ್ಕೆ ಹಿಂದೂ ಅರಸನಿದ್ದುದು. ಮುಸ್ಲಿಂ ಬಹುಸಂಖ್ಯಾಕ ಸಂಸ್ಥಾನ ತನಗೇ ಸೇರಬೇಕೆಂದು ಪಾಕಿಸ್ತಾನ ಎಣಿಸಿತ್ತು. ಆದರೆ ಹಿಂದೂ ಮಹಾರಾಜ ಪಾಕಿಸ್ತಾನಕ್ಕೆ ಸೇರಲು ಸಿದ್ಧನಿರಲಿಕ್ಕಿಲ್ಲೆಂಬ ಸಂಶಯವೂ ಅದಕ್ಕಿತ್ತು. ಕಾಶ್ಮೀರದ ಪ್ರಬಲ ರಾಷ್ಟ್ರೀಯ ಪರಿಷತ್ತು ಜಾತೀಯತೆಗೆ ವಿರುದ್ಧವಾಗಿತ್ತು. ಆದ್ದರಿಂದ ಜನತೆಯನ್ನು ಹುರಿದುಂಬಿಸಿಯೂ ಪಾಕಿಸ್ತಾನಕ್ಕೆ ಕಾಶ್ಮೀರವನ್ನು ಎಳೆದುಕೊಳ್ಳುವುದು ಕಷ್ಟವೆಂದು ಪಾಕಿಸ್ತಾನದ ಜಾತೀಯವಾದಿಗಳಿಗೆ ಭಯವಿದ್ದಿರಬೇಕು.

ಕಾಶ್ಮೀರವು ಭಾರತಕ್ಕೆ ಸೇರಿದರೂ ಸರಿ, ಪಾಕಿಸ್ತಾನದಲ್ಲಿ ಸೇರ್ಪಡೆಹೊಂದಬಯಸುತ್ತಿದ್ದರೂ ಸರಿ; ಭಾರತದ ಆಕ್ಷೇಪವೇನೂ ಇದ್ದಿಲ್ಲ. ಆದರೆ ಮಹಾರಾಜರು ದುರ್ದೈವದಿಂದ ಮೀನಮೇಷ ಎಣಿಸುತ್ತ ಹೊತ್ತು ಕಳೆದರು. ಭಾರತಕ್ಕೂ ಪಾಕಿಸ್ತಾನಕ್ಕೂ ಸೇರದೆ ಸ್ವತಂತ್ರ ಕಾಶ್ಮೀರ ರಾಜ್ಯ ಸ್ಥಾಪಿಸಿದರೆ ಹೇಗೆ ಎಂಬ

ಹುಚ್ಚು ವಿಚಾರ ಮಹಾರಾಜ ಹರಿಸಿಂಗರ ತಲೆಯಲ್ಲಿ ಸುಳಿಯುತ್ತಿತ್ತು. ಪಾಕಿಸ್ತಾನದಲ್ಲಿ ತಮ್ಮ ಮನೆತನದ ಭವಿಷ್ಯ ನೆಟ್ಟಗಾಗಲಿಕ್ಕಿಲ್ಲೆಂಬ ಸಂಶಯವೂ ಅವರನ್ನು ಕಾಡುತ್ತಿರಬೇಕು. ಹೀಗೆ ಅವರು ಅನಿಶ್ಚಿತತೆಯಲ್ಲಿ ತೂಗಾಡುತ್ತಿದ್ದಾಗ ಪಾಕಿಸ್ತಾನದಲ್ಲಿ, ಕಾಶ್ಮೀರವನ್ನು ಒಳಸಂಚಿನಿಂದ, ಹಿಂಸೆಯಿಂದ ಕಸಿದುಕೊಳ್ಳುವ ಸಿದ್ಧತೆ ಭರದಿಂದ ನಡೆದಿತ್ತು.

ಸ್ವಾತಂತ್ರ್ಯ ಬಂದು ಹತ್ತು ದಿನ ಕಳೆಯುವ ಮೊದಲೇ ಜಿನ್ನಾ ಸಾಹೇಬರ "ಡಾನ್" ಪತ್ರಿಕೆ ಮಹಾರಾಜರ ವಿರುದ್ಧ ಗುಡುಗು ಹಾಕಿ, ಮಹಾರಾಜರು ಪಾಕಿಸ್ತಾನದಲ್ಲಿ ಕಾಶ್ಮೀರವನ್ನು ಸೇರಿಸಲು ಇನ್ನು ತಡ ಮಾಡಿದರೆ ಪರಿಣಾಮ ನೆಟ್ಟಗಾಗದು, ಎಂಬರ್ಥದ ಎಚ್ಚರಿಕೆ ಕೊಟ್ಟಿತ್ತು. ಆದರೆ ಮಹಾರಾಜರು ಇದನ್ನು ಗಮನಿಸಿ ಪಾಕಿಸ್ತಾನಕ್ಕೆ ಸೇರ್ಪಡೆ ಹೊಂದಲೂ ಇಲ್ಲ, ಭಾರತದ ರಕ್ಷಣೆ ಪಡೆಯಲೂ ಇಲ್ಲ.

ಕಾಶ್ಮೀರವನ್ನು ಕಬಳಿಸುವ ಹಂಚಿಕೆಗೆ ೧೯೪೭ ಅಗಸ್ಟ ೧೫ ರ ಮೊದಲೇ ಪೀಠಿಕೆ ಬಿದ್ದಿತ್ತು. ಪಾಕ ಪಂಜಾಬಕ್ಕೆ ಹತ್ತಿದ ಕಾಶ್ಮೀರದ ಜಿಲ್ಲೆಗಳಲ್ಲಿ ಪಾಕಿಸ್ತಾನ ಪರವಾದ "ಅಜಾದ ಕಾಶ್ಮೀರ" ಚಳವಳಿಯನ್ನು ಉಗ್ರವಾಗಿ ಪ್ರಚೋದಿಸಲಾಗಿತ್ತು. ೧೯೪೭ ವಸಂತಋತುವಿನಲ್ಲೇ ಪೂಂಚದಲ್ಲಿ ಮಹಾರಾಜರ ವಿರುದ್ಧ ಒಂದು ಬಂಡಾಯ ಎದ್ದಿತು. ಅದನ್ನು ಹತ್ತಿಕ್ಕಲು ಮಹಾರಾಜರ ಪಡೆಗಳಿಗೆ ಆಗ ಸಾಧ್ಯವಾಗಲಿಲ್ಲ. ಅಗಸ್ಟ ೧೫ ರಂದು ಪೂಂಚದ ಬಾಗ್ ಎಂಬ ಗ್ರಾಮದಲ್ಲಿ "ಪಾಕಿಸ್ತಾನ ದಿನ" ಆಚರಿಸಲ್ಪಟ್ಟಿತು. ಕಾಶ್ಮೀರವನ್ನು ಪಾಕಿಸ್ತಾನದಲ್ಲಿ ಸೇರಿಸಬೇಕೆಂಬುದು ಅದರ ಉದ್ದೇಶವಾಗಿತ್ತು. ಈ ಬಾರಿ ಹರಿಸಿಂಗರ ಪಡೆಗಳು ಈ ಬಂಡುಗಾರ ಚಟುವಟಿಕೆಗಳನ್ನು ಬಲವಾಗಿ ಹತ್ತಿಕ್ಕಿದವು.

ಈ ಮೊದಲೇ ಮುಸ್ಲಿಂ ಲೀಗಿನ ಕೈಗೊಂಬೆಗಳಾಗಿದ್ದ "ಆಜಾದ ಕಾಶ್ಮೀರ" ಚಳವಳಿಯ ಕಾರ್ಯಕರ್ತರು ಬಲಾತ್ಕಾರದಿಂದ ಕಾಶ್ಮೀರವನ್ನು ಪಾಕಿಸ್ತಾನಕ್ಕೆ ಸೇರಿಸುವ ಸನ್ನಾಹದಲ್ಲಿದ್ದರು. ಅವರು ಸುಮಾರು ೩೦,೦೦೦ ಜನರನು ಕೂಡಿಸಿದ್ದರು. ಅಗಸ್ಟಿನಲ್ಲಿಯೇ ಅವರು ಗಡಿನಾಡಿನ ಗುಡ್ಡಗಾಡುಗಳ ಕಾರಖಾನೆಗಳಲ್ಲಿ ಶಸ್ತ್ರಾಸ್ತ್ರಗಳನ್ನು ಕೊಳ್ಳತೊಡಗಿದ್ದರು. ಮಹಾರಾಜರ ಪಡೆಗಳು ದಕ್ಷಿಣ ಗಡಿಯಲ್ಲಿ ಝೀಲಂ ನದಿಯ ಮೇಲೆ ಕಾವಲು ನಿಂತಿದ್ದರೂ ಆಜಾದ ಕಾಶ್ಮೀರ ಚಳವಳಿಗಾರರು ಕೆಲವರಾದರೂ ಹರಿಗೋಲಲ್ಲಿ ನದಿ ದಾಟಿ ಗುಡ್ಡಗಾಡಿನ ಜನರೊಡನೆ ಸಂಪರ್ಕ ಬೆಳಸುವುದು ತಪ್ಪಲಿಲ್ಲ.

ಆಗಿಂದಲೇ ಗುಡ್ಡಗಾಡಿನಲ್ಲಿ ಅವ್ಯಾಹತ ಪ್ರಚಾರ ಸಾಗಿತ್ತು. ಕಾಶ್ಮೀರದ ಮುಸ್ಲಿಮರ ಮೇಲಾಗುತ್ತಿರುವ ಅತ್ಯಾಚಾರಗಳ ಹುಚ್ಚಾಬಟ್ಟೆ ಕಥೆಗಳನ್ನು ಪಸರಿಸಲಾಗಿತ್ತು. ಆಜಾದ ಕಾಶ್ಮೀರ ಕಾರ್ಯಕರ್ತರು ರೊಕ್ಕ ಸುರಿದು ಗುಡ್ಡಗಾಡಿನಲ್ಲಿ ಶಸ್ತ್ರಾಸ್ತ್ರಗಳನ್ನು ಕೊಳ್ಳುತ್ತಿದ್ದುದನ್ನು ನೋಡಿ ಕಾಶ್ಮೀರಕ್ಕೆ ಬಂದರೆ ಸುಲಿಗೆಗೆ ಧಾರಾಳ ಅವಕಾಶವುಂಟೆಂದೂ ಗುಡ್ಡಗಾಡಿನ ಜನರಿಗೆ ಆಸೆ ಹುಟ್ಟಿತು. ಆಗಲೇ ದಾಳಿಯ ಯೋಜನೆ ರೂಪುಗೊಂಡಿತು. ಒಂದೇ ಕಲ್ಲಿಂದ ಎರಡು ಹಕ್ಕಿಗಳು ಬೀಳುತ್ತಿದ್ದರೆ ಯಾಕಾಗಬಾರದು? ಅತ್ತ ಕಾಶ್ಮೀರದ ಮುಸ್ಲಿಮರ ಪರವಾಗಿ ಜೆಹಾದವೂ ಆಯಿತು, ಇತ್ತ ಕೊಳ್ಳೆಹೊಡೆಯುವ ಸಂಧಿಯೂ ಸಿಕ್ಕಿತು. ಧರ್ಮ ಅರ್ಥಗಳೆರಡೂ ಸಾಧಿಸಿದವೆಂದು ಗುಡ್ಡಗಾಡಿನ ಜನರು ಹಿಗ್ಗಿದರು.

ಪಾಕಿಸ್ತಾನ ಸರಕಾರಕ್ಕೂ ಇದೇ ಬೇಕಾಗಿತ್ತು. ಗಡಿನಾಡು ಪ್ರಾಂತದ ಗುಡ್ಡಗಾಡಿನ ಜನರು—ಮಹಮಂದ, ಮಹಸೂದ, ವಜೀರ, ಸ್ವಾತಿ, ಅಫ್ರಿದಿ ಮೊದಲಾದ ಕುಲಗಳು–ಬಲು ಉಗ್ರಜನರು. ಬ್ರಿಟಿಶರು ಒಂದೆಡೆ ಅವರ ಮೇಲೆ ಭೀಕರ ದಾಳಿಗಳನ್ನು ಮಾಡಿ, ಇನ್ನೊಂದೆಡೆ ವರ್ಷಕ್ಕೆ ೧೪ ಕೋಟಿ ರೂಪಾಯಿಯಷ್ಟು ಹಣವನ್ನು ಸುರಿದು ಅವರನ್ನು ತಕ್ಕ ಮಟ್ಟಿಗೆ ಶಾಂತವಾಗಿಟ್ಟಿದ್ದರು. ಆದರೆ ಪಾಕಿಸ್ತಾನದ ಹತ್ತಿರ ದಬ್ಬಾಳಿಕೆಯ ಸಾಧನವೂ ಇದ್ದಿಲ್ಲ, ಅಷ್ಟು ಹಣವೂ ಇದ್ದಿಲ್ಲ. ಆದ್ದರಿಂದ ಈ ಉಗ್ರ ಜನಾಂಗ

ಗಳು ಕಾಶ್ಮೀರದ ಮೇಲೆ ದಾಳಿ ಮಾಡಲು ಹೊರಟದ್ದು ನೋಡಿ ಅವರಿಗೆ ತುಂಬ ಆನಂದವೇ ಆಯಿತು. ಇದು ಭಾರತದ ಪ್ರಚಾರವಲ್ಲ; ಕಾಶ್ಮೀರ ಪಾಕಿಸ್ತಾನಕ್ಕೇ ಸಿಗಬೇಕೆಂದು ಒಂದು ಪುಸ್ತಕವನ್ನೇ ಬರೆದ ಲಾರ್ಡ್ ಬರ್ಡ್‌ವುಡ್ಡರ ಅಭಿಪ್ರಾಯ.

ಪಾಕಿಸ್ತಾನದ ಯಾವ ಯಾವ ನಾಯಕರು ಈ ಒಳಸಂಚಿನಲ್ಲಿ ಎಷ್ಟೆಷ್ಟು ಸೇರಿದ್ದರು? ಕೆಲ ಬ್ರಿಟಿಶ ಅಧಿಕಾರಿಗಳ ಪ್ರಕಾರ, ಜಿನ್ನಾರಿಗೆ ದಾಳಿಯ ಸುದ್ದಿ ಕೇಳಿ ಆಶ್ಚರ್ಯವಾಯಿತಂತೆ. ಆದರೆ ಬೇರೆ ಅಧಿಕಾರಿಗಳ ಅಭಿಪ್ರಾಯದಲ್ಲಿ "ಅವರಿಗೆ ಸುದ್ದಿಯೇನೋ ಮುಟ್ಟಿತ್ತಾದರೂ ಅವರು ಹೆಚ್ಚು ವಿವರಗಳನ್ನು ಕೇಳುವ ಗೋಜಿಗೆ ಹೋಗದೆ ತಮ್ಮ ಮನಸ್ಸಾಕ್ಷಿಯನ್ನು ಸಮಾಧಾನ ಪಡಿಸಿಕೊಂಡರಂತೆ."

ಪಾಕಿಸ್ತಾನಿ ಸೈನ್ಯದ ಅಧಿಕಾರಿಗಳಿಗೆ ದಾಳಿಯ ಸನ್ನಾಹ ಚೆನ್ನಾಗಿ ತಿಳಿದಿತ್ತು. ಇದನ್ನು ಅವರೇ ಒಪ್ಪಿದ್ದಾರೆಂದು ಬರ್ಡ್‌ವುಡ್ಡರು ಹೇಳುತ್ತಾರೆ. ಅವರಾದರೂ ದಾಳಿಯನ್ನು ತಡೆಗಟ್ಟಲು ಯತ್ನಿಸಿದರೇ? ಅದಕ್ಕೆ ಸಹಾಯವನ್ನೇ ಮಾಡಿದರು.

ದಾಳಿಗಾರರಿಗೆ ದೊರೆತ ಪಾಕಿಸ್ತಾನಿ ಅಧಿಕಾರಿಗಳ ಮತ್ತು ನಾಯಕರ ಸಹಾಯದ ಕಥೆಯನ್ನು ಬರ್ಡ್‌ವುಡ್ಡರಿಂದಲೇ ಕೇಳಿರಿ:

"ಗುಡ್ಡಗಾಡಿನ ದಾಳಿಗಾರರ ಹತ್ತಿರ ಇದ್ದ ಕೆಲ ಶಸ್ತ್ರಾಸ್ತ್ರಗಳನ್ನು ನೋಡಿದರೆ ಅವನ್ನು ಅವರೇ ತಮ್ಮ ಕಾರಖಾನೆಗಳಲ್ಲಿ ತಯಾರಿಸಲು ಸಾಧ್ಯವಿರಲಿಲ್ಲೆಂದು ಸ್ಪಷ್ಟವಾಗುತ್ತದೆ. ಅವು ಪಾಕಿಸ್ತಾನದ ಸೈನ್ಯದಿಂದಲೇ ದೊರೆತಿರಬೇಕು. ಸೈನ್ಯದವರು ಶಸ್ತ್ರಾಸ್ತ್ರಗಳನ್ನು ಪಾಕಿಸ್ತಾನಿ ಪಟ್ಟಣಗಳಲ್ಲಿ ಸ್ಥಾನಿಕ ಮುಸ್ಲಿಂಲೀಗಿನ ಕಚೇರಿಗಳ ಮೂಲಕ ದಾಳಿಗಾರರಿಗೆ ದಾಟಿಸುತ್ತಿದ್ದರು. ಲೀಗು ಸ್ಥಾನಮಾನವುಳ್ಳ ರಾಜಕೀಯ ಪಕ್ಷವಾದುದರಿಂದ ಇದು ಸುಲಭವಾಗಿತ್ತಾದರೂ ವಿವೇಕದ ಕ್ರಮವೆನ್ನಲು ಬಾರದು.

"ಪಾಕಿಸ್ತಾನದ ಸಹಾಯ ಸಾಕಷ್ಟಿತ್ತೆಂಬುದಕ್ಕೆ ಇತರ ಪ್ರಮಾಣಗಳೂ ಇವೆ. ಕೆಲ ವಾರಗಳ ವರೆಗೆ ಆಝಾದ ಕಾಶ್ಮೀರ ಪಡೆಯ ಪಕ್ಷದಲ್ಲಿ ಹೋರಾಡಿದ ಅಮೇರಿಕನ್ನನಾದ ರಸೆಲ್ ಹೈಟನು ಮುಂದೆ "ನ್ಯೂಯಾರ್ಕ್ ಟೈಮ್ಸ್"ನ ರಾಬರ್ಟ್ ಟ್ರಂಬುಲ್ಲರಿಗೆ ಕೊಟ್ಟ ಸಂದರ್ಶನದಲ್ಲಿ ಪಾಕಿಸ್ತಾನವು ದಾಳಿಗಾರರಿಗೆ ಪೆಟ್ರೋಲು, ಶಸ್ತ್ರಾಸ್ತ್ರ, ಆಹಾರ ಮತ್ತು ಇತರ ಆಡಳಿತ ಸೌಕರ್ಯಗಳನ್ನು ಪೂರೈಸಿ [ ಸರಕಾರಿ ಪುಸ್ತಕಗಳಲ್ಲಿ ] "ಕಳೆದು ಹೋದದ್ದು" ಎಂದು ಖರ್ಚು ಹಾಕಿ ಬಿಡುತ್ತಿತ್ತೆಂದು ಹೇಳಿದ್ದಾನೆ!

"ಮಮದೋತದ ನವಾಬರು ಸಂಗ್ರಹಿಸಿದ 'ಕಾಶ್ಮೀರ ನಿಧಿ' ಹೇಗೆ ವೆಚ್ಚಮಾಡಲ್ಪಟ್ಟಿತೆಂಬುದೂ ಸಂದಿಗ್ಧವಾಗಿಯೇ ಇದೆ. ೧೯೫೦ ರ ವರೆಗೂ ಅವರು ನಿಧಿಯ ಲೆಕ್ಕವನ್ನೇ ಪ್ರಕಟಿಸಲಿಲ್ಲ."

ಹೀಗಿರುವಾಗ ಪಾಕಿಸ್ತಾನವು ದಾಳಿಗಾರರಿಗೆ ನೆರವಾಗಿಲ್ಲ. ಅವರನ್ನು ತಡೆಯಲಿಕ್ಕೇ ಯತ್ನಿಸಿತೆಂದು ಲಿಯಾಕತ ಅಲಿಖಾನರು ನೆಹರೂರವರಿಗೆ ತಂತಿಕೊಟ್ಟದ್ದು ಶುದ್ಧ ಮೋಸವಲ್ಲವೆ?

ಬರ್ಡ್‌ವುಡ್ಡರು ಇನ್ನೂ ಹೇಳುತ್ತಾರೆ: "ನಾನು ವಿಚಾರಿಸಿದಾಗ… ಬ್ರಿಟಿಶ ಅಧಿಕಾರಿಗಳಾರಿಗೂ ದಾಳಿಯ ಸಿದ್ಧತೆಯ ಕಲ್ಪನೆ ಇರಲೇ ಇಲ್ಲೆಂದು ಖಂಡಿತವಾಯಿತು. ಬೇಕೆಂದೇ ಪಾಕಿಸ್ತಾನಿಗಳು ಅವರಿಗೆ ಈ ಸುದ್ದಿ ತಿಳಿಸಿರಲಿಲ್ಲ. ಇಲ್ಲದಿದ್ದರೆ ಅವರಿಗೆ ಪೇಚು ಬರುತ್ತಿತ್ತು. ಕೆಲ (ಪಾಕಿಸ್ತಾನಿ) ಮೇಲಧಿಕಾರಿಗಳಿಗೆ ದಾಳಿಗಳ ವಿಚಾರ ಗೊತ್ತಿದ್ದಿತು. ಕಾಶ್ಮೀರದಲ್ಲಿ ಬಾಂಧವ ಜನರುಳ್ಳ ಗಡಿನಾಡಿನ ಮುಖ್ಯ ಮಂತ್ರಿಗಳ (ಕ್ಯಾಯುಂ ಖಾನರ) ಆಶೀರ್ವಾದ ಮತ್ತು ಮನಃಪೂರ್ವಕ ಸಹಾಯ ದಾಳಿಗಾರರಿಗಿತ್ತು. ಅವರ ನೆರವಿಲ್ಲದಿದ್ದರೆ ದಾಳಿ ಶಕ್ಯವೇ ಇದ್ದಿಲ್ಲ. ಗುಡ್ಡಗಾಡಿನವರ ದಾಳಿಯಾದರೆ ಮಹಾರಾಜರು ಹೆದರಿ ಪಾಕಿಸ್ತಾನಕ್ಕೆ ಸೇರ್ಪಡೆ ಹೊಂದಿಯೇ ತೀರುವರೆಂದು ಅವರು ನಂಬಿರಬೇಕು."

ಈ ಸನ್ನಾಹಗಳು ನಡೆಯುತ್ತಿದ್ದಾಗ್ಗೆ ಇತ್ತ ಕಾಶ್ಮೀರಕ್ಕೆ ಕಳಿಸುವ ಆಹಾರಾದಿ ಸಾಮಗ್ರಿಗಳಿಗೂ ಪಾಕಿಸ್ತಾನ ತಡೆಹಾಕಿತು. ಮಹಾರಾಜರ

ಸರಕಾರ ಪಾಕಿಸ್ತಾನಕ್ಕೆ ಈ ಬಗ್ಗೆ ದೂರಿಕೊಂಡಾಗ ಪಾಕಿಸ್ತಾನದ ಉತ್ತರ ಎಂದಿನಂತೆ ಠಕ್ಕಿನ ಕಂತೆಯಾಗಿತ್ತು: ಪಾಕಿಸ್ತಾನ ಸರಕಾರ ದಿಗ್ಬಂಧನವನ್ನೇನೂ ಹೇರಿಲ್ಲ. ಆದರೆ ವಾಹನಗಳ ಕೊರತೆಯಿಂದ ಸಾಮಗ್ರಿಗಳನ್ನು ಕಳಿಸಲು ಶಕ್ಯವಾಗಿಲ್ಲ ಎಂದು! ವಾಹನಗಳು ಹೇಗೆ ಸಿಗಬೇಕು? ಲಾರಿಗಳೆಲ್ಲವೂ ದಾಳಿಗಾರರನ್ನೂ ಅವರ ಶಸ್ತ್ರಾಸ್ತ್ರಗಳನ್ನೂ ಕಾಶ್ಮೀರ ಗಡಿಗೆ ಸಾಗಿಸುವಲ್ಲಿ ನಿರತವಾಗಿದ್ದವು.

ಕೆಲ ಪಾಕಿಸ್ತಾನಿ ಅಧಿಕಾರಿಗಳನ್ನು ದಾಳಿಯಲ್ಲಿ ನೆರವಾಗಲು ಗುಡ್ಡಗಾಡಿಗೆ ಕಳಿಸಲಾಗಿತ್ತು. ಅವರು ಗಡಿನಾಡಿನ ಕುಲಗಳೊಡನೆ ಸಂಪರ್ಕವಿಡುತ್ತಿದ್ದರು. ಗಡಿನಾಡಿನ ಕುಲಗಳಲ್ಲೆಲ್ಲ ಅತಿ ಕ್ರೂರ ಬರ್ಬರರಾಗಿದ್ದ ಮಹಸೂದರನ್ನೇ ಅವರು ದಾಳಿಗಾಗಿ ಆರಿಸಿದರು. ಇದರ ಫಲವನ್ನು ಅವರು ಮುಂದೆ ಎರಡೂ ಕೈಯಿಂದ ತಿನ್ನಬೇಕಾಯಿತು. ದಾಳಿಯಲ್ಲಿ ಸೇರಿದ ಉಳಿದ ಕುಲಗಳೆಂದರೆ ವಜೀರ, ಮಹಮಂದ, ಸ್ವಾತಿ ಮತ್ತು ಬುನರ್ವಾಲರು.

ಅಕ್ಟೋಬರ ಪ್ರಾರಂಭದಿಂದಲೇ ದಾಳಿಯ ವ್ಯವಸ್ಥೆ ನಡೆದಿತ್ತು. ಅಕ್ಟೋಬರ ೨ ರಂದು ರಾವಳಪಿಂಡಿಯಲ್ಲಿ ಮಹಮಂದ ಮಲಿಕರನ್ನು ಗುಪ್ತವಾಗಿ ಕರೆಸಿ ಪಾಕ ಮುಂದಾಳುಗಳು ಮಾತುಕತೆ ನಡೆಸಿದರು.

"ಜೆಹಾದ" ಯಾತ್ರೆ ಪ್ರಾರಂಭವಾದದ್ದು ಅಕ್ಟೋಬರ ೨೦ ಕ್ಕೆ. ಅಂದು ಗಡಿನಾಡಿನ ಬ್ರಿಟಿಷ ಗವರ್ನರರಿಗೆ ಸುದ್ದಿ ತಲುಪಿತು. ಟಂಕದಿಂದ ೯೦೦ ಮಹಸೂದರು ಲಾರಿಗಳಲ್ಲಿ ಗಡಿನಾಡಿಗೆ ಹೊರಟರೆಂದು ಕೇಳಿ ಅವರು ಕುಶಾಲಗಡದಲ್ಲಿ ಅವರನ್ನು ತರುಬಬೇಕೆಂದು ಅಪ್ಪಣೆ ಹೊರಡಿಸಿದರು. ಆದರೆ ಅಷ್ಟರಲ್ಲಿ ದಾಳಿಗಾರರು ಸಿಂಧೂ ನದಿ ದಾಟಿಬಿಟ್ಟಿದ್ದರು. ಅಟಕ ಸೇತುವೆಯ ಬಳಿ ಅವರನ್ನು ತಡೆಯಲು ಬಳಿಕ ಗವರ್ನರರು ಜನರಲ್ ಮ್ಯಾಕೆಯವರಿಗೆ ಸೂಚಿಸಿದರು. ಆದರೆ ತಮ್ಮ ಮುಸ್ಲಿಮ ಸೈನಿಕರು ಅವರನ್ನು ತರುಬುವ ಬದಲು ತಾವೇ ಜೆಹಾದದಲ್ಲಿ ಸೇರಬಹುದೆಂಬ ಭಯದಿಂದ ಆ ಸೈನ್ಯಾಧಿಕಾರಿ ಸುಮ್ಮನೆ ಕುಳಿತನಂತೆ!

ಅತ್ತ ಈ ದಾಳಿಗಾರರಿಗೆ ಸೌಕರ್ಯವೊದಗಿಸಲು ಸ್ಥಾನಿಕ ಅಧಿಕಾರಿಗಳಿಗೆ ಅಪ್ಪಣೆಗಳು ಹೊರಟಿದ್ದವು. ಮಿಯಾಂವಾಲಿಯ ಬ್ರಿಟಿಶ ಡೆಪ್ಯೂಟಿ ಕಮಿಶನರರಿಗೆ ಅಲ್ಲಿಂದ ೧೫೦ ಮೈಲು ದಕ್ಷಿಣಕ್ಕೆ ೨೦೦ ನಿರಾಶ್ರಿತರು ಬರಲಿರುವುದರಿಂದ ಆಹಾರ ಸೌಕರ್ಯ ಒದಗಿಸಲು ಸಿದ್ಧವಾಗಿರಬೇಕೆಂದು ಮೇಲಧಿಕಾರಿಗಳು ಸೂಚಿಸಿದ್ದರು. ಅವರು ಸಿದ್ಧರಾಗಿ ನಿಂತರು. ಆದರೆ ಬಂದವರು ನಿರಾಶ್ರಿತರಲ್ಲ; ದಾಳಿಗಾರರು. ಲಾರಿಗಳಲ್ಲಿ "ನಖಶಿಖಾಂತ ಶಸ್ತ್ರ ಸನ್ನದ್ಧರಾಗಿ ಬಂದ ಅವರನ್ನು ನೋಡಿದರೆ ನಿಸ್ಸಹಾಯರಂತೆ ಕಾಣಿಸಲಿಲ್ಲ" ಎಂದು ಬರ್ಡ್‌ವುಡ್ಡರು ಬರೆದಿದ್ದಾರೆ.

ಅಕ್ಟೋಬರ ೨೨ ನೇ ದಿನ ೨,೦೦೦ ದಾಳಿಗಾರರು ಅಬಟಾಬಾದ ಮೂಲಕ ಲಾರಿಗಳಲ್ಲಿ ಕಾಶ್ಮೀರವನ್ನು ಹೊಕ್ಕರು. ಅವರ ಕಾಯಕ ಅಮಾನುಷವಿದ್ದಷ್ಟೇ ಶೀಘ್ರವೂ ಆಗಿತ್ತು. ದೋಮೆಲ್ ಮತ್ತು ಮುಜಫರಾಬಾದನ್ನು ಅವರು ಸುಟ್ಟುಸೂರೆ ಮಾಡಿದರು. ಅವರು ಮುಜಫರಾಬಾದಿಗೆ ಬರುವ ಮೊದಲೇ ಪರ್ವತ ಕಂದರದ ಬಾಗಿಲಲ್ಲಿ ಅವರನ್ನು ತಡೆದಿದ್ದರೆ ಕೆಲವೇ ಸೈನಿಕರು ಅವರನ್ನು ಸೋಲಿಸಬಹುದಾಗಿತ್ತು. ಆದರೆ ಮಹಾರಾಜರು ತಮ್ಮ ಸಲಹೆಗಾರರ ಸೂಚನೆಯನ್ನು ಅಲಕ್ಷಿಸಿ ಸೈನ್ಯವನ್ನು ಗಡಿಯುದ್ದಕ್ಕೂ ಹಬ್ಬಿಸಿದ್ದರು. ದಾಳಿಯ ಸ್ಥಳದಲ್ಲಿದ್ದ ಸ್ವಲ್ಪ ಮುಸ್ಲಿಂ ಸೈನಿಕರನ್ನು ಆಗಲೇ ಒಡೆದುಕೊಳ್ಳಲಾಗಿತ್ತು. ಆದ್ದರಿಂದ ದಾಳಿಗಾರರು ನಿರಾಯಾಸವಾಗಿ ಮುನ್ನುಗ್ಗಿದರು.

ದಾಳಿಗಾರರು ನಡೆಸಿದ ಅತ್ಯಾಚಾರ ರಾಕ್ಷಸ ಸದೃಶವಾಗಿತ್ತು. ಅವರಿಗಿದ್ದ ವಿರೋಧವೂ ಅತ್ಯಲ್ಪವಾಗಿತ್ತು. ದಾರಿಯಲ್ಲಿ ಸಿಕ್ಕಿದವರನ್ನೆಲ್ಲ ಅವರು ಕೊಚ್ಚಿಹಾಕಿದರು; ಸಿಕ್ಕಿದ್ದನ್ನೆಲ್ಲ ಸುಲಿದರು; ಸುಲಿಯಲಾರದ್ದನ್ನು ಸುಟ್ಟರು. ಭಾರತ ಸರಕಾರ ತಾ. ೨೫ ಕ್ಕೆ ಕಾಶ್ಮೀರ ಸಮಸ್ಯೆಯನ್ನು ಚರ್ಚಿಸುತ್ತಿದ್ದಾಗ ಅವರು ಝೇಲಂ ಕಣಿವೆಯ

ಬಾಗಿಲಲ್ಲಿ ಬಾರಾಮುಲಾವನ್ನು ದಾಟಿ ಉರಿಯನ್ನು ತಲುಪಿಬಿಟ್ಟಿದ್ದರು.

ಬಾರಾಮುಲಾದಲ್ಲಿ ಅವರೆಸಗಿದ ಅತ್ಯಾಚಾರ ಮಾತ್ರ ವಿದೇಶೀಯರನ್ನೂ ದಂಗುಬಡಿಸಿದೆ. ಅಲ್ಲಿ ಫ್ರಾನ್ಸಿಸ್ಕನ್ ಪಂಗಡದ ಸೇಂಟ್ ಜಾಸೆಫ್ ಸನ್ಯಾಸಿನೀ ಮಠವಿತ್ತು. ಈ ಕ್ರೈಸ್ತ ಪವಿತ್ರ ಸ್ಥಾನದಲ್ಲಿ ದಾಳಿಗಾರರು ನುಗ್ಗಿದರು. ಅದನ್ನು ಧ್ವಂಸಮಾಡಿದರು. ಅದರಲ್ಲಿದ್ದ ನಿರಪರಾಧಿ ಸಂನ್ಯಾಸಿನಿಯರನ್ನೂ ಮಕ್ಕಳನ್ನೂ ಕಗ್ಗೊಲೆಗಡಿದರು. ಲೆ. ಕ. ಡಿ. ಓ. ಡೈಕ್ಸ್ ಮತ್ತು ಅವರ ಹೆಂಡತಿ ಕೂಡ ಅಲ್ಲಿಯೇ ಜೆಹಾದಿಗೆ ಆಹುತಿಯಾದರು. ಈ ಅತ್ಯಾಚಾರವನ್ನು ಪ್ರಚೋದಿಸಿದಾತ ಒಬ್ಬ ಪಾಕಿಸ್ತಾನಿ ಪಂಜಾಬಿ ಸೈನ್ಯಾಧಿಕಾರಿ-ಕುರ್ಶಿದ ಅನ್ವಾರ. ಅವನು ಹಜಾರಾದಲ್ಲಿ ಜೆಹಾದಕ್ಕೆ ಸ್ವಯಂಸೇವಕರನ್ನು ಸಂಗ್ರಹಿಸುವ ಕೆಲಸ ಮಾಡಿ ದಾಳಿಗಾರರ ನೇತೃತ್ವ ವಹಿಸಿದ್ದ.

ಸುಲಭಯಶದಿಂದ ಅವರಿಗೆ ಮದವೇರಿಬಿಟ್ಟಿತ್ತು. ಕಾಶ್ಮೀರ ಕಂದರದಲ್ಲಿ ಅವರಿಗೆ ಮುಸ್ಲಿಮ ಜನತೆಯ ಸಹಾಯ ಕೂಡ ಸಿಗುವಂತಿರಲಿಲ್ಲ. ಯಾಕೆಂದರೆ ಅವರೀಗ ಹಿಂದೂ ಮುಸ್ಲಿಂ ಭೇದ ಕೂಡ ನೋಡುತ್ತಿರಲಿಲ್ಲ. ಕೊಲೆ-ಸುಲಿಗೆಗಳೇ ಅವರ ಮುಖ್ಯ ಧ್ಯೇಯವಾದವು. ಬಾರಾಮುಲಾದ ಸುತ್ತಮುತ್ತ ಅವರ ಲೂಟಿ ಅಪ್ರತಿಹತವಾಗಿ ಸಾಗಿತು. ಅವರು ಈ ಲೂಟಿಯಲ್ಲಿ ಹೊತ್ತು ಕಳೆದದ್ದರಿಂದಲೇ ಭಾರತದ ಸೈನ್ಯಕ್ಕೆ ಪ್ರವೇಶಿಸಲು ಸಮಯ ಸಿಕ್ಕಿ ಕಾಶ್ಮೀರ ಉಳಿಯಿತೆಂಬುದು ಒಂದು ವಿಧಿವಿಲಾಸ.

ಅಂದು ದಸರಾ. ಶ್ರೀನಗರದಲ್ಲಿ ಅರಮನೆಯಲ್ಲಿ ಮಹಾರಾಜರ ದರ್ಬಾರು ನಡೆದಿತ್ತು. ಸಂಜೆ ೨೦೦-೩೦೦ ದರ್ಬಾರಿಗಳು ಸಮಾರಂಭ ಮುಗಿಸಿ ಹೊರಡುವುದರಲ್ಲಿದ್ದರು. ಒಮ್ಮಿಂದೊಮ್ಮೆ ದೀಪಗಳು ಹೋಗಿಬಿಟ್ಟವು. ಅರಮನೆಯಲ್ಲಿ ಗಾಢಾಂಧಕಾರ ಮುಸುಕಿತು. ಶ್ರೀನಗರದಲ್ಲಿದ್ದವರಿಗೆ ಈ ಅಪಲಕ್ಷಣದ ಅರ್ಥ ತಿಳಿಯಲು ಬಹಳ ತಡ ಹಿಡಿಯಲಿಲ್ಲ. ದಾಳಿಗಾರರು ಶ್ರೀನಗರದಿಂದ ೩೦ ಮೈಲು ದೂರದಲ್ಲಿದ್ದ ಮೋಹರಾ ವಿದ್ಯುದಾಗಾರವನ್ನು ವಶಪಡಿಸಿಕೊಂಡು ತಂತಿಗಳನ್ನು ಕತ್ತರಿಸಿದ್ದರು. ಸ್ವಲ್ಪ ಹೊತ್ತಿನ ಮೇಲೆ ಉರಿಯಿಂದ ಬಂದ ಗಾಯಾಳು ಡೋಗ್ರಾ ಅಧಿಕಾರಿಯೊಬ್ಬ ಈ ಸಂಶಯವನ್ನು ದೃಢಪಡಿಸಿದ.

ಮಹಾರಾಜರು ಕಂಗಾಲಾದರು. ಆಗ ಅಲ್ಲಿದ್ದ ವಿ.ಪಿ.ಮೆನನ್ ಅವರಿಗೆ ಕೂಡಲೆ ಪರಿವಾರ ಸಹಿತ ಜಮ್ಮುವಿಗೆ ಸಾಗಲು ಸೂಚಿಸಿದರು. ಮಹಾರಾಜರು ಅಂದು ಶ್ರೀನಗರವನ್ನು ತ್ಯಜಿಸಿದಾಗ ಕಾಶ್ಮೀರದ ಮೇಲಿನ ೧೦೦ ವರ್ಷದ ಡೋಗ್ರಾ ಆಧಿಪತ್ಯದ ಅಸ್ತಕಾಲ ಬಂದಂತಾಯಿತು.

೨೭ರ ಮುಂಜಾನೆ ಶ್ರೀನಗರದ ವಿಮಾನ ನಿಲ್ದಾಣದಲ್ಲಿ ಭಾರತದ ಪಡೆಗಳು ಬಂದಿಳಿದಾಗ ಆ ನಗರದಲ್ಲಿ ಹಾಹಾಕಾರ ಎದ್ದಿತ್ತು. ಆದರೆ ಬಾರಾಮುಲಾದ ಸುತ್ತ ಸುಲಿಗೆಯಲ್ಲಿ ನಿರತರಾಗಿದ್ದ ದಾಳಿಗಾರರು ಇನ್ನೂ ಶ್ರೀನಗರ ತಲುಪಿರಲಿಲ್ಲ. ೧/೧೧ ನೇ ಸೀಖ ಪಡೆಯ ನಾಯಕರಾದ ಲೆಫ್ಟಿನಂಟ ಕರ್ನಲ್ ಡಿ. ಆರ್. ರೈಯವರು ಶ್ರೀನಗರದಿಂದ ತಮ್ಮ ಪಡೆಯೊಡನೆ ಬಾರಾಮುಲಾದತ್ತ ನುಗ್ಗಿದರು. ದಾರಿಯಲ್ಲಿ ಅವರಿಗೆ ಕೆಲವೇ ದಾಳಿಗಾರ ಪಂಗಡಗಳು ಸಿಕ್ಕಿದವು. ಅವುಗಳನ್ನು ಧೂಳಿಪಟ ಮಾಡಲು ತಡಹಿಡಿಯಲಿಲ್ಲ.

ಲೆ. ಕ. ರೈಯವರು ಬಾರಾಮುಲಾ ತಲಪಿದಾಗ ಎಲ್ಲವೂ ಮುಗಿದುಹೋಗಿತ್ತು. ಕ್ರೈಸ್ತ ಮಠ ಮೃತ್ಯುಮಂದಿರವಾಗಿತ್ತು. ನಗರದ ಹೊಲವಲಯದಲ್ಲಿ ದಾಳಿಗಾರರ ಮುಖ್ಯ ಪಡೆಯನ್ನು ಅವರು ಎದುರಿಸಿದರು. ಅಲ್ಲಿನ ಕಾಳಗದಲ್ಲಿ ಲೆ. ಕ. ರೈಯವರು ಪ್ರಾಣತೆತ್ತು ವೀರಸ್ವರ್ಗವನ್ನು ಸೇರಿದರು.

ದಾಳಿಗಾರರಲ್ಲಿ ಕ್ರೂರತನ, ಸುಲಿಗೆಯ ಆಶೆಗಳಿದ್ದಷ್ಟು ಶೌರ್ಯ-ಸಂಘಟನೆಗಳಿರಲಿಲ್ಲ. ಭಾರತದ ಸೈನ್ಯದ ಸುಸಂಘಟಿತ ಕಾರ್ಯಾಚರಣೆಯ ಮುಂದೆ ಅವರ ಸಂಘಟಿತ ದೌರ್ಜನ್ಯ ತಡೆಯಲಿಲ್ಲ. ಸ್ಥಾನಿಕ ಮುಸ್ಲಿಮರೂ ಅವರಿಗೆ ನೆರವಾ

ಗಲಿಲ್ಲ. ಅವರು ಹಿಂದೆ ಸರಿಯಲೇಬೇಕಾಯಿತು.

ದಾಳಿಗಾರರಿಗೆ ಸಂಘಟಿತ ವಿರೋಧ ಬಂದ ಮೇಲೆ ಅವರ ಜೆಹಾದದ ಆತುರ ಇಳಿದು ಹೋಯಿತು. ಬದಲಿಗೆ ಅವರು ಪಾಕಿಸ್ತಾನದ ಮೇಲೆಯೇ ತಿರುಗಿಬಿದ್ದರು. ಪಾಕ ಸೈನ್ಯ ಖಾತೆಯನ್ನು ಬೆದರಿಸಿ ಶಸ್ತ್ರಾಸ್ತ್ರ ಮತ್ತು ಇತರ ಸರಕುಗಳನ್ನು ಪಡೆಯಹತ್ತಿದರು. ಹಿಂದುಗಳನ್ನು ಕೊಲೆ ಮಾಡುವುದಕ್ಕಿಂತ ಇದೇ ಸುಲಭ ತಾನೆ?

ಕೊನೆಗೆ ಅವರು ದಕ್ಷಿಣ ದಿಕ್ಕಿನಿಂದ ಪಾಕಿಸ್ತಾನದ ಪಂಜಾಬದೊಳಗೇ ನುಗ್ಗಿ ಅಲ್ಲಿನ ಜನರನ್ನು ಯಶಸ್ವಿಯಾಗಿ ಹಿಂಸಿಸತೊಡಗಿದರು. ಹೀಗೆ ಪಾಕಿಸ್ತಾನ ಎಬ್ಬಿಸಿದ ಭೂತ ಅದರನ್ನೇ ಕಾಡುವಂತಾಯಿತು. ಮಿಲಿಟರಿ ಮತ್ತು ರಾಜಕೀಯ ಇವೆರಡು ದೃಷ್ಟಿಗಳಿಂದಲೂ ಈ ದಾಳಿ ಪಾಕಿಸ್ತಾನಕ್ಕೆ ಅನಾಹುತವಾಗಿ ಪರಿಣಮಿಸಿತೆಂದು ಬರ್ಡ್‌ವುಡ್ಡರು ಬರೆದಿದ್ದಾರೆ.

ಈಗ ಪಾಕಿಸ್ತಾನ ಈ ಅನಾಹುತವನ್ನು ವಿಜಯವಾಗಿ ಮಾರ್ಪಡಿಸಲು ತನ್ನ ಯುರೋಪಿಯನ್ ಮಿತ್ರರ ನೆರವು ಕೋರುತ್ತಿದೆ!



## ಭಾರತ ಮತ್ತು ಇಜಿಪ್ಟ

ಪೂರ್ವದಲ್ಲಿ ಈಜಿಪ್ಟ್ ದೇಶಕ್ಕೆ ಭಾರತದೊಡನೆ ಸಂಬಂಧವಿತ್ತು ಎಂಬ ವಿಷಯ ಹೆಚ್ಚು ಬೆಳಕಿಗೆ ಬಂದಿಲ್ಲ. ಆ ದೇಶದ ಪೂರ್ಣ ವರ್ಣನೆಯನ್ನೂ ನೈಲ್ ನದಿಯ ಉಗಮವನ್ನೂ ನಮ್ಮ ಪುರಾಣಗಳಲ್ಲಿ ಕಾಣಬಹುದು. ನದಿಯ ಹೆಸರು ನಿಲಾ, ಕಾಲಿ, ಕೃಷ್ಣಾ ಎಂದು ವಿಧವಿಧವಾಗಿ ಸಂಬೋಧಿಸಲ್ಪಟ್ಟಿದ್ದರೂ ಅವುಗಳೆಲ್ಲದರ ಅರ್ಥವು ಒಂದೇ ಆಗಿತ್ತು: ಕಪ್ಪು ಅಥವಾ ನೀಲ. ಪುರಾಣಗಳು ಹೇಳುತ್ತಿವೆ: "ಆ ಪ್ರಸಿದ್ಧ ಹಾಗೂ ಪವಿತ್ರ ನದಿಯು ಸೋಮಗಿರಿ ಪುಣ್ಯ ಭೂಮಿಯಲ್ಲಿರುವ ಅಮರ ಸರೋವರದಿಂದ ಹೊರಡುತ್ತಿದೆ." ೧೮೬೦ ರಲ್ಲಿ ನೈಲ್ ನದಿಯ ಉಗಮಸ್ಥಾನವನ್ನು ಕಂಡುಹಿಡಿದ ಸಂಶೋಧಕನ ಬಳಿ ಪುರಾಣಗಳಲ್ಲಿ ಉಕ್ತವಾದ ವರ್ಣನೆಯಿತ್ತು. ತಾನು ಆ ಸರೋವರವನ್ನು ಕಂಡು ವಿಕ್ಟೋರಿಯಾ ನ್ಯಾನ್ಜಾ ಎಂದು ಹೆಸರಿಟ್ಟಾಗ, ಅಲ್ಲಿಯ ಜನರಿನ್ನೂ ಅದನ್ನು 'ಅಮರ' ಸರೋವರವೆಂದೂ ಆ ಬೆಟ್ಟಗಳನ್ನು ಚಂದ್ರಗಿರಿಯೆಂದೂ ಕರೆಯುತ್ತಿದ್ದರು ಎಂಬ ಸಂಗತಿಯನ್ನು ಆ ಸಂಶೋಧಕನು ತನ್ನ ದಿನಚರಿಯಲ್ಲಿ ಬರೆದಿದ್ದಾನೆ. ಈಜಿಪ್ಟ್ ಮತ್ತು ಭಾರತಗಳಲ್ಲಿ ಕಮಲವು ಪವಿತ್ರಾತ್ಮ ಹಾಗೂ ರಾಜಯೋಗ್ಯ ಪುಷ್ಪವಾಗಿದೆ ಎಂಬುದು ಗಮನಾರ್ಹ. "ಹರಿ" ಎಂಬುದು ಪುರಾತನ ಇಜಿಪ್ಶನ್ ಹೆಸರಾದ "ಹೋರಸ್" (ಮುಕ್ತಿದಾಯಕ); ಅದರ ಅರ್ಥ "ನಮ್ಮ ಪಾಪಗಳನ್ನು ಕಳೆಯುವವ" ಎಂದು. ಇವೆರಡು ದೇಶಗಳ ಧಾರ್ಮಿಕ ಪ್ರತೀಕೋಪಾಸನೆಯ ಅಧ್ಯಯನವು ಅವುಗಳೊಳಗಿನ ಪ್ರಾಚೀನ ಸಂಪರ್ಕಕ್ಕೆ ವಿಶೇಷ ಸಾಕ್ಷ್ಯಗಳನ್ನು ಒದಗಿಸುತ್ತದೆ.

—ಡಾ. ಎಂ. ಎ. ಕಾಮತ

"ಹಿಂದೂಯಿಸಂ ಎಂಡ್ ಮಾಡರ್ನ್ ಸಾಯನ್ಸ್" ಎಂಬ ಇಂಗ್ಲಿಷ್ ಪುಸ್ತಕದಿಂದ.

ಪರೋಪಕಾರದಲ್ಲಿ ಸ್ವಂತದ ಹಿತವೂ
ಅಡಕವಾಗಿದೆ !

# ಪರೋಪಕಾರಿಗೆ ಮನೋರೋಗವಿಲ್ಲ

ಎ. ವಿ. ಸುಬ್ರಮಣ್ಯನ್

ಅಮೇರಿಕದಲ್ಲಿ ಬಲು ಶ್ರೀಮಂತ ಮಹಿಳೆಯೊಬ್ಬಳು ಈಚೆಗೆ ಆತ್ಮಹತ್ಯೆ ಮಾಡಿಕೊಂಡಳು. ಜೀವನದಲ್ಲಿ ಸ್ವಾರಸ್ಯವೇ ಉಳಿದಿಲ್ಲೆಂದು ಅವಳು ಹೀಗೆ ಮಾಡಿದಳಂತೆ! ಈ ತರುಣಿಯನ್ನು ಜೀವ ತೆಗೆದುಕೊಳ್ಳಲು ಪ್ರೇರಿಸಿದ್ದು ಇತರರಿಗಿರುವ ಬಡತನ ಅಥವಾ ಪ್ರೇಮಭಂಗದಂಥ ಕಾರಣವಲ್ಲ. ಅವಳ ಆತ್ಮಹತ್ಯೆಗಿದ್ದ ಕಾರಣ ಅತ್ಯಂತ ಮೂಲಭೂತವಾದುದು.

ಪರರಿಗಾಗಿ ಬಾಳುವುದೇ ಜೀವನದಲ್ಲಿ ಪರಮಾನಂದ. ಆಕೆ ಅದನ್ನು ಕಲಿತಿರಲಿಲ್ಲ. ಅವಳು ಸ್ವಾರ್ಥದ ಪರಿಧಿಯೊಳಗೆ ಸಿಕ್ಕಿಬಿದ್ದ ಪಶುವಾಗಿದ್ದಳು. ಅವಳ ಪಾಶವೀ ಅಪೇಕ್ಷೆಗಳೆಲ್ಲ ಪೂರ್ತಿಯಾಗಿದ್ದುವು. ಅಷ್ಟಾದ ಮೇಲೆ ಬದುಕುವುದರಲ್ಲಿ ಏನೂ ಅರ್ಥವಿಲ್ಲೆಂದು ಅವಳಿಗನಿಸಿತು. ಅವಳ ದುರಂತ, ಸ್ವಾರ್ಥದ ದುರಂತ.

ಹುಚ್ಚರ, ಮರುಳರ, ಆತ್ಮಘಾತಕರ ಸಮಸ್ಯೆಗಳನ್ನು ಅಭ್ಯಸಿಸಿದ ಮನಶ್ಶಾಸ್ತ್ರಜ್ಞರೆಲ್ಲರೂ ಹೇಳುವುದೊಂದೇ. ಇಂಥ ಜನರೆಲ್ಲ ಪರಮ ಸ್ವಾರ್ಥಿ ಜೀವನ ಮಾಡಿದವರು. ತಮ್ಮ ಹೊರತು ಅವರು ಬೇರೊಬ್ಬರ ಚಿಂತೆಯನ್ನು ಗಳಿಗೆಯೂ ಹಚ್ಚಿಕೊಂಡವರಲ್ಲ.

ಈ ದುಃಖದಾಯಕ ಚಿತ್ರದಿಂದ ಕಣ್ಣು ಹೊರಳಿಸಿ ಪರೋಪಕಾರಿಯ ಕಡೆ ನೋಡುವಾ. ಪರೋಪಕಾರಿ ತನ್ನ ಹಿತವನ್ನೇ ಚಿಂತಿಸುವ ಬದಲು ಅದಕ್ಕೆ ಸಂಬಂಧಿಸಿರದ ಹೊರಗಿನ ಪ್ರಪಂಚದಲ್ಲಿ ಆಸ್ಥೆ ತಾಳುತ್ತಾನೆ. ತನ್ನ ಲಾಭದ ಹಂಬಲದ ಕವಚವನ್ನು ಕಳಚಿ ಒಗೆದು ಪ್ರಪಂಚದ ಸುಖದುಃಖದಲ್ಲಿ ಭಾಗಿಯಾಗುತ್ತಾನೆ. ಅವನು ಮಾಡುವ ಈ ಅಲ್ಪ ತ್ಯಾಗಗಳಿಗೆ ಅಗಾಧವಾದ ಆತ್ಮಸಮಾಧಾನದ ಪ್ರತಿಫಲ ಅವನಿಗೆ ಬರುತ್ತದೆ.

ಪರೋಪಕಾರಿಗೆ ದ್ವೇಷಾಸೂಯೆಗಳಿಗಾಗಿ ವೇಳೆಯೇ ಸಿಗುವುದಿಲ್ಲ. ಇದರಿಂದಲೇ ಅಸಂಖ್ಯ ಸದ್ಗುಣಗಳು ಉಗಮಿಸುತ್ತವೆ. ದ್ವೇಷಾಸೂಯೆಗಳಿಂದ ಮುಕ್ತವಾದ ಮನಸ್ಸು ಉದ್ವೇಗಗಳ ಪೀಡೆಯಿಲ್ಲದೆ ಸದ್ವಿಚಾರಗಳ ಹೊಲವಾಗುತ್ತದೆ. ಇದರಿಂದ ಸಂತೋಷವೂ ಮನಶ್ಶಾಂತಿಯೂ ಫಲಿಸುತ್ತವೆ. ಒಂದೊಂದು ಸ್ವಾರ್ಥತ್ಯಾಗದಿಂದಲೂ ಮನಸ್ಸಿನ ನಯ ಹೆಚ್ಚುತ್ತದೆ. ಆಗ ಮತ್ತಷ್ಟು ತ್ಯಾಗಕ್ಕೆ ಅದು ಸಿದ್ಧವಾಗುತ್ತದೆ. ಕೊನೆಗೆ ಅಂಥವನು ಹೋದಲ್ಲೆಲ್ಲ ಉತ್ಸಾಹದ ಹೊಂಬೆಳಕನ್ನು ಪಸರಿಸುತ್ತಾನೆ.

ಫ್ಲೊರೆನ್ಸ್ ನೈಟಿಂಗೇಲಳ ಕುಟುಂಬ ಬಲು ತೊಡಕಿನದಾಗಿತ್ತು. ಅವಳ ತಂಗಿ ಮರುಳಿ, ತಾಯಿ ಅತಿ ಮಹತ್ವಾಕಾಂಕ್ಷಿ, ತಂದೆ ಅಲಸಿಗ ಮತ್ತು ವ್ಯವಹಾರಜ್ಞಾನ ಶೂನ್ಯ. ಸಾಲದ್ದಕ್ಕೆ ಆಕೆ ಒಬ್ಬ ತರುಣನ ಪ್ರೇಮಪಾಶದಲ್ಲಿ ಸಿಲುಕಿದ್ದಳು. ಆದರೆ ಅವಳ ಇಚ್ಛಾಶಕ್ತಿ ಇದನ್ನೆಲ್ಲ ಮೆಟ್ಟಿ ನಿಲ್ಲುವಂತಿತ್ತು. ಅವಳು ಕೌಟುಂಬಿಕ ಕಷ್ಟಗಳನ್ನು ಧಿಕ್ಕರಿಸಿ, ಪ್ರೇಮಪಾಶವನ್ನು ಸುಟ್ಟು ದೀನ ರೋಗಿಗಳ ಸೇವೆಗಾಗಿ ಜೀವನವನ್ನು ಮುಡುಪಿಟ್ಟಳು. ಮನೋವೈದ್ಯರಿಗೆ ಅವಳನ್ನು ಪರೀಕ್ಷಿಸುವ ಸಂಧಿ ದೊರೆತಿದ್ದರೆ ಅವಳು ಸುಖಿಯೆಂದೇ ತೀರ್ಮಾನಿಸುತ್ತಿದ್ದರು. ಅವಳ ದಯಾ

'ಸದರ್ನ ರೇಲ್ವೆ' ಪತ್ರಿಕೆಯಿಂದ

ಬುದ್ಧಿ ಮತ್ತು ಅದನ್ನು ಕೃತಿಯಾಗಿ ಮಾರ್ಪಡಿಸಲು ಅವಳು ದಿನದಿನವೂ ದುಡಿಯುತ್ತಿದ್ದ ರೀತಿ ಇವುಗಳು ಅವಳಿಗೆ ಬಯಸಿದ ಸುಖವನ್ನು ಧಾರಾಳವಾಗಿ ಕೊಟ್ಟವು.

ನಮ್ಮ ವ್ಯಕ್ತಿತ್ವವನ್ನು ಸುತ್ತಲ ಆವರಣಕ್ಕೆ ಶ್ರುತಿಗೂಡಿಸುವುದರಲ್ಲಿಯೇ ಮನಸಿನ ಆರೋಗ್ಯವಿದೆ. ನಾವು ನಮ್ಮಲ್ಲೇ ಮಗ್ನರಾಗಿದ್ದರೆ ಬಾಹ್ಯ ಪ್ರಪಂಚದ ಶ್ರುತಿಯೊಡನೆ ಮೇಳಗೂಡದೆ ಅಪಸ್ವರದಂತಾಗುತ್ತೇವೆ. ಮನೋ-ರೋಗಗಳ ಮೂಲ ಇಲ್ಲೇ ಇದೆ.

ಹುಡುಗತನದಲ್ಲಿ ನಾವು ದೊಡ್ಡವರಾದ ಮೇಲೆ ಹಾಗಾಗಬೇಕು ಹೀಗಾಗಬೇಕೆಂದು ಘನತರವಾದ ಕಲ್ಪನಾಚಿತ್ರವನ್ನು ಕಟ್ಟಿರುತ್ತೇವೆ. ಪ್ರಾಯಕ್ಕೆ ಬಂದಾಗ ಆ ಗುರಿ ಸಾಧಿಸಲು ಶಕ್ತ್ಯನುಸಾರವಾಗಿ ಹೆಣಗುತ್ತೇವೆ. ದೈವಬಲವಿದ್ದರೆ ಧ್ಯೇಯವನ್ನು ಸಾಮಾನ್ಯವಾಗಿ ಮುಟ್ಟುತ್ತೇವೆ.

ಆದರೆ ಕೆಲ ವೇಳೆ ದೈವಯೋಗದಿಂದ, ಕೆಲ ವೇಳೆ ಯೋಗ್ಯತೆ ಕಡಿಮೆಯಾಗಿ, ನಮ್ಮ ಗುರಿ ಎಟಕದೇ ಹೋಗುತ್ತದೆ. ಆಗ ಪರೀಕ್ಷಾಕಾಲ ಮೊದಗುತ್ತದೆ. ಸೋಲನ್ನು ಎದುರಿಸಲೂ ಧೈರ್ಯ ಬೇಕು. ಅದನ್ನು ವಿರಕ್ತಿಯಿಂದ ಸಹಿಸಲು ತತ್ವಜ್ಞಾನಿಯ ನಿರ್ಲಿಪ್ತತೆ ಅಗತ್ಯ. ಧೈರ್ಯವಾಗಲಿ ನಿರ್ಲಿಪ್ತತೆಯಾಗಲಿ ಇಲ್ಲದವರು ಮಾನಸಿಕ ವಿಕಾರಗಳಿಗೆ ಗುರಿಯಾಗುತ್ತಾರೆ.

ಜೀವನದಲ್ಲಿ ಅಪಜಯ ಅಪರೂಪವಲ್ಲ. ಆದರೆ ಅಪಜಯವೆಷ್ಟೇ ನಿರಾಶಾದಾಯಕವಾಗಿದ್ದರೂ ಮನುಷ್ಯ ತೀರ ಸ್ವಾರ್ಥಿ ಮತ್ತು ಒಳಗೇ ಕುದಿಯುವ ಸ್ವಭಾವದವನಾಗಿದ್ದ ಹೊರತು ಅವನಿಗೆ ಮನಸ್ಸಿನ ವಿಕಾರಗಳು ಎಂದೂ ಬರುವುದಿಲ್ಲೆಂದು ಮನಶ್ಶಾಸ್ತ್ರಜ್ಞರ ಖಂಡಿತಾಭಿಪ್ರಾಯ. ಅಂತರ್ಮುಖತೆ ಒಳ್ಳೆಯದೇ. ಆದರೆ ಸ್ವಾರ್ಥದೊಡನೆ ಸೇರಿದ ಅಂತರ್ಮುಖತೆ ಪಿಶಾಚ ಸ್ವರೂಪವಾದುದು.

ಮಾನವನ ಹೃದಯದಲ್ಲಿ ಪ್ರೇಮದ ಭಂಡಾರವಿದೆ. ಆದರೆ ಪ್ರೇಮವೆಂಬ ಬಳ್ಳಿಯಾವುದಾದರೂ ವ್ಯಕ್ತಿಯನ್ನು ಅಥವಾ ವಿಷಯವನ್ನು ಬಳಸುವ ಸ್ವಭಾವವುಳ್ಳದ್ದು. ಅದಕ್ಕೆ ಇತರ ವ್ಯಕ್ತಿಗಳೋ ವಿಷಯಗಳೋ ಸಿಕ್ಕದಿದ್ದರೆ ತನ್ನನ್ನು ತಾನೇ ಸುತ್ತಿಕೊಳ್ಳುತ್ತದೆ. ಸ್ವಾರ್ಥದಿಂದ ತುಂಬಿದವನ ಸುಖದುಃಖಗಳೆಲ್ಲ ಅವನೊಬ್ಬನನ್ನೇ ಆಶ್ರಯಿಸಿರುತ್ತವೆ. ಅವನ ಎಲ್ಲ ವಿಚಾರಗಳೂ ತನ್ನೊಬ್ಬನ ಉತ್ಕರ್ಷದಲ್ಲೇ ಕೇಂದ್ರಿತವಾಗಿರುತ್ತವೆ. ಅವನಿಗೆ ಗೆಲವಾಗುತ್ತಿದ್ದಷ್ಟು ದಿನ ತೊಂದರೆಯಿಲ್ಲ. ಆದರೆ ಸದಾಕಾಲವೂ ಗೆಲವು ಯಾರಿಗೆ ಹಣೆಯಲ್ಲಿ ಬರೆದಿರುತ್ತದೆ? ಮೊದಲ ಅಪಜಯ ಬಂದಕೂಡಲೇ ಸ್ವಾರ್ಥಿಯಾದವನ ಮನಸಿನಲ್ಲಿ ತುಮುಲವೇಳುತ್ತದೆ. ನಿರಾಶೆ ಆಕಾಶವನ್ನು ಕವಿಯುತ್ತದೆ. ಮನಸು ಸಂಶಯಗಳ ಗೊಂಡಾರಣ್ಯವಾಗುತ್ತದೆ. ಸುತ್ತುಮುತ್ತಲ ಜನರೆಲ್ಲ ಶತ್ರುಗಳಾಗಿ ತೋರುತ್ತಾರೆ. ಅವನು ಆವೆಯಂತೆ ಮುದುಡಿ ತನ್ನ ಚಿಪ್ಪಿನೊಳಗೆ ಸೇರಿಕೊಳ್ಳುತ್ತಾನೆ. ಇದರಿಂದ ಅವನ ಕರ್ತೃತ್ವಶಕ್ತಿ ಕುಗ್ಗಿ ಮತ್ತೂ ಅಪಜಯಗಳು ಒದಗುವುದು ಸಹಜ. ಅವನ ವಿಷಾದ ಇನ್ನೂ ಹೆಚ್ಚುತ್ತದೆ. ಕಡೆಗೆ ಅವನು ಮನೋವಿಕಾರದ ರೌರವಕ್ಕಿಳಿಯುತ್ತಾನೆ.

"ನೆರೆಯವನನ್ನು ನಿನ್ನಂತೆಯೇ ಪ್ರೀತಿಸು" ಎಂಬುದು ನೀತಿಶಾಸ್ತ್ರದಲ್ಲಿ ಮಾತ್ರವಲ್ಲ, ಮನಶ್ಶಾಸ್ತ್ರದಲ್ಲಿಯೂ ಸರಿಯಾದ ಉಪದೇಶವಾಗಿದೆ. ಮಹಾತ್ಮಾ ಗಾಂಧಿಯವರನ್ನು ಮೊದಲ ಬಾರಿ ಕಂಡಾಗ ತನಗಾದ ಆಶ್ಚರ್ಯವನ್ನು ಅಮೇರಿಕನ್ ಸುದ್ದಿಗಾರನೊಬ್ಬ ಬಣ್ಣಿಸಿದ್ದಾನೆ. ಅವನು ನಿರೀಕ್ಷಿಸಿದ್ದು ವಿಷಣ್ಣ ಮುಖಮುದ್ರೆಯ ಶಿಷ್ಯರಿಂದ ಸುತ್ತುವರಿಯಲ್ಪಟ್ಟ ವಿಷಾದಮಯ ಸ್ವರೂಪದ ಅರೆಬತ್ತಲೆ ಫಕೀರನನ್ನು. ಆದರೆ ಅವನು ಕಂಡದ್ದು ನಕ್ಕುನಗಿಸುವ ಸಂತೋಷದ ಬೆಳುದಿಂಗಳು ಬೀರಿದ ಮುಖಗಳನ್ನು!

ಪರೋಪಕಾರಿ ಜನರ ಮುಖ ಯಾವಾಗಲೂ ಆನಂದದಿಂದ ಕಾಂತವಾಗಿರುತ್ತದೆ. ಅದು ಒಳಗಿನ ಔದಾರ್ಯದ ಪ್ರತಿಬಿಂಬ. ಗಂಭೀರ ವಿಚಾರಕ್ಕೂ ಸಂತೋಷಕ್ಕೂ ಶತ್ರುತ್ವವಿಲ್ಲ. ಮಿಥ್ಯಾ-ತತ್ವಜ್ಞಾನಿಗಳೂ ಶುಂಠರೂ ಮಾತ್ರ ತಮ್ಮ ಹೃದಯದ ಶೂನ್ಯತೆಯನ್ನು ಮುಚ್ಚಿಕೊಳ್ಳಲು ಉಗ್ರತೆಯ ಮುಖವಾಡ ಧರಿಸುತ್ತಾರೆ.

ಅವನನ್ನು ಬ್ರಿಟಿಶರು ಗಲ್ಲಿಗೇರಿಸಿದರು ; ಆದರೆ
ಅವನು ಅಮರತ್ವ ಪಡೆದ.

# ಸಂಗೊಳ್ಳಿ ರಾಯಣ್ಣ

— ಶಂ. ವೆಂ.

೧೮೩೧ ರಲ್ಲೊಂದು ದಿನ ಬೆಳಗಾವಿ ಜಿಲ್ಲೆಯ ನಂದಗಡದ ಬಳಿ ರಸ್ತೆಯಲ್ಲಿ ಬ್ರಿಟಿಶ ಪಡೆಯೊಂದು ಒಬ್ಬ ಕೈದಿಯನ್ನು ಕರೆದುಕೊಂಡು ಹೊರಟಿತ್ತು. ಕೈದಿ ಇನ್ನು ಕೆಲವೇ ತಾಸಿನಲ್ಲಿ ನಂದಗಡದಲ್ಲಿ ಮರಣ ದಂಡನೆಯನ್ನು ಎದುರಿಸಬೇಕಾಗಿತ್ತು. ಆದರೆ ಅವನು ಎಳ್ಳಷ್ಟು ಅಳುಕಿದಂತೆ ಕಾಣಲಿಲ್ಲ. ತಲೆಯೆತ್ತಿ ದೃಢವಾದ ಹೆಜ್ಜೆಗಳಿಂದ ಸಾಗಿದ್ದ ಆತ ನಂದಗಡಕ್ಕೆ ಹತ್ತಿರವಾದಾಗ ತಡೆದು ರಸ್ತೆಯ ಪಕ್ಕದ ಒಂದು ಸ್ಥಳವನ್ನು ಬೊಟ್ಟು ಮಾಡಿ ತೋರಿಸಿ, ತನ್ನ ಬಂಧನಕಾರರಿಗೆ ಹೇಳಿದನು : “ಅದೋ ಅಲ್ಲಿ ನನ್ನ ಶರೀರವನ್ನು ಹುಗಿಯಿರಿ ! ”

ಹಾಗೇ ಕೆಲ ನಿಮಿಷ ನಿಂತು ಕೈದಿ ಗಂಭೀರವಾಗಿ ಕಣಿ ನುಡಿದ: “ಇಲ್ಲಿ ನನ್ನ ಗೋರಿಯ ಮೇಲೆ ಒಂದು ಭಾರಿ ಆಲದ ಮರ ಬೆಳೆಯಲಿದೆ!” ಇಷ್ಟೆಂದು ಆತ ಮೌನ ತಾಳಿ ಮುಂದೆ ಸಾಗಿದ.

ಮೃತ್ಯುಮುಖದಲ್ಲಿ ತನ್ನ ಗೋರಿಯ ಮೇಲೆ ಬೆಳೆಯಲಿರುವ ವಿಶಾಲ ವೃಕ್ಷದ ಕಲ್ಪನೆಯನ್ನು ಕಾಣುತ್ತಿದ್ದ ಈ ಕೈದಿ ಸಂಗೊಳ್ಳಿ ರಾಯಣ್ಣನಾಗಿದ್ದ. ನಾಲ್ಕು ತಿಂಗಳ ಕಾಲ ಬ್ರಿಟಿಶ ಸತ್ತೆಯ ವಿರುದ್ಧ ಸ್ವಾತಂತ್ರ್ಯ ಸಂಗ್ರಾಮ ನಡೆಸಿ ಕೊನೆಗೆ ವಿಶ್ವಾಸಘಾತಕರ ದೆಸೆಯಿಂದ ಸೆರೆಸಿಕ್ಕಿದ್ದ ರಾಯಣ್ಣನಿಗೆ ವಿದೇಶೀ ಪ್ರಭುತ್ವದ ವಿರುದ್ಧ ಸ್ವಾತಂತ್ರ್ಯಧ್ವಜವನ್ನೆತ್ತಿದವರಿಗೆ ಸಿಗುವ ಪರಮಪದವಿಯಾದ ಹುತಾತ್ಮ ಪದವಿ ಸಿಕ್ಕಿತು. ಆದರೆ ಆತ ಕನ್ನಡದ ಜನತೆಯ ಹೃದಯದಲ್ಲಿ ಅಮರನಾಗಿ ನೆಲಸಿದನೆಂಬುದಕ್ಕೆ ಅವನ ಗುಣಗಾನ ಮಾಡಿ ಹಳ್ಳಿಗರು ಹಾಡಿದ ಸುಂದರ ಲಾವಣಿಯೇ ಸಾಕ್ಷಿ.

ರಾಯಣ್ಣ ಅರಸು ಮನೆತನದವನೇನೂ ಅಲ್ಲ. ಬ್ರಿಟಿಶರ ವಿರುದ್ಧ ಕತ್ತಿಕಟ್ಟಿ ಹೋರಾಡಿ ಸೋತ ಕಿತ್ತೂರಿನ ವೀರರಾಣಿ ಚೆನ್ನಮ್ಮನ ಬಂಟನಾಗಿದ್ದವನಾತ. ಚೆನ್ನಮ್ಮ ಬ್ರಿಟಿಶರ ಸೆರೆಯಾಳಾದಳು. ರಾಯ ನಾಯಕನ ಆಸ್ತಿಯನ್ನು ಕಸಿದುಕೊಂಡು ಬ್ರಿಟಿಶರು ಅವನ ತಲೆಯನ್ನು ಮಾತ್ರ ಉಳಿಸಿದರು. ರಾಯಣ್ಣ ತನ್ನೂರಾದ ಸಂಗೊಳ್ಳಿಗೆ ಬಂದು ಹಳಬನ ಕೆಲಸ ವಹಿಸಿಕೊಂಡ. ಆದರೆ ಅವನ ಹೃದಯದಲ್ಲಿ ಕಿತ್ತೂರಿನ ದೇಸಗತಿಯನ್ನು ಪುನಃ ಕಟ್ಟುವ ಹಂಬಲವಿದ್ದೇ ಇತ್ತು.

ಕಿತ್ತೂರಿನ ಬಂಡಾಯವಾಗಿ ಐದು ವರ್ಷಗಳ ನಂತರ ೧೮೨೯ರಲ್ಲಿ ರಾಣಿ ಚೆನ್ನಮ್ಮ ಬ್ರಿಟಿಶರ ಸೆರೆಯಲ್ಲಿಯೇ ಮರಣಹೊಂದಿದಾಗ ಕಿತ್ತೂರಿನ ಬಗ್ಗೆ ಅಭಿಮಾನವಿಟ್ಟಿದ್ದ ಜನತೆಯ ಹೃದಯ ಉರಿದೆದ್ದಿತು. ಈ ಸಂಧಿಯಲ್ಲೇ ರಾಯ ನಾಯಕನಿಗೂ ಊರ ಕುಲಕರ್ಣಿಗೂ ಜಗಳವಾಯಿತು. ರಾಯನಾಯಕ ಮತ್ತೆ ಬ್ರಿಟಿಶರ ವಿರುದ್ಧ ಬಂಡುಹೂಡಲು ನಿರ್ಧರಿಸಿದ. ಕಿತ್ತೂರಿನ ದೇಸಾಯರು ಮೊದಲಿಂದಲೂ ಜನಪ್ರಿಯರಾಗಿದ್ದವರು. ರಾಯಣ್ಣ ಕಿತ್ತೂರಿನ ಸ್ವಾತಂತ್ರ್ಯದ ಧ್ವಜವನ್ನೆತ್ತಲು ಸನ್ನಾಹ ಮಾಡುವನೆಂದ ಕೂಡಲೆ ಅವನಿಗೆ ಸುತ್ತಲೂ ಜನಬೆಂಬಲ ದೊರೆಯಿತು. ಮೊದಲು ಒಂದು ನೂರು ಜನರ ಪಂಗಡ ಅವನಲ್ಲಿದ್ದುದು ಕೆಲ ದಿನಗಳಲ್ಲೇ ಒಂದು ಸಾವಿರಕ್ಕೇರಿತು.

ಬ್ರಿಟಿಶರ ಹತ್ತಿರ ಪ್ರಬಲ ಶಸ್ತ್ರಾಸ್ತ್ರಗಳಿದ್ದು ದನ್ನು ರಾಯಣ್ಣ ಬಲ್ಲ. ಅದನ್ನೆದುರಿಸಲು ಆಧುನಿಕ ಶಸ್ತ್ರಾಸ್ತ್ರಗಳು ಅಗತ್ಯವೆಂದು ಅವನಿಗೆ ಗೊತ್ತಿತ್ತು. ಇದಕ್ಕಾಗಿ ಆತ ಮೊಗಲಾಯಿಯ ಸುರಪುರ ನಾಯಕರ ಸಹಾಯ ಬೇಡಿ ಪಡೆದ ನೆಂದು ಆ ಕಾಲದ ಹಳ್ಳಿಯ ಲಾವಣಿಯೊಂದ ರಲ್ಲಿ ಉಲ್ಲೇಖವಿದೆ. ಅದಕ್ಕಾಗಿ ಅವನು ಸುರ ಪುರಕ್ಕೆ ಹೋದ ದೃಶ್ಯವನ್ನು ಲಾವಣಿಕಾರ ಕಣ್ಣಿಗೆ ಕಟ್ಟುವಂತೆ ಬಣ್ಣಿಸಿದ್ದಾನೆ:

ಒತ್ತರ ಮಾಡಿ ರಾಯನಾಯಕ
ಹೆತ್ತ ತಾಯಿ ಪಾದಕ ಬಿದ್ದು
ಮತ್ತೆ ಕತ್ತಿ ಹಿಡಕೊಂಡ್ಹೊಂಟ ಧೀರಾ।
ಮುಗಲಾಯರ ಸೀಮಿಗೆ ಹೋಗಿ
ಸುರಪುರ ಅರಸರ ಇದಿರಿಗೆ ನಿಂತು
ಕರವ ಮುಗಿದು ಮಾಡಿದನಾ
ನಮಸ್ಕಾರ।

ಧೀರ ಹೌದೋ ರಾಯ ನಾಯಕ
ಹಾರಿ ಹನ್ನೆರಡಕ್ಕಡಿ ಜಿಗಿದಾ
ಅರಸ ಮೆಚ್ಚಿ ಹರುಷವಾಗಿ
ಸರ್ಜ ನಿನಗೆ ಸರಿಯಲ್ಲೆಂದ
ಏನು ಬೇಡತಿ ಬೇಡೆಂದಾ.......

ರಾಯಣ್ಣ "ಮುನ್ನೂರು ಬ್ಯಾಡರ ಕೊಡು" ಎಂದನೆಂದೂ ಸುರಪುರ ನಾಯಕರು ಅದಕ್ಕೊಪ್ಪಿ ಸಹಾಯವಿತ್ತರೆಂದೂ ಲಾವಣಿಯ ಹೇಳಿಕೆಯಿದೆ.

ರಾಯಣ್ಣನೊಡನೆ ಕಡ್ಡಿಗುಡ್ಡ ಬಾಳಣ್ಣ, ದೊಡ್ಡ ಕಿಲ್ಲೆಯ ಭೀಮಣ್ಣ, ಬೆಲ್ಲೋಡಿ ಒಡ್ಡರ ಯಲ್ಲಣ್ಣ ಇವರೂ ಸೇರಿದರು. ಎಲ್ಲರೂ ಕೂಡಿ "ನಮ್ಮ ಕತ್ತಿಗೆಬ್ಯಸನ ಕೊಡೆಂದು ಸತ್ಯುಳ್ಳ ಶಿರಸಂಗಿ ಕಲ್ಲವ್ವನನ್ನೂ ಕಕ್ಕೇರಿ ಕರಿಯವ್ವ ನನ್ನೂ" ಪ್ರಾರ್ಥಿಸಿಕೊಂಡರು. ಅವರ ಚಟುವಟಿಕೆ ಬೆಳೆಯಿತು. ಸಮಸದಗಡವನ್ನು ಕೊಳ್ಳೆ ಹೊಡೆದರು. ಬೀಡಿ ಮಾಮಲೇದಾರ ಕಚೇರಿಯನ್ನು ಅಗ್ನಿಗಾಹುತಿ ಕೊಟ್ಟರು. ಧಾರವಾಡ ಕಲೆಕ್ಟರರಿಗೆ ಸುಭೇದಾರರಿಂದ ದೂರು ಹೋಯಿತು.

ರಾಯಣ್ಣನ ಪಡೆಗಳು ಜಿಲ್ಲೆಯ ದಕ್ಷಿಣದ ಗುಡ್ಡಗಳಲ್ಲಿ ಅವಿತುಕೊಂಡು ಬ್ರಿಟಿಶ ಆಡಳಿತದ ವಿರುದ್ಧ ಕೂಟಯುದ್ಧ ನಡೆಸಿದ್ದವು. ಒಮ್ಮೆ ಅವನು ಕಣಬರಗಿಗೆ ಬಂದು, ಕಾವಲುಗಾರರ ಪಹರೆ ಬದಲಾಗುವ ಸಂಧಿಯಲ್ಲಿ ಮಿಂಚಿನದಾಳಿ ಮಾಡಿ ಬೆಳಗಾವಿಯ ಕೋಟೆಯನ್ನು ವಶಪಡಿಸಿಕೊಳ್ಳಬೇಕೆಂದು ಹೊಂಚುಹಾಕಿದ್ದನು. ಆ ಮೇಲೆ ಯಾವ ಕಾರಣದಿಂದಲೋ ಆ ವಿಚಾರ ವನ್ನು ಬಿಟ್ಟುಕೊಟ್ಟನು.

ರಾಯಣ್ಣನನ್ನು ಬಂಧಿಸಲು ಸಂಪಗಾವಿಯ ಮಾಮಲೇದಾರ ಕೃಷ್ಣರಾಯನಿಗೆ ಅಪ್ಪಣೆಹೋಯಿತು. ಆದರೆ ಅದು ಸಾಧಿಸಲಿಲ್ಲ. ಕಿತ್ತೂರಿನ ಸೈನ್ಯವು ರಾಯಣ್ಣನ ವಿರುದ್ಧ ಕ್ರಮ ಕೈಕೊಳ್ಳಲು ನಿರಾಕರಿಸಿತು. ದಂಗೆ ಬಿರುಸಾಗಿ ಹಬ್ಬ ತೊಡಗಿತು.

ಸುದ್ದಿಕೇಳಿ ಧಾರವಾಡದ ಕಲೆಕ್ಟರನಿಗೆ ಭಾರೀ ಸಿಟ್ಟು ಬಂತು. ಅವನು "ಟೊಪ್ಪಿಗೆ ಒಗೆದು ಹಲ್ಲು ಕಡಿದು ಸಿಟ್ಟಿನಿಂದ ಮುಂಗೈ ತಿಂದು" ಮುಂಬಯಿಗೆ ವರದಿ ಕಳಿಸಿದನೆಂದು ಲಾವಣಿಕಾರನ ಉತ್ಪ್ರೇಕ್ಷೆ. ರಾಯಣ್ಣನನ್ನು ಹಿಡಿಯಲು ದೊಡ್ಡ ಸೈನ್ಯವೇ ಹೊರಟಿತು. ಕೃಷ್ಣರಾಯನ ನೇತೃತ್ವದಲ್ಲಿ ಈ ದಂಡು ರಾಯಣ್ಣನನ್ನು ಬೆನ್ನಟ್ಟಿತು. ಆದರೆ ರಾಯಣ್ಣ ಪ್ರತಿಸಲವೂ ಈ ಸೈನ್ಯದ ಕೈಯಿಂದ ನುಣಚಿಕೊಂಡು ತನ್ನ ಬಹುಸಂಖ್ಯಾಕ ಸಂಗಡಿಗರೊಡನೆ ಪಾರಾಗಿ ಹೋಗುತ್ತಿದ್ದ. ಬ್ರಿಟಿಶ ಸೈನ್ಯ ಬೆನ್ನಟ್ಟುತ್ತಿದ್ದಂತೆ ಸಂಪಗಾವಿಯ ಮಾಮಲೇದಾರ ಕಚೇರಿಗೆ ಕೊಳ್ಳಿಇಡಲಾಯಿತು. ಮರಕಟ್ಟೆಯನ್ನು ಸುಲಿದು ಸುಡಲಾಯಿತು.

ರಾಯಣ್ಣನ ಕೂಟಯುದ್ಧದ ಒಂದು ಪ್ರಸಂಗ ವನ್ನು ಲಾವಣಿಕಾರ ಚಿತ್ರವತ್ತಾಗಿ ಬಣ್ಣಿಸಿದ್ದಾನೆ. ಸುಭೇದಾರ ಸಿಟ್ಟಿನಿಂದ ಸೈನ್ಯಸಮೇತ "ಹಳ್ಳಕೊಳ್ಳ ಗುಡ್ಡ ಗವಿ ಗಿಡ ಕಾಂತಾರ ಹುಡುಕುತ್ತ" ಹೊರಟಿದ್ದನಂತೆ. ಹಳ್ಯಾಳ ಗುಡ್ಡಕ್ಕೆ ಅವರು ಬಂದದ್ದನ್ನು ಕಂಡು ರಾಯ

ನಾಯಕ ಒಂದು ಮರಕ್ಕೆ ಜಾವಿಗೆ ಕಟ್ಟಿಸಿ ಇಲ್ಲೇ ಬಂಡಾಯಗಾರರಿದ್ದಾರೆಂಬ ಭ್ರಮೆ ಹುಟ್ಟಿಸಿದನು. ಸಿಕ್ಕಿದರು ಎಂದುಕೊಂಡು ಸುಭೇದಾರನ ಕಡೆಯುವರು ಸಿಕ್ಕಾಬಟ್ಟೆ ಗುಂಡು ಹಾರಿಸಿಯೇ ಹಾರಿಸಿದರು. ಮರೆಯಲ್ಲಿ ನಿಂತು ರಾಯಣ್ಣನ ಕಡೆಯುವರು ಈ ಗಾಳಿಗುದ್ದಾಟವನ್ನು ಮೋಜಿನಿಂದ ನೋಡುತ್ತಿದ್ದರು. ಹಿಡಿಯಬಂದ ಬಂಟರ ಮದ್ದುಗುಂಡುಗಳೆಲ್ಲ ತೀರಿದ ಮೇಲೆ,

ಕಂಡ ರಾಯಣ್ಣ ಬಂದ ಬೆನ್ನಮೇಲೆ
ಕುರಿಯೊಳಗೆ ತೋಳ ಹೊಕ್ಕು
ಮುರಮುರದು ಒಗಒಗದಾ।
ಹಿರಿಹಿರಿದು ಕಡಿದರು ಕತ್ತಿಲೆ. . . . .
ಮುತ್ತಿಗೆ ಹಾಕ್ಯಾರೊ ದಂಡಿನ ಮ್ಯಾಲ
ಪಿಸ್ತೂಲ ಫಿರಂಗಿ ಹಿಡಿದು
ಬಾಕು ಬಿಲ್ಲು ಭಲ್ಲೆನ್ನೊಗೆದು
ನಾಕ ನೂರ ಮುಂದಿ ಕೊಂದರಲ್ಲಿ
ರುಂಡ ಬಿದ್ದವು ಗೊತ್ತ ಇಲ್ಲದೆ. . . .
ಕೊಳ್ಳದೊಳಗೆ ಕಥಾಂತರ ಆಗಿ
ನೆತ್ತರ ಕಾಲವಿ ಹರಿದೀತಣ್ಣಾ. . . .

"ಗುಡ್ಡದ ಇಲಿ" ರಾಯಣ್ಣನೊಡನೆ ಹೋರಾಡುವದು ಸುಲಭವಲ್ಲೆಂದು ಬ್ರಿಟಿಶರಿಗೆ ಜ್ಞಾನೋದಯವಾಯಿತು. ಅದಕ್ಕಾಗಿ ಅವರು ಮೋಸದ ಬಲೆ ಒಡ್ಡಬೇಕಾಯಿತು. ಅವನನ್ನು ಹಿಡಿದು ಕೊಟ್ಟರೆ ಬಹುಮಾನ ಕೊಡುವದಾಗಿ ಸಾರಿದರು ಆದರೆ "ಸರ್ಪರೊಳಗೆ ಬಂಟನಾಗಿ ಕೂತ" ಆತನನ್ನು ಹಿಡಿದು ಕೊಡುವ ಹಿಮ್ಮತ್ತು ಯಾರದು? ಇತ್ತ ಕಿತ್ತೂರಿನ ವಿಧವೆ ರಾಣಿ ಈರವ್ವನನ್ನು ಜನರ ಇಚ್ಚೆ ಮೀರಿ ಬ್ರಿಟಿಶರು ಬೈಲಹೊಂಗಲದಿಂದ ಧಾರವಾಡಕ್ಕೆ ಸ್ಥಳಾಂತರಿಸಿದ್ದರಿಂದ ಮತ್ತು ಅವಳು ಅಲ್ಲಿ ಸಂಶಯಾಸ್ಪದ ರೀತಿಯಲ್ಲಿ ಮರಣ ಹೊಂದಿದ್ದರಿಂದ ರೊಚ್ಚಿಗೆದ್ದ ಒಂದು ಪಂಗಡವೂ ರಾಯಣ್ಣನನ್ನು ಸೇರಿಕೊಂಡಿತು.

ಆದರೆ ರಾಯಣ್ಣನ ದೈವ ತಿರುಗಿತು. ಈ ದೇಶದಲ್ಲಿ ಶೂರರಿಗೆ ಕೊರತೆ ಇಲ್ಲದಂತೆ ದ್ರೋಹಿಗಳಿಗೂ ಬರಗಾಲ ಎಂದೂ ಇರಲಿಲ್ಲ ತಾನೆ? ಕಿತ್ತೂರ ದೇಸಾಯಿಯು ತನ್ನ ಮಗನನ್ನು ದತ್ತಕ ಹಿಡಿಯಲಿಲ್ಲೆಂದು ಅವನ ಮೇಲೆ ಮುನಿದಿದ್ದ ಖುದಾನಪುರದ ಲಿಂಗನಗೌಡನನ್ನು ಮಾಮಲೇದಾರನು ಒಳತೆಗೆದುಕೊಂಡು ಒಂದು ಹಂಚಿಕೆ ಹಾಕಿದನು. ಅದರ ಪ್ರಕಾರ ಲಿಂಗನಗೌಡನು ರಾಯಣ್ಣನ ಪಕ್ಷಕ್ಕೆ ಸೇರುವದಾಗಿ ಹೇಳಿಕಳಿಸಿ ರಾಯಣ್ಣನು ಅವನಲ್ಲಿಗೆ ಬಂದಾಗ ಅವನನ್ನು ಮೋಸದಿಂದ ಹಿಡಿದು ಕೊಡಬೇಕೆಂದಾಯಿತು.

ರಾಯಣ್ಣನು ವಿಶ್ವಾಸ ಘಾತದಿಂದ ಸೆರೆಸಿಕ್ಕನೆಂಬಲ್ಲಿ ಸಂಶಯವಿಲ್ಲದಿದ್ದರೂ ಈ ಮೋಸಗಾರಿಕೆಯ ವಿವರಗಳಲ್ಲಿ ಮತಭೇದವಿದೆ. ಲಾವಣಿಕಾರನು, ಬಹುಮಾನದ ಆಸೆಯಿಂದ ಮೂವರು ರಾಯಣ್ಣನನ್ನು ಹಿಡಿದು ಕೊಟ್ಟರೆಂದು ಹೇಳುತ್ತಾನೆ. ಆದರೆ ಬ್ರಿಟಿಶ ಇತಿಹಾಸಕಾರರ ಹೇಳಿಕೆ ಬೇರೆಯೇ ಇದೆ.

ಲಿಂಗನಗೌಡನ ಕಡೆಯುವರು ರಾಯಣ್ಣನ ತಂಡದಲ್ಲಿ ಸೇರಿಕೊಂಡು ಕೆಲದಿನಗಳ ವರೆಗೆ ಅವನ ಕಾರ್ಯಗಳಲ್ಲಿ ಸಹಕರಿಸುವಂತೆ ನಟಿಸಿದರು. ಒಂದು ದಿನ ರಾಯಣ್ಣ ಒಬ್ಬನೇ ನಿರಾಯುಧನಾಗಿ ಸ್ನಾನಕ್ಕಿಳಿದಿದ್ದಾಗ ಅವನನ್ನು ಹಿಡಿದು ಬಿಗಿದು ಸಾಗಿಸಿ ಮಾಮಲೇದಾರನಿಗೊಪ್ಪಿಸಿದರು.

ಈ ಪ್ರಕಾರ ಕೊನೆಗೊಂಡಿತು ಕನ್ನಡದ ಗಂಡುಗಲಿಯೊಬ್ಬನ ಸಾಹಸದ ಉಪಕ್ರಮ. ಅವನನ್ನು ಧಾರವಾಡಕ್ಕೆ ತಂದು ವಿಚಾರಣೆಗೊಳಪಡಿಸಿ ಮರಣದಂಡನೆ ವಿಧಿಸಲಾಯಿತು. ರಾಯಣ್ಣನ ಮುಖ್ಯಕಾರ್ಯಕ್ಷೇತ್ರವಾದ ನಂದಗಡದಲ್ಲೇ ಅವನನ್ನು ಗಲ್ಲಿಗೇರಿಸಬೇಕೆಂದು ನಿರ್ಣಯಿಸಲಾಯಿತು. ಅವನನ್ನು ನಂದಗಡಕ್ಕೊಯ್ಯುತ್ತಿದ್ದಾಗಲೇ ಈ ಲೇಖದ ಆರಂಭದಲ್ಲಿ ಹೇಳಿದ ಪ್ರಸಂಗ ನಡೆದುದು.

ರಾಯಣ್ಣ ಗಲ್ಲಿಗೇರಿಸಲ್ಪಟ್ಟ. ಅವನನ್ನು ಅವನು ಹೇಳಿದ ಸ್ಥಳದಲ್ಲೇ ಹುಗಿದರು. ಅವನ ಭವಿಷ್ಯ ನಿಜವಾಗಿ, ಪ್ರಕಾಂಡವಾದ ವಟವೃಕ್ಷವೊಂದು

ಅವನ ಗೋರಿಯ ಮೇಲೆ ಬೆಳೆಯಿತು. ಅದರ ತಳದಲ್ಲಿ ಒಂದು ಚಿಕ್ಕ ಗುಡಿ ಕಟ್ಟಿದರು. ರಾಯಣ್ಣ ಒಂದು ಬಗೆಯ ದೇವತ್ವವನ್ನೇ ಪಡೆದ, ಬಂಟರ ಬಂಟನಾದ ಹನುಮನಂತೆ. ರಾಯಣ್ಣನ ಗೋರಿಯನ್ನು ಸಂದರ್ಶಿಸಿದರೆ ಬಂಜೆಯರಿಗೆ ಮಕ್ಕಳಾಗುವರೆಂಬ ಪ್ರತೀತಿ ಹೊರಟಿತು. ದೂರ ದೂರದಿಂದ ಸ್ತ್ರೀಯರು ರಾಯಣ್ಣನಿಗೆ "ನಡೆದುಕೊಳ್ಳಲು" ಯಾತ್ರೆ ಮಾಡತೊಡಗಿದರು. ರೈತರು ಕಾಳನ್ನು ಪೇಟೆಗೊಯ್ಯುವಾಗ ರಾಯಣ್ಣನಿಗೆ ಕೈಮುಗಿಯುವರು. ರಾಯಣ್ಣ ಸಂತುಷ್ಟನಾದರೆ ತಮ್ಮ ಕಾಳಿಗೆ ಒಳ್ಳೇ ಬೆಲೆ ಬರುವದೆಂದು ಅವರ ನಂಬಿಕೆ.

## ಕವಿಗಳು ಕಂಡ ಕಾಣ್ಕೆ

**ಅಸಾಮಿ:** ನಾಯಿಯೇನು, ಚಂಡಾಲನೇನು, ಕತ್ತೆಯೇನು— ಎಲ್ಲದರ ಆತ್ಮದಲ್ಲಿಯೂ ರಾಮನೇ ಇದ್ದಾನೆ. ಇದನ್ನರಿತು ಎಲ್ಲವನ್ನೂ ವಂದಿಸುವಾ. —ಶಂಕರದೇವ (೧೫ ನೇ ಶತಕ)

**ಬಂಗಾಲಿ:** ಮಾನವನಿಗಿಂತ ಮಿಗಿಲಾದ ಸತ್ಯವಿಲ್ಲ. —ಚಂಡೀದಾಸ (೧೫ ನೇ ಶತಕ)

**ಗುಜರಾತಿ:** ಪರರ ನೋವನ್ನರಿತವನೇ ನಿಜವಾದ ವೈಷ್ಣವ. —ನರಸೀ ಮೆಹತಾ.

**ಹಿಂದಿ:** ಕೀರ್ತಿಯಿರಲಿ, ಕಾವ್ಯವಿರಲಿ, ಅಧಿಕಾರವಿರಲಿ— ಯಾವುದು ಸಕಲರ ಕಲ್ಯಾಣ ಮಾಡುವುದೋ ಅದೇ ಶ್ರೇಷ್ಠ. —ತುಲಸೀದಾಸ (೧೬ ನೇ ಶತಕ)

**ಕನ್ನಡ:** ಮನುಷ್ಯ ಜಾತಿ ತಾನೊಂದೆ ವಲಂ. — ಪಂಪ (೧೦ ನೇ ಶತಕ)

**ಕಾಶ್ಮೀರಿ:** ಶಿಶಿರಋತು ಹೋದೀತು, ಹಿಮವೆಲ್ಲ ಕರಗೀತು, ಮತ್ತೊಮ್ಮೆ ಬಂದೀತು ವಸಂತಮಾಸ. —ಮೆಹಜುರ್ (೨೦ ನೇ ಶತಕ)

**ಮಲೆಯಾಳಿ:** ಹೇ ರಾಜ, ಸತ್ಯಕ್ಕಿಂತ ಮಿಗಿಲಾದುದು ಬೇರೊಂದಿಲ್ಲ. — ಎಳುತ್ತಚ್ಚನ್ (೧೬ ನೇ ಶತಕ)

**ಮರಾಠಿ:** ದಲಿತರನ್ನೂ ಪೀಡಿತರನ್ನೂ ತನ್ನವರಾಗಿ ಮಾಡಿಕೊಂಡವನೇ ನಿಜವಾದ ಸಂತ. —ತುಕಾರಾಮ (೧೭ ನೇ ಶತಕ)

**ಉಡಿಯಾ:** ಜಗತ್ತಿಗೆ ಅದರಿಂದ ಕ್ಷೇಮವಾಗುವುದಾದರೆ ನಾನು ಸದಾಕಾಲ ನರಕದಲ್ಲಿ ನವೆಯಲಿಕ್ಕೂ ಸಿದ್ಧನಿದ್ದೇನೆ. —ಭೀಮಭಾಯಿ (೧೯ ನೇ ಶತಕ)

**ಪಂಜಾಬಿ:** ಇರುಳ ಕಗ್ಗತ್ತಲೆಷ್ಟೇ ಇರಲಿ, ಬೆಳ್ಳಗಿದ್ದುದು ಬಿಳಿದಾಗಿಯೇ ಉಳಿಯುತ್ತದೆ. —ಗುರು ನಾನಕ (೧೫ ನೇ ಶತಕ)

**ಸಂಸ್ಕೃತ:** ಸುಂದರಾಕೃತಿಗಳಿಗೆ ಒಪ್ಪದ ಆಭರಣಗಳಾವುವು ? —ಕಾಲಿದಾಸ

**ತಮಿಳು:** ಇದೆಲ್ಲವೂ ನನ್ನದು; ಮನುಜರೆಲ್ಲ ನನ್ನ ಬಂಧುಗಳು. —ಸಂಗಂ ಸಾಹಿತ್ಯ

**ತೆಲುಗು:** ನೆಲವಲ್ಲ, ಜನರು ದೇಶವನ್ನು ರಚಿಸುವರು. —ಅಪ್ಪಾರಾವ್ (೨೦ ನೇ ಶತಕ)

**ಉರ್ದು:** ಯಾವುದನ್ನೂ ಸರಳವಾಗಿ ಮಾಡುವುದೇ ಬಲು ಕಠಿಣ; ಮಾನವನಿಗೆ ಕೂಡ ಮನುಷ್ಯತ್ವವೇ ಕಷ್ಟಸಾಧ್ಯವಾಗಿಬಿಟ್ಟಿದೆ. —ಗಾಲಿಬ (೧೯ ನೇ ಶತಕ)

**ಸಿಂಧಿ:** ನಿಜವ ಕಾಣುವ ಕಾಣ್ಕೆಯಿಲ್ಲದ ಬಳಿಕ ಜ್ಞಾನವೆಷ್ಟಿದ್ದರೇನು? —ಶಾ ಲತೀಫ

ಅದೊಂದು ಅಪರೂಪ
ಅನುಭವ—




# ಮಾಸ್ಕೋದಲ್ಲಿ ಹೆರಿಗೆ

ಪಾರ್ವತಿ ತಂಬಿ

ಹೆರಿಗೆಯ ದಿನಗಳು ಸಮೀಪಿಸಿದಾಗ ತವರು ಮನೆಗೆ ಹೋಗುವದು ಭಾರತದ ಸ್ತ್ರೀಯರ ವಾಡಿಕೆ. ಅಂತೆಯೆ ನಾನು ನನ್ನ ಹೆರಿಗೆಗಾಗಿ ಮಾಸ್ಕೋಕ್ಕೆ ಹೋದೆ. ಅಲ್ಲಿ ನನ್ನ ತಾಯಿ ಇದ್ದಳು. ನನ್ನ ತಂದೆ ಶ್ರೀ ಕೆ. ಪಿ. ಎಸ್. ಮೆನನ್ನರು ಮಾಸ್ಕೋದಲ್ಲಿ ಭಾರತದ ರಾಯಭಾರಿಗಳಾಗಿದ್ದರು.

ಸಂಯುಕ್ತ ರಾಷ್ಟ್ರಸಂಘದ ಸೆಕ್ರೆಟರಿಯೆಟ್ಟಿನಲ್ಲಿ ಕೆಲಸ ಮಾಡುತ್ತಿದ್ದ ನನ್ನ ಪತಿ ನನ್ನನ್ನೂ ನಮ್ಮ ಎರಡು ಮಕ್ಕಳನ್ನೂ ಮಾಸ್ಕೋಕ್ಕೆ ತಂದು ಬಿಟ್ಟು ತಮ್ಮ ಕೆಲಸಕ್ಕಾಗಿ ಮರಳಿ ನ್ಯೂಯಾರ್ಕಿಗೆ ತೆರಳಿದರು.

ಮಾಸ್ಕೋದಲ್ಲಿ ನನಗಾದ ಅನುಭವವು ಸುದ್ದಿ ದೃಷ್ಟಿಯಿಂದ ಅಲ್ಲಿ ಜರುಗುವ ಇತರ ಎಷ್ಟೋ ಘಟನೆಗಳಷ್ಟು ಕುತೂಹಲಕಾರಿಯಲ್ಲ, ಮಹ- [illegible] ಆದರೆ ಅದರಿಂದ ರಶಿಯದ ಆಧು[illegible] ಅಲ್ಪಪರಿಚಿತವಾದ ಒಂದು ಅಂಶದ ಮೇಲೆ ತುಸು ಬೆಳಕು ಬೀಳಬಹುದಾಗಿದೆ.

ಮಾಸ್ಕೋಕ್ಕೆ ಬಂದು ಒಂದು ವಾರವಾಗಿತ್ತು. ನನಗಾಗ ಐದನೆಯ ತಿಂಗಳು. ಆಗಲೇ ನನ್ನ ಹೆರಿಗೆಯ ಕಾರ್ಯಕ್ರಮ ಪ್ರಾರಂಭವಾಯಿತು.

ಸ್ತ್ರೀದುಭಾಷಿ ವಾಲಿಯಾ ನನ್ನನ್ನು ವೈದ್ಯಕೀಯ ಕೇಂದ್ರಕ್ಕೆ ಕರೆದೊಯ್ದಳು. ಮಾಸ್ಕೋದ ಅಸಂಖ್ಯಾತ ತೀರ ಸಾದಾ ಕಟ್ಟಡಗಳಲ್ಲಿ ಒಂದಾಗಿತ್ತು ಈ ಕೇಂದ್ರದ ಕಟ್ಟಡ. ಆಸ್ಪತ್ರೆ ಅತಿ ಸ್ವಚ್ಛವಾಗಿದ್ದರೂ ಅಲ್ಲಿಯ ಖುರ್ಚಿ ಮುಂತಾದ ಸಾಮಾನುಗಳೆಲ್ಲ ಉಪಯೋಗಿಸಿ ಜೀರ್ಣವಾದಂತಿದ್ದವು.

ಆಸ್ಪತ್ರೆಯಲ್ಲಿ ನನ್ನ ಸರತಿಗಾಗಿ ಕಾಯುತ್ತ ನಾನು ಕುಳಿತಿದ್ದ ಕೊಠಡಿಯಲ್ಲಿ ಒಬ್ಬ ಚೀನೀ ಗೃಹಸ್ಥ, ಸ್ಕಾಂಡಿನೇವಿಯಾದ ಒರ್ವ ದಂಪತಿಗಳು, ಇನ್ನಿತರ ರಶಿಯನೇತರರು ಇದ್ದರು. ಇದರಿಂದ ಇದು ಕೇವಲ ಹೆರಿಗೆಯ ಆಸ್ಪತ್ರೆಯಲ್ಲ, ಮಾಸ್ಕೋದಲ್ಲಿರುವ ಸಕಲ ವಿದೇಶೀಯರಿಗಾಗಿ

ನ್ಯೂಯಾರ್ಕ ಟೈಮ್ಸಿನಿಂದ ರೂಪಾಂತರ

ಇರುವ ಸಾಮಾನ್ಯ ಆಸ್ಪತ್ರೆಎಂದು ನನಗೆ ತಿಳಿದು ಬಂದಿತು.

ನನ್ನನ್ನು ಒಳಗೆ ಕರೆದೊಯ್ದು ಕೆಲವು ಸ್ತ್ರೀಯರು ನನ್ನ ತೂಕ ನೋಡಿದರು. ಉದ್ದ-ಅಗಲಗಳನ್ನು ಟಿಪ್ಪಣಿ ಮಾಡಿಕೊಂಡರು. ಒಂದಿಷ್ಟೂ ವಿವರ ತಪ್ಪದಂತೆ ಸಂಪೂರ್ಣವಾಗಿ ಪರೀಕ್ಷೆ ಮಾಡಿದರು. ನನಗೆ ಆಗಲಿರುವದು ಮೂರನೆಯ ಮಗು ಎಂದು ತಿಳಿದಾಗ ಅವರು ವಿನೋದವಾಗಿ "ಓ! ಅಂದರೆ ನೀವು 'ಮದರ ಹಿರೋಯಿನ್, (ವೀರಮಾತೆ) ಆಗಬೇಕೆಂದಿದ್ದೀರಾ?" ಎಂದರು.

"ಮದರ ಹಿರೋಯಿನ್" ಎಂದರೆ ಏಳು ಮಕ್ಕಳ ತಾಯಿ. ರಶಿಯದಲ್ಲಿ ಏಳು ಮಕ್ಕಳ ತಾಯಿಗೆ ಬೋನಸ್ ಸಿಗುವದು. ಸರಕಾರದ ಯಾದಿಯಲ್ಲಿ ಅವಳ ಹೆಸರಿಗೆ ಪ್ರಾಶಸ್ತ್ಯ ದೊರೆಯುವದು. ದೇಶದ ಜನಸಂಖ್ಯೆಯನ್ನು ಹೆಚ್ಚಿಸಲು ಪ್ರೋತ್ಸಾಹವೀಯಲೆಂದು ಸರಕಾರ ಈ ರೀತಿಯಾಗಿ ಬಹುಮಕ್ಕಳ ತಾಯಂದಿರಿಗೆ ವಿಶೇಷ ಅನುಗ್ರಹವನ್ನು ತೋರಿಸುತ್ತಿದೆ.

ನನ್ನ ರಕ್ತದಲ್ಲಿ ಕೆಂಪು ಗೋಲಕಗಳ ಸಂಖ್ಯೆ ಕಡಿಮೆಯಾಗಿರುವ ಅಂಶವೊಂದನ್ನು ಬಿಟ್ಟರೆ ನಾನು ಮಗುವನ್ನು ಹೆರಲು ಯೋಗ್ಯಳಾಗಿದ್ದೇನೆ ಎಂದು ಪರೀಕ್ಷಕರು ಹೇಳಿದರು.

"ಪಾವಲಾವ್ ಸಿದ್ಧಾಂತವನ್ನು ಅಭ್ಯಸಿಸಿದ್ದೀರಾ ?" ಎಂದು ಅವರು ನನ್ನನ್ನು ಕೇಳಿದರು. ನಾನು ಅಭ್ಯಸಿಸಿರಲಿಲ್ಲ. ಆದರೆ ಶ್ವಾಸೋಚ್ಛ್ವಾಸ ನಿಯಂತ್ರಣ, ಸ್ನಾಯುಗಳ ನಿಯಂತ್ರಣ ಮುಂತಾದ ಕ್ರಿಯೆಗಳಿಂದ ಹೆರಿಗೆಯ ನೋವನ್ನು ನಿವಾರಿಸಿಕೊಳ್ಳುವದೇ ಪಾವಲಾವ್ ತತ್ವವೆಂದು ನಾನು ಕೇಳಿ ತಿಳಿದಿದ್ದೆ.

"ಅದನ್ನು ಕಲಿಯಲಿಚ್ಛಿಸುತ್ತೀರಾ ?"

ನಾನು ತುಸು ಯೋಚಿಸಿ ಬೇಕಾಗಿಲ್ಲ ಎಂದು ತೀರ್ಮಾನಿಸಿಕೊಂಡೆ.

ಪರೀಕ್ಷಕರು "ಒಳ್ಳೇದು. ಪುನಃ ಬನ್ನಿ. ನಿಮಗೆ ಸುಂದರವಾದ, ಬಲಿಷ್ಠವಾದ ಗಂಡು ಮಗು ಹುಟ್ಟಲಿ" ಎಂದರು.

"ಛೆ! ಛೆ! ನನಗೆ ಹೆಣ್ಣು ಹುಟ್ಟಲಿ" ಎಂದು ನಾನಂದೆ. ನನಗಿದ್ದ ಎರಡೂ ಮಕ್ಕಳು ಗಂಡು.

ನನ್ನ ರಕ್ತ ಶುದ್ಧಿಗಾಗಿ ಅವರು ನನಗೆ ಕೊಟ್ಟ ಔಷಧದಷ್ಟು ಅಸಹ್ಯವಾದ ಔಷಧವನ್ನು ನಾನದುವರೆಗೂ ಸೇವಿಸಿರಲಿಲ್ಲ. ಅದು ಶುದ್ಧ ಕಬ್ಬಿಣದ ರಸವಾಗಿರಬೇಕು. ಆದರೆ ಅದು ಬಲು ಅಗ್ಗವಾಗಿತ್ತು. ರೊಟ್ಟಿ, ಹಾಲು, ಕಾಗದ, ಆಟಿಗೆ ಮುಂತಾದವುಗಳಂತೆ ಔಷಧಿಗಳೂ ಮಾಸ್ಕೊದಲ್ಲಿ ಬಲು ಅಗ್ಗವಾಗಿ ಸಿಗುತ್ತವೆ.

ರಶಿಯನ್ನರಿಗೆ ಶಿಕ್ಷಣದಂತೆ ಔಷಧವೂ ಪುಕ್ಕಟೆಯಾಗಿ ಸಿಗುತ್ತದೆ. ಕೇವಲ ವಿದೇಶಿಯರು ಮಾತ್ರ ಔಷಧಕ್ಕಾಗಿ ರೊಕ್ಕ ಕೊಡಬೇಕಾಗುತ್ತದೆ ಎಂದು ವಾಲಿಯಾ ನನಗೆ ಹೇಳಿದಳು.

ಹದಿನೈದು ದಿನಗಳನಂತರ ನಾನು ಮತ್ತೆ ಆಸ್ಪತ್ರಿಗೆ ಹೋದೆ. ರಕ್ತದಲ್ಲಿ ಸಾಕಷ್ಟು ಸುಧಾರಣೆಯಾಗಿಲ್ಲವೆಂದು ನನಗೆ ಕೆಲವು ಇಂಜೆಕ್ಶನ್‌ಗಳನ್ನು ತೆಗೆದುಕೊಳ್ಳಲು ಹೇಳಿದರು.

"ಈ ಇಂಜೆಕ್ಶನ್‌ಗಳ ನಂತರವೂ ನಿಮ್ಮ ರಕ್ತದಲ್ಲಿ ಸಾಕಷ್ಟು ಸುಧಾರಣೆಯಾಗದಿದ್ದರೆ ನಿಮ್ಮ ದೇಹದಲ್ಲಿ ಒಂದಿಷ್ಟು ಒಳ್ಳೆಯ ರಶಿಯನ್ ರಕ್ತವನ್ನು ತುಂಬಬೇಕಾದೀತು" ಎಂದು ಅಲ್ಲಿಯ ಸುಪರಿಂಟೆಂಡೆಂಟ್ ಹೇಳಿದರು.

ಆದರೆ ನನಗೇಕೋ ಈ ವಿಚಾರ ಸರಿಬೀಳಲಿಲ್ಲ. ಮುಂದೆ ಹದಿನೈದು ದಿನಗಳ ವರೆಗೆ ಪ್ರತಿನಿತ್ಯ ಆಸ್ಪತ್ರಿಗೆ ಹೋಗಿ ಇಂಜೆಕ್ಶನ್ ಮಾಡಿಸಿಕೊಂಡೆ. ಪ್ರತಿನಿತ್ಯವೂ ವಾಲಿಯಾ ನನ್ನ ಜೊತೆ ಇರುತ್ತಿದ್ದಳು. ಅವಳಿಂದ ನಾನು ದಿನಬಳಕೆಯ ಕೆಲ ರಶಿಯನ್ ಮಾತುಗಳನ್ನು ಕಲಿತುಕೊಂಡೆ.

ಆಸ್ಪತ್ರಿಯ ನನ್ನ ಕೊನೆಯ ಭೆಟ್ಟಿಯಲ್ಲಿ ಕ್ಲೆರಾ ಝೆಟ್ಕಿನ್ ಮೆಟರ್ನಿಟಿ ಆಸ್ಪತ್ರಿಗೆ ನನ್ನನ್ನು ಸೇರಿಸಿಕೊಳ್ಳಲು ಒಂದು ಚೀಟಿ ಕೊಟ್ಟರು. ಅವಶ್ಯವೆನಿಸಿದಾಗ ಫೋನ್ ಮಾಡಿದಲ್ಲಿ ನನ್ನನ್ನು ಅಲ್ಲಿಗೊಯ್ಯಲು ವ್ಯಾನ್ ಕಳಿಸುವದಾಗಿ ಹೇಳಿದರು.

ನಾನು ಕ್ಲೆರಾ ಝೆಟ್ಕಿನ್ ಹೆರಿಗೆ ಆಸ್ಪತ್ರೆಗೆ ಹೋದಾಗ ಮೂರುಸಂಜೆಯಾಗಿತ್ತು. ನನ್ನನ್ನು

ಒಳಗಿನ ಕೋಣೆಗೆ ಕರೆದೊಯ್ದು ಮೈಮೇಲೆ ಧರಿಸಿದ್ದ ಎಲ್ಲವನ್ನೂ ಕಳಚಿದರು. ಹಿಂದು ಸ್ತ್ರೀಯರು ಯಾವ ಕಾಲಕ್ಕೂ ತೆಗೆದಿಡದ ಮಂಗಲಸೂತ್ರವನ್ನು ಸಹ ಕಳಚಿದರು. ನನ್ನ ವಸ್ತುಗಳನ್ನೆಲ್ಲ ನನ್ನ ತಾಯಿಗೆ ಕೊಟ್ಟು "ನೀವಿನ್ನು ಮನೆಗೆ ಹೋಗಬಹುದು'' ಎಂದು ಅವಳಿಗೆ ವಿನಯದಿಂದ ಹೇಳಿದರು.

"ಭೆಟ್ಟಿಯ ವೇಳೆ ಯಾವದು ?" ನನ್ನ ತಾಯಿ ಕೇಳಿದಳು.

"ಭೆಟ್ಟಿಯ ವೇಳೆ !'' ಅಲ್ಲಿದ್ದವರಿಗೆಲ್ಲ ಆಶ್ಚರ್ಯವಾಯಿತು.

''ಆಸ್ಪತ್ರಿಯಲ್ಲಿ ಯಾರನ್ನೂ ಬರಗೊಡುವದಿಲ್ಲ ಪ್ರಸವವಾದೊಡನೆ ನಿಮಗೆ ತಿಳಿಸುತ್ತೇವೆ, ನಮಸ್ಕಾರ.''

ನನಗೆ ಆಸ್ಪತ್ರಿಯ ಒರಟಾದರೂ ಅತಿ ಸ್ವಚ್ಛ ಬಟ್ಟೆಗಳನ್ನು ತೊಡಿಸಿದರು. ನಾನು ಬಾಹ್ಯ ಜಗತ್ತಿನ ಸಂಪರ್ಕ ಕಡಿದುಕೊಂಡು ಏಳು ದಿನಗಳನ್ನು ಕಳೆಯಬೇಕಾಗಿದ್ದ ಕೋಣೆಗೆ ನನ್ನನ್ನು ಕರೆದೊಯ್ದರು.

ಅಲ್ಲಿ ನಾನು ಸುಂಕದ ಕಟ್ಟೆಯಲ್ಲಿಯಂತೆ ಅನೇಕ ಪ್ರಶ್ನೆಗಳಿಗೆ ಉತ್ತರವೀಯಬೇಕಾಯಿತು. ಇಲ್ಲಿ ಕೂಡ ಸಂಬಂಧಪಟ್ಟ ಅಧಿಕಾರಿ ಸ್ತ್ರೀಯೇ ಆಗಿದ್ದಳು.

"ನಿಮ್ಮ ವಯಸ್ಸೆಷ್ಟು? ನಿಮಗೆ ಮಕ್ಕಳೆಷ್ಟು? ಹಿಂದೆಂದಾದರೂ ಹೆರಿಗೆ ಕಷ್ಟವಾಗಿದ್ದಿತೆ ?"

ಆ ಸ್ಥಿತಿಯಲ್ಲಿ ಸಾಧ್ಯವಾದಷ್ಟು ಮಟ್ಟಿಗೆ ಚೆನ್ನಾಗಿಯೆ ಉತ್ತರ ಕೊಟ್ಟೆ. ಪ್ರಶ್ನೆಗಳ ಸಂಖ್ಯೆ ಏರುತ್ತಾ ಹೋದಂತೆ ನಾನು "ಬೇಗ ಮುಗಿಸಿ, ಸೂಲಿ ತಾಳಲಾರೆ" ಎಂದೆ.

ಆದರೆ ಆ ಸ್ತ್ರೀಯೇನೂ ವಿಚಲಿತಳಾಗಲಿಲ್ಲ. "ನೀವು ರಶಿಯದಲ್ಲಿದ್ದು ಎಷ್ಟು ಸಮಯವಾಯಿತು ? ನಿಮ್ಮ ಗಂಡ ಏನು ಮಾಡುತ್ತಾರೆ ?" ಎಂದೆಲ್ಲ ಪ್ರಶ್ನೆಗಳನ್ನು ಅವಳು ಕೇಳುತ್ತಲೇ ಹೋದಳು.

ಅಂತೂ ಕೊನೆಗೊಮ್ಮೆ ಪ್ರಶ್ನೆಗಳು ಮುಗಿದವು. ನನ್ನನ್ನು ಮತ್ತೊಮ್ಮೆ ಪರೀಕ್ಷಿಸಿ ಸ್ನಾನಕ್ಕಾಗಿ ಬಚ್ಚಲ ಮನೆಗೆ ಕರೆದೊಯ್ದರು.

"ಮುಂಜಾನೆ ನಾನು ಸ್ನಾನ ಮಾಡಿದ್ದೇನೆ" ನಾನಂದೆ.

"ಆದರೂ ನಿಯಮ ತಪ್ಪಬಾರದು !" ಎಂದು ದಾದಿ ಹೇಳಿದಳು. ಆದರೆ ನಾನು ಈ ಸಲ ಕದಲಲಿಲ್ಲ. ಪುನಃ ಸ್ನಾನ ಮಾಡಲು ನಾನು ನಿರಾಕರಿಸಿದೆ.

ಹತಾಶಳಾಗಿ ದಾದಿ ಹೋಗಿ ಸುಪರಿಂಟೆಂಡೆಂಟರನ್ನು ಕರತಂದಳು. ಅವರು ಬಂದವರೇ ತುಸು ನಕ್ಕು, "ಒಳ್ಳೇದು. ಬಲು ಮೊಂಡ ಹುಡುಗಿ ನೀನು. ಸ್ನಾನವಿಲ್ಲದಿದ್ದರೆ ಇಲ್ಲ. ನಡಿ ಹೆರಿಗೆ ಕೋಣೆಗೆ" ಎಂದರು.

ಹೆರಿಗೆ ಕೋಣೆ ದೊಡ್ಡದಾಗಿತ್ತು. ಪಡದೆಗಳ ಮೂಲಕ ಅಲ್ಲಿ ಅನೇಕ ವಿಭಾಗಗಳನ್ನು ಮಾಡಿದ್ದರು. ನಾನು ಹೋದಾಗ ಅಲ್ಲಿ ನನ್ನ ವಿನಾ ಬೇರಾವ ಸ್ತ್ರೀಯೂ ಇರಲಿಲ್ಲ. ಓರ್ವ ಡಾಕ್ಟರಣಿ ಮತ್ತು ಇಬ್ಬರು ದಾದಿಯರು ನನ್ನ ಯೋಗಕ್ಷೇಮಕ್ಕಾಗಿ ಸಿದ್ಧರಾಗಿ ನಿಂತರು.

ಮಗು ಎರಡೂವರೆ ತಾಸುಗಳ ನಂತರ ಹುಟ್ಟಿತು. ಅದುವರೆಗೂ ಈ ಮೂವರೂ ನನ್ನ ಮಗ್ಗಲನ್ನು ಒಂದು ನಿಮಿಷವೂ ಬಿಟ್ಟು ಹೋಗಲಿಲ್ಲ. ನನ್ನನ್ನು ಸಂತಯಿಸುತ್ತ, ಗಾಳಿ ಹಾಕುತ್ತ ಉಪಚರಿಸಿದರು.

"ಹೆಣ್ಣು" ಎಂಬ ಶಬ್ದ ನನಗೆ ಕೇಳಿಸಿತು.

ಮಗುವಿಗೆ ಸ್ನಾನ ಹಾಕಿ ಮೈಗೆ ಬಟ್ಟೆ ಸುತ್ತಿ ಅರ್ಧತಾಸಿನ ನಂತರ ನನ್ನ ಬಳಿಗೆ ತಂದರು. ಕೂಸಿನ ಮೂಗು ಹೊರತು ಮತ್ತೇನೂ ಕಾಣಿಸಲಿಲ್ಲ.

"ಮೂರು ಕಿಲೊಗ್ರಾಮ್, ಆರುನೂರಾ ನಲವತ್ತು ಗ್ರಾಮ್ಸ" ದಾದಿ ಹೇಳಿದಳು. ಅಂದರೆ ೭॥ ಪೌಂಡುಗಳು ಎಂದು ಲೆಕ್ಕ ಹಾಕಲು ನನಗೆ ಕೆಲವೇಳೆ ಹಿಡಿಯಿತು. (ರಶಿಯದಲ್ಲಿ ಮೆಟ್ರಿಕ್ ತೂಕ ಅಳತೆಗಳು ಜಾರಿಯಲ್ಲಿವೆ.) ಆಗಾಗ ಪರಿಚಾರಿಕೆಯೊಬ್ಬಳು ಬಂದು ನನ್ನನ್ನು ವಿಚಾರಿಸಿಕೊಂಡು ಹೋಗುತ್ತಿದ್ದಳು.

ಅಷ್ಟರಲ್ಲಿ ಪ್ರಸವವೇದನೆಯಿಂದ ಪೀಡಿತಳಾದ ಇನ್ನೊಬ್ಬಳನ್ನು ಅಲ್ಲಿಗೆ ತಂದರು. ವ್ಯಾಯಾಮ ಶಾಲೆಯ ಶಿಕ್ಷಕನೋಪಾದಿಯಲ್ಲಿ ಅವಳಿಗೆ

ಸೂಚನೆಗಳನ್ನು ಕೊಡುತ್ತಿದ್ದ ಡಾಕ್ಟರರ ಧ್ವನಿ ನನಗೆ ಕೇಳಿಸಿತು. ಆ ಹೆಂಗಸು ನರಳಿದ್ದು ಒಮ್ಮೆಯೂ ನನಗೆ ಕೇಳಿಸಲಿಲ್ಲ. ಅಂತೇ ಒಮ್ಮಿಂದೊಮ್ಮೆ ಮಗುವಿನ ರೋದನ ನನ್ನ ಕಿವಿಗೆ ಬಿದ್ದಾಗ ನನಗೆ ಅತ್ಯಾಶ್ಚರ್ಯವಾಯಿತು.

" ಆಂ ! ಇಷ್ಟು ಬೇಗ ಪ್ರಸವವಾಯಿತೇ !" ಎಂದು ದಾದಿಯನ್ನು ಕೇಳಿದೆ.

"ಹೌದು. ಅದು ಪಾವಲಾವ್ ಪದ್ಧತಿ. ಅಲ್ಲದೆ ಇದು ಅವಳ ಮೊದಲನೆಯ ಮಗು," ಎಂದಳಾಕೆ.

ನಂತರ ನನ್ನನ್ನು ನನ್ನ ಕೋಣೆಗೆ ಕರೆದೊಯ್ದರು. ಅಲ್ಲಿ ಇನ್ನೊಬ್ಬಳಿದ್ದಳು. ಮಧ್ಯರಾತ್ರಿಯಾಗಿತ್ತು. ನನಗೆ ತುಂಬ ನೀರಡಿಕೆಯಾಗಿತ್ತಾದ್ದರಿಂದ ನೀರು ಕೇಳಿದೆ. ಒಂದಿಷ್ಟು ತಿಳಿ ಚಹ ಕೊಟ್ಟರು.

ರಾತ್ರಿಯಿಡೀ ನನಗೆ ನೀರಡಿಕೆಯಾಗುತ್ತಿತ್ತು. ನನ್ನ ಹಾಸಿಗೆಗೆ ತಗಲಿಸಿದ್ದ ಗಂಟೆ ಬಾರಿಸಿ ನಾನು ಆಗಾಗ ದಾದಿಯನ್ನು ಕರೆಯುತ್ತಿದ್ದೆ. ಪ್ರತಿಸಲವೂ ಅವಳು ಸಂತೋಷದಿಂದಲೇ ಬರುತ್ತಿದ್ದಳು.

ಮರುದಿನ ಮುಂಜಾನೆ ನನ್ನ ಕೋಣೆಯನ್ನೂ ನನ್ನ ಸಂಗಾತಿಯನ್ನೂ ನಿರುಕಿಸಿದೆ. ನನ್ನ ಜೊತೆಗಾರ್ತಿ ರುಮಾನಿಯದ ಓರ್ವಳಾಗಿದ್ದಳು. ಅವಳಿಗೂ ಮಗಳೊಬ್ಬಳಿದ್ದಳು. ಅವಳ ಗಂಡ ರುಮಾನಿಯ ರಾಯಭಾರಿ ಕಚೇರಿಯಲ್ಲಿ ಕಾರ್ಯದರ್ಶಿಯಾಗಿದ್ದ. ಅವಳ ಹೆಸರು ಏಂಜೆಲಾ.

ನಾವಿಬ್ಬರೂ ಹರಕುಮುರುಕು ರಶಿಯನ್ ಭಾಷೆಯಲ್ಲಿ ಭಾರತ, ರುಮಾನಿಯಗಳ ಬಗ್ಗೆ, ಮಕ್ಕಳು-ಅರಿವೆ-ಸಂಗೀತಗಳ ಬಗ್ಗೆ ಮಾತಾಡುತ್ತಿದ್ದೆವು. ಹಣ್ಣುಹಂಪಲು, ಪುಸ್ತಕಗಳನ್ನು ವಿನಿಮಯ ಮಾಡಿಕೊಳ್ಳುತ್ತಿದ್ದೆವು.

ಈ ಜೊತೆಗಾರ್ತಿ ಹಾಗೂ ಸುಸ್ವಭಾವದ ದಾದಿಯರ ಸಹವಾಸದಲ್ಲಿ ಬಾಹ್ಯ ಸಂಪರ್ಕವಿಲ್ಲದಿದ್ದರೂ ಏಳು ದಿನಗಳು ಸಂತಸದಲ್ಲಿ ಕಳೆದವು. ಯಾರೂ ಬಂದು ನಮಗೆ ಭೆಟ್ಟಿಯಾಗುವಂತಿರಲಿಲ್ಲ. ಫೋನಿನಲ್ಲಿ ಕೂಡ ಮಾತಾಡುವಂತಿರಲಿಲ್ಲ. ನನ್ನ ತಂದೆ-ತಾಯಿಗಳು ಆಗಾಗ ಆಸ್ಪತ್ರಿಯ ಬಾಗಿಲ ವರೆಗೆ ಬಂದು ಹಣ್ಣಿನ ಬುಟ್ಟಿಗಳನ್ನು, ಪುಸ್ತಕಗಳನ್ನು ಮುಟ್ಟಿಸಿ ಹೋಗುತ್ತಿದ್ದರು. ಆಸ್ಪತ್ರಿಯವರು ಕೊಡುತ್ತಿದ್ದ ಆಹಾರ ಸಪ್ಪಗಾಗಿರುತ್ತಿತ್ತು.

ರಾತ್ರಿಯ ಕಾಲವನ್ನು ಬಿಟ್ಟರೆ ಉಳಿದ ಸಮಯದಲ್ಲಿ ನಿರ್ದಿಷ್ಟ ವೇಳೆಗೆ ದಾದಿಯು ಮಗುವನ್ನು ಹಾಲು ಕುಡಿಸಲು ಕರತರುತ್ತಿದ್ದಳು. ಕೂಸುಗಳ ಮೈಗೆ ಅರಿವೆಯನ್ನು ಬಲವಾಗಿ ಸುತ್ತಿರುತ್ತಿದ್ದರಿಂದ ಅವು ಕಟ್ಟಿಗೆಯ ಕೊರಡುಗಳಂತಾಗಿರುತ್ತಿದ್ದವು. ದಾದಿ ಏಕಕಾಲಕ್ಕೆ ಮೂರು-ನಾಲ್ಕು ಕೂಸುಗಳನ್ನು ಎತ್ತಿಕೊಂಡು ಬರಬಹುದಾಗಿತ್ತು.

ಮಗುವಿನ ಮೋರೆಯೊಂದನ್ನು ಬಿಟ್ಟು ದೇಹದ ಉಳಿದೆಲ್ಲ ಭಾಗವನ್ನು ಅರಿವೆಯಿಂದ ಸುತ್ತಿ ಆ ಮೇಲೆ ಒಂದು ಸುರುಳಿಯಾಗಿ ಅರಿವೆಯಲ್ಲಿ ಸುತ್ತಿಡುವದನ್ನು ಕಂಡು ನನಗೆ ಸೋಜಿಗವೆನಿಸಿತು.

"ಎಷ್ಟು ದಿನ ಹೀಗೆ ಸುತ್ತಿಡುತ್ತೀರಿ?" ಎಂದು ಕೇಳಿದೆ.

" ಸುಮಾರು ಎಂಟು ತಿಂಗಳ ವರೆಗೆ."

" ಯಾಕೆ ? "

" ಅದರಿಂದ ಅವಕ್ಕೆ ಆರಾಮಾಗುತ್ತದೆ. ಚಳಿಯಾಗುವದಿಲ್ಲ. ಅಲ್ಲದೆ ಮಿದುಳಿಗೆ ಅಪಾಯಕಾರಿಯಾಗಬಹುದಾದ ಅವುಗಳ ಕೈಕಾಲುಗಳ ಚಲನವಲನಕ್ಕೆ ಇದರಿಂದ ತಡೆಯಾಗುವದು. "

ಇದನ್ನು ಕೇಳಿ ನಾನು ನಕ್ಕಾಗ ದಾದಿಯರು " ಸ್ವಲ್ಪ ತಡೆದು ನೋಡಿರಿ. ನಿಮ್ಮ ಮಗಳು ಬುದ್ಧಿಶಕ್ತಿಯಲ್ಲಿ, ದೇಹದಾರ್ಢ್ಯದಲ್ಲಿ ನಿಮ್ಮ ಗಂಡುಮಕ್ಕಳನ್ನು ಮೀರಿಸುವಳು," ಎಂದರು.

ಈ ರೀತಿಯಾಗಿ ಮಕ್ಕಳನ್ನು ಅರಿವೆಯಲ್ಲಿ ಸುತ್ತಿ ಇಡುವದನ್ನು ಅವಿಭಕ್ತ ಭಾರತದ ವಾಯುವ್ಯ ಗಡಿಯಲ್ಲಿ ನಾನು ನೋಡಿದ್ದೆ. ಸಶಕ್ತ ಪಠಾಣರ ನಾಡದು.

ಪ್ರತಿನಿತ್ಯ ಮೂವರು ಡಾಕ್ಟರರು ಬರುತ್ತಿದ್ದರು. ಓರ್ವರು ನಮ್ಮನ್ನು ಪರೀಕ್ಷಿಸುತ್ತಿದ್ದರು. ಇನ್ನೊಬ್ಬರು ಕೂಸುಗಳ ವಿಚಾರ ಸಲಹೆ ನೀಡುತ್ತಿದ್ದರು. ಮತ್ತೊಬ್ಬರು ಕೋಣೆಯ ತಪಾಸಣೆ ಮಾಡುತ್ತಿದ್ದರು. ಒಮ್ಮೆ ಈ ಡಾಕ್ಟರರು ಬಂದಾಗ ಕಿಟಕಿಯ ಗಾಜಿನ ಮೇಲೆ ನೊಣವೊಂದು ಕುಳಿ

ತಿತ್ತು. ಆಗ ಕೆಲಸದ ಮೇಲಿದ್ದ ದಾದಿಯು ಮುಂದೆ ಎಂಥ ಮಾತುಗಳನ್ನು ಕೇಳಬೇಕಾಯಿತೊ!

ಹತ್ತ ಮೂರನೆಯ ದಿನ ನನಗೆ ಭೇದಿಯ ಔಷಧ ಕೊಟ್ಟರು. ಇಪ್ಪತ್ತುನಾಲ್ಕು ತಾಸುಗಳ ವರೆಗೆ ನಾನು ನಿಶ್ಯಕ್ತಳಾಗಿ ಹೋದೆ.

"ಓ! ಪ್ರಮಾದವಾಯಿತು. ಕ್ಷಮಿಸಿ. ನಾನು ನಿಮಗೆ ರಶಿಯನ್ ಡೋಜ್ ಕೊಟ್ಟೆ. ಭಾರತೀಯರು ಸೂಕ್ಷ್ಮ ಪ್ರಕೃತಿಯವರು ಎಂದು ಕಾಣುತ್ತದೆ" ಡಾಕ್ಟರರು ಹೇಳಿದರು.

ಮೂರನೆಯ ದಿನ ಹಾಸಿಗೆಯಲ್ಲಿ ಕೂಡ್ರಲು ನನಗೆ ಅಪ್ಪಣೆ ಸಿಕ್ಕಿತು. ಐದನೆಯ ದಿನ ಎದ್ದು ನಿಲ್ಲಬಹುದು ಎಂದರು.

ಏಳನೆಯ ದಿನ ಆಸ್ಪತ್ರೆಯಿಂದ ಹೊರಡುವ ಸಮಯ ಬಂದಾಗ, ಮೊದಲು ಈ ಏಕಾಂತ ವಾಸವನ್ನು ನೆನೆದು ಭೀತಿಗೊಂಡಿದ್ದ ನನಗೆ, ಹೋಗಬೇಕಲ್ಲ ಎಂದು ವ್ಯಸನವುಂಟಾಯಿತು.

ನನಗೆ ಇಂಥ ಅನುಭವ ಪುನಃ ಬರಲಾರದು ಎಂದು ನನಗೆ ಖಾತ್ರಿಯಿತ್ತು. ಒಂದು ವೇಳೆ ನನಗೆ ರಶಿಯದ ಅತ್ಯುತ್ತಮ ಆಸ್ಪತ್ರೆಯನ್ನೇ ತೋರಿಸಿರಬಹುದು. ಹಾಗಿದ್ದರೂ ನಾನು ನಿರೀಕ್ಷಿಸಿದ್ದಕ್ಕಿಂತ ಇದು ತೀರ ಹೆಚ್ಚಾಗಿತ್ತು. ವಿದ್ಯುತ್ ಬೀಸಣಿಕೆ, ಗುಂಗಿನ ಔಷಧ ಮುಂತಾದವುಗಳ ಕೊರತೆಯು ಪರಿಚಾರಿಕೆಯರ ಸ್ನೇಹ ಸಹಾನುಭೂತಿಗಳಿಂದ ತುಂಬಿಬಂದಿತ್ತು.

ಹೊರಡುವ ದಿನ ದಾದಿಯರೆಲ್ಲ ನಾನು ಸೀರೆ ಯುಡುವದನ್ನು ನೋಡಲು ನನ್ನಸುತ್ತ ನೆರೆದರು.

"ಮತ್ತೊಮ್ಮೆ ಬನ್ನಿ" ಎಂದರವರು.

ನಾನು ಎಲ್ಲರನ್ನೂ ಔಪಚಾರಿಕವಾಗಿ ಅಭಿನಂದಿಸಿದೆ. ಕಾಣಿಕೆ ಕೊಡಲು ಪ್ರತಿಬಂಧವಿದ್ದುದರಿಂದ ನನ್ನ ತಾಯಿ ತಂದಿದ್ದ ಹೂವಿನ ಗುಚ್ಛಗಳನ್ನು ಎಲ್ಲರಿಗೂ ಕೊಟ್ಟೆ.

ಪ್ರತಿಯಾಗಿ ಅವರು ನನಗೆ ಅರಿವೆಯ ಗಂಟೊಂದನ್ನು—ನನ್ನ ಕೂಸನ್ನು—ಕೊಟ್ಟರು. ಅವಳ ಜನ್ಮ ದಾಖಲೆ, ಅವಳ ಜೋಪಾನದ ಸಲಹೆಗಳು ಮತ್ತು ಅವಳಿಗೆ ಜೀವಮಾನವೆಲ್ಲ ರಶಿಯದಲ್ಲಿ ಪುಕ್ಕಟೆ ಔಷಧೋಪಚಾರವನ್ನು ಒದಗಿಸುವ ಸರ್ಟಿಫಿಕೇಟುಗಳು ನನ್ನ ಕೈ ಸೇರಿದವು.

ಹೊರಗಡೆ ಬಾಗಿಲ ಕಾಯುವವ—ಬಹುಶಃ ಆ ಆಸ್ಪತ್ರೆಯಲ್ಲಿ ಅವನೊಬ್ಬನೇ ಗಂಡಾಳಾಗಿರಬೇಕು—ನಮ್ಮ ಕಾರು ಹೋಗುತ್ತಿದ್ದಾಗ ನಮ್ಮನ್ನು ಕೂಗಿ ಅಭಿನಂದಿಸಿದ.

ಮನೆಗೆ ಮುಟ್ಟಿದೊಡನೆ ನಾನು ಕೂಸಿನ ಮೈಗೆ ಸುತ್ತಿದ್ದ ಅರಿವೆಯನ್ನು ಬಿಚ್ಚಿದೆ. ಮಗು ಕೈಕಾಲು ಅಲ್ಲಾಡಿಸಿತು.

ಅಂದು ರಾತ್ರಿಯಿಡೀ ಮಗು ಅತ್ತಿತು. ಮೊಲೆಯುಣ್ಣಿಸಿದ್ದು, ನಾನಾಬಗೆಯ ಉಪಚಾರಗಳನ್ನು ಮಾಡಿದ್ದು ವ್ಯರ್ಥವಾಯಿತು. ಒಮ್ಮಿಂದೊಮ್ಮೆ ನನಗೆ ಒಂದು ವಿಚಾರ ಹೊಳೆಯಿತು.

ಇತರ ಮಕ್ಕಳನ್ನು ನೋಡಿಕೊಳ್ಳುತ್ತಿದ್ದ ದಾದಿಗೆ ಮಗುವನ್ನು ಅರಿವೆಯಿಂದ ಸುತ್ತಲು ಹೇಳಿದೆ. ಕಟ್ಟಿಸಿಕೊಂಡ ಮೇಲೆ ಕಣ್ಣುರೆಪ್ಪೆಬಡಿಯುವದರೊಳಗಾಗಿ ಮಗು ನಿದ್ದೆ ಮಾಡಿತು. ಆ ದಾದಿಯಿಂದ ಮಗುವನ್ನು ಕಟ್ಟುವ ರೀತಿಯನ್ನು ಕಲಿತೆ. ಕಾಲುಗಳನ್ನು ನೀಟಾಗಿಟ್ಟು, ಕೈಗಳನ್ನು ಎದೆಯ ಮೇಲೆ ಮಡಚಿ, ಒಂದೊಂದು ಅವಯವವನ್ನೂ ಅರಿವೆಪಟ್ಟಿಯಿಂದ ಪ್ರತ್ಯೇಕಿಸಿ ಕಟ್ಟಬೇಕು. ಕಟ್ಟುಬಿಚ್ಚದಂತೆ ಟಾಚಣಿ ಚುಚ್ಚಬೇಕು. ದಾರದಿಂದ ಬಿಗಿಯಬೇಕು.

ನನಗೆ ಇದು ಕಷ್ಟದ ಕೆಲಸವಾಗಿತ್ತು. ಆದರೆ ಮಗು ಅದನ್ನು ಬಯಸುತ್ತಿತ್ತು. ಅದರಿಂದ ಅದಕ್ಕೆ ಸುಖವಾಗುತ್ತಿತ್ತು. ಅದನ್ನು "ಅಲ್ಯುಕಾ" ಎಂಬ ರಶಿಯನ್ ಮುದ್ದಿನ ಹೆಸರಿನಿಂದ ಕರೆಯತೊಡಗಿದೆವು.

ನಾನು ನ್ಯೂಯಾರ್ಕಕ್ಕೆ ಮರಳುವ ದಿನ ಬಂತು. ನಮ್ಮ ಮನೆಯ ದಾದಿ ಕಣ್ಣೀರು ತಂದುಕೊಂಡು ನನ್ನನ್ನು ಒಂದು ಪೆಟ್ಟಿಗೆಯ ಮೇಲೆ ಪೂರ್ವಾಭಿಮುಖವಾಗಿ ಕೂಡ್ರಿಸಿ ನನಗೆ ಶುಭವಾಗಲೆಂದು ಶಿಲುಬೆಯ ಸಂಕೇತ ಮಾಡಿದಳು.

ಅರಿವೆಯ ಗಂಟಿನಂತೆ ಕಾಣುತ್ತಿದ್ದ ಕೂಸು ಮತ್ತು ಸೀರೆಯ ನೆರಿಗೆ ಹಿಡಿದುಕೊಂಡಿದ್ದ ಇಬ್ಬರು ಹುಡುಗರೊಂದಿಗೆ ನಾನು ನ್ಯೂಯಾರ್ಕಕ್ಕೆ ಬಂದೆ.

ಮಗುವಿಗೆ ಈ ಅರಿವೆ ಕಟ್ಟಿನ ರೂಢಿ ತಪ್ಪಿಸುವದು ಬಹಳ ಪ್ರಯಾಸದ್ದಾಯಿತು. ಕಟ್ಟಿದಾಗ ಸುಖದಿಂದಿರುತ್ತಿದ್ದ ಮಗು ಬಿಚ್ಚಿದೊಡನೆ ಜೀವ ಹೋಗುವವರಂತೆ ಕಿರಿಚುತ್ತಿತ್ತು. ಅಂತೂ ಕೊನೆಗೆ ಅರಿವೆ ಕಟ್ಟಿಲ್ಲದೆ ಮಲಗುವ ರೂಢಿಯನ್ನು ಅದಕ್ಕೆ ಮಾಡಲು ಸಾಧ್ಯವಾದಾಗ "ಬದುಕಿದೆ" ಎಂದು ನಿಟ್ಟುಸಿರು ಬಿಟ್ಟೆ.

ಅದರಂತೆ ನಿದಾನವಾಗಿ "ಅಲ್ಲುಕಾ" ಎಂಬ ಹೆಸರನ್ನೂ ಬಿಟ್ಟೆ. ರಾಜಕೀಯ ಕಾರಣಗಳಿಗಾಗಿ ಅಲ್ಲ, ಆದರೆ ನಮ್ಮ ಪದ್ಧತಿಯಂತೆ "ಅಲ್ಲುಕಾ" ಹೋಗಿ "ಆಲು" ಆಗಬಹುದಾಗಿತ್ತು. "ಆಲು" ಎಂದರೆ ಬಟಾಟೆ.

—✦—

## ಆಮಂತ್ರಣಕ್ಕೆ ಉತ್ತರ

ರಾಮಸ್ವಾಮಿ ಲಗ್ನವಾದಾಗ ಆತ ಅನೇಕ ಪ್ರತಿಷ್ಠಿತ ವ್ಯಕ್ತಿಗಳಿಗೆ ಆಮಂತ್ರಣ ಪತ್ರಿಕೆ ಕಳಿಸಿದ್ದ. ಯಾರೂ ಬರಲಿಲ್ಲ. ಆದರೆ ಕೆಲವರಿಂದ ಉತ್ತರಗಳು ಬಂದವು :

ವಿಮರ್ಶಕ— ಶ್ರೀ ರಾಮಸ್ವಾಮಿ ಮತ್ತು ಕಲ್ಯಾಣಿ ದೇವಿಯರ ಶುಭ ವಿವಾಹದ ಆಮಂತ್ರಣ ಪತ್ರಿಕೆ ನೋಡಿದೆವು. ಪತ್ರಿಕೆಯ ಭಾಷೆ ಸುಂದರವಾಗಿದೆ. ಬಣ್ಣಗಳ ಯೋಜನೆ ರಸವತ್ತಾಗಿದೆ. ಕಾಗದ, ಮುದ್ರಣ ಎರಡೂ ಸುಂದರವಾಗಿವೆ. ತಪ್ಪುಗಳ ತಿದ್ದುಪಡಿ ಪತ್ರವೊಂದು ಇರುವದು ಅಗತ್ಯವಾಗಿತ್ತು. ದ್ವಿತೀಯ ಆವೃತ್ತಿಯಲ್ಲಿ ಈ ತಪ್ಪನ್ನು ತಿದ್ದಿಕೊಳ್ಳಬೇಕೆಂದು ಸೂಚಿಸುತ್ತೇವೆ.

ಆಫೀಸ ಮ್ಯಾನೇಜರ—ಕ್ರಮಾಂಕ ೪-ಬ ೧೧೬೬೬।೫೬. ವಿಷಯ—ಶ್ರೀ ರಾಮಸ್ವಾಮಿಯವರ ವಿವಾಹ. ಪತ್ರಕ್ಕಾಗಿ ಅಭಾರಿಯಾಗಿದ್ದೇನೆ. ಈ ವಿಷಯದಲ್ಲಿ ವಿಚಾರ ಮಾಡಿ ಪರಿಸ್ಥಿತಿಯನ್ನು ಯೋಚಿಸಿಕೊಂಡು ಯೋಗ್ಯವಾದದ್ದನ್ನು ಸೂಚಿಸಲಾಗುವದು. ಪತ್ರವ್ಯವಹಾರ ಮಾಡುವಾಗ ಕ್ರಮಾಂಕವನ್ನು ತಿಳಿಸಲು ಮರೆಯು-ಬಾರದು.

ಸಂಪಾದಕ—ಪತ್ರಿಕೆ ಮುಟ್ಟಿತು. ತುಂಬ ಆಭಾರಿಯಾಗಿದ್ದೇನೆ. "ನೃತ್ಯ" ವಿಶೇಷ ಸಂಚಿಕೆಯ ಕಾರ್ಯಭಾರ ಹೆಚ್ಚಾಗಿರುವದರಿಂದ ಬರೆಯಲು ವಿಲಂಬವಾಯಿತು. ಕ್ಷಮೆಯಿರಲಿ. ನೀವು ಕಳಿಸಿದ ಪತ್ರಿಕೆಯ ವಿಷಯವನ್ನು ನಮ್ಮ ಪತ್ರಿಕೆಯಲ್ಲಿ ಪ್ರಕಟಿಸಲಾಗದ್ದಕ್ಕೆ ವಿಷಾದವಾಗುತ್ತದೆ. ಬಂದ ಲೇಖಗಳನ್ನು ತಿರುಗಿ ಕಳಿಸುವ ಸಂಪ್ರದಾಯವಿರದ್ದರಿಂದ ಅದನ್ನು ರದ್ದಿಯಲ್ಲಿ ಸೇರಿಸಲಾಗಿದೆ.

ಧುರೀಣ— ಆಮಂತ್ರಣಪತ್ರಿಕೆಗಾಗಿ ಆಭಾರಿಯಾಗಿದ್ದೇನೆ. ಇದೇ ಈಗ ಜಿಲ್ಲಾ ಸಂಚಾರದಿಂದ ತಿರುಗಿ ಬಂದಿದ್ದೇನೆ. ನಾಳೆಯೇ ಒಂದು ಪರಿಷತ್ತಿನ ಉದ್ಘಾಟನೆಗಾಗಿ ಹೋಗಬೇಕಾಗಿದೆ. ನಿಮ್ಮ ವಿವಾಹ ಸಮಾರಂಭಕ್ಕೆ ಬರಲಾಗದ್ದಕ್ಕೆ ವ್ಯಥೆಯಾಗುತ್ತದೆ. ಆ ಸಂದರ್ಭದಲ್ಲಿ ಓದಲಿ ಎಂದು ಸಂದೇಶ ಕಳಿಸುತ್ತಿದ್ದೇನೆ. ಅದರ ಪ್ರತಿಗಳನ್ನು ಸ್ಥಳಿಕ ಪತ್ರಿಕೆಗಳಿಗೆ ಕಳಿಸುವ ಕೃಪೆ ಮಾಡಬೇಕು.

— ಆರ್. ವೆಂಕಟರತ್ನಂ

ಪರಭಾಷಾವ್ಯಾಮೋಹದಿಂದ ಕನ್ನಡ
ಎಂಥೆಂಥ ಶಬ್ದರತ್ನಗಳನ್ನು ಕಳೆದುಕೊಳ್ಳುತ್ತಿದೆ !

# ಕಣ್ಮರೆಯಾಗುತ್ತಿರುವ ಕನ್ನಡ

ಎಲ್. ಗುಂಡಪ್ಪನವರ ಭಾಷಣದಿಂದ

ಕನ್ನಡಿಗರು ತುಂಬ ಉದಾರಿಗಳು. ಎಷ್ಟೋ ವೇಳೆ ಅವರ ಔದಾರ್ಯ ಎಲ್ಲೆ ಮೀರಿರುವುದು ಉಂಟು.

ಭಕ್ತಿ ಭಂಡಾರಿ ಬಸವಣ್ಣನವರು "ತನುವ ಬೇಡಿದಡೀವೆ; ಮನವ ಬೇಡಿದಡೀವೆ; ಧನವ ಬೇಡಿದಡೀವೆ" ಎಂದು ಆಡಿ ಆಡಿದಂತೆ ನಡೆಯುತ್ತಿದ್ದರಂತೆ. ಇತ್ತೀಚಿನ ಕನ್ನಡಿಗರು ನಾವು ಬೇರೊಂದು ರೀತಿಯಿಂದ ಅವರನ್ನು ಅನುಕರಿಸುತ್ತಿದ್ದೇವೆ. ನಾವು "ನಡೆಯ ಬೇಡಿದಡೀವೆ; ನುಡಿಯ ಬೇಡಿದಡೀವೆ; ನಾಡ ಬೇಡಿದಡೀವೆ; ಬೇಡದೆಯೆ ಈವೆ," ಎಂದು ನುಡಿದು--ನುಡಿಯದಿದ್ದರೂ ನಡೆದು ತೋರಿಸುತ್ತಿದ್ದೇವೆ.

ದಿನಬಳಕೆಯ ಅಚ್ಚ ಕನ್ನಡ ಮಾತುಗಳೆಷ್ಟೋ ಈಗ ಬಳಕೆ ತಪ್ಪುತ್ತಿವೆ. ಕ್ರಮ ಕ್ರಮವಾಗಿ ಮರೆಯಾಗಿ ಹೋಗುತ್ತಿವೆ. ಹಿಂದೆ ಸಂಸ್ಕೃತದ ನಿರರ್ಗಳ ಪ್ರವಾಹದಲ್ಲಿ ಎಷ್ಟೋ ಕನ್ನಡ ಪದಗಳು ಕೊಚ್ಚಿ ಹೋದವು. ಆ ಮೇಲೆ ಇಂಗ್ಲೀಷಿನ ಅಧಿಕಾರವೈಭವದಲ್ಲಿ ಮತ್ತಷ್ಟು ಮಾತುಗಳು ಮರೆಯಾದವು. ಈಗ ರಾಷ್ಟ್ರಭಾಷೆಯೆಂದು ಹೆಸರಾಂತ ಹಿಂದಿಯ ಹಬ್ಬುಗೆಯಲ್ಲಿ ಇನ್ನೂ ಅಷ್ಟು ಕನ್ನಡ ನುಡಿಗಳು ಹಿಂದೆ ಬಿದ್ದು ದೇಶಭಾಷೆ ಬಡವಾಗತೊಡಗಿದೆ. ಇದು ಒಳ್ಳೆಯದಕ್ಕಲ್ಲ. ನಾಡು ನುಡಿ ಜನ ಯಾರಿಗೂ ಇದರಿಂದ ಹಿತವಿಲ್ಲ. ಕನ್ನಡ ನಾಡಿಗೆ ಮಾತ್ರವಲ್ಲ, ಸಮಗ್ರ ಭಾರತಕ್ಕೂ ಇದರಿಂದ ಶುಭವಿಲ್ಲ. ಏಕೆಂದರೆ ಒಂದೊಂದು ಮಾತೂ (ಪದವೂ) ಒಂದೊಂದು ಭಾವನಾರತ್ನ. ಮಾತು ಮರೆಯಾದರೆ ಭಾಷೆಯ ಭಂಡಾರ ಬರಿದಾಗುತ್ತದೆ. ಒಂದೊಂದು ಭಾಷೆಯೂ ಹೀಗೆ ತನ್ನ ಜೀವರತ್ನಗಳನ್ನು ಕಳೆದುಕೊಂಡು ಬರಿದಾಗುತ್ತ ಬಂದರೆ ಸಮಗ್ರ ಭಾರತದ ಭಾವನಾಸಂಪತ್ತಿನ ವಿಸ್ತಾರ ಕುಗ್ಗುತ್ತದೆ. ಕಾಂತಿ ಕುಂದುತ್ತದೆ. ಆದ್ದರಿಂದ ಈಗಲೇ ನಾವು ಎಚ್ಚತ್ತು ಪರಿಸ್ಥಿತಿಯನ್ನು ಅರಿತುಕೊಂಡು ಮುಂಜಾಗ್ರತೆ ವಹಿಸಬೇಕು. ನಮ್ಮ ಭಾಷಾಸಂಪತ್ತನ್ನು ಉಳಿಸಿಕೊಳ್ಳಬೇಕು.

ನಮ್ಮ ಭಾಷಾ ಸಂಪತ್ತು ಕೊರೆಯಾಗುತ್ತಿರುವ ರೀತಿಯನ್ನು ಸ್ವಲ್ಪ ಗಮನಿಸೋಣ. ದೊಡ ದೊಡ್ಡ ಊರುಗಳಲ್ಲಿ ಪಟ್ಟಣಗಳಲ್ಲಿ ವಿಶೇಷವಾಗಿ ಸ್ವಂತ ಮನೆಯಿಲ್ಲದವರೇ ಬಹು ಮಂದಿ. ಅಂಥವರು ವಾಸಕ್ಕೆ ಮನೆ ಹುಡುಕುವಾಗ ಕೇಳಬರುವ ಕೆಲವು ಮಾತುಗಳ ರೀತಿ ಇದು: "ಇದು ನೋಡಿ ಹಾಲು (hall), ಇದು ರೂಂ (room), ಬಾತ್ ರೂಂ (bath room), ಇದು ಕಿಚನ್ನು (kitchen), ಇದು ಡ್ರಾಯಿಂಗ್ ರೂಮು (drawing room), ಇದು ಬೆಡ್ ರೂಮು (bed room), ಇದು ಪ್ಯಾಸೇಜ್ (passage), ಇದೊಂದು ವರಾಂಡಾ- (veranda) — ಇಷ್ಟಿದೆ ಅಕಾಮಡೇಷನ್ನು

‘ಕನ್ನಡ ನುಡಿ’ಯಿಂದ

( accommodation )." ಬೆಂಗಳೂರಿನಂಥ ಪಟ್ಟಣದಲ್ಲಂತೂ ಈ ಶೈಲಿಯು ವಿಶೇಷವಾಗಿ ಕಿವಿಗೆ ಬೀಳುತ್ತದೆ. ಕನ್ನಡದಲ್ಲಿ ಅತಿಯಾಗಿ ಇಂಗ್ಲಿಷ್ ಬೆರಸುತ್ತ ಆ ಮೂಲಕ ಅಚ್ಚ ಕನ್ನಡ ಪದಗಳನ್ನುಹೊರದೂಡುತ್ತಿದ್ದಾರೆ ಎನ್ನಬಹುದು. ಕೋಣೆ, ಚಿಕ್ಕ ಮನೆ, ಅಡಿಗೆ ಮನೆ, ಬಚ್ಚಲು ಮನೆ, ಮಲಗುವ ಮನೆ, ನಡುಮನೆ, ತೊಟ್ಟಿ,ನ-ಡವೆ, ಪಡಸಾಲೆ, ಮೊಗಸಾಲೆ, ವಂಕ, ಅಂಗಳ, ಜಗಲಿ, ಅಟ್ಟ ಮೊದಲಾದ ಪದಗಳು ಮೆಲ್ಲನೆ ಮರೆಯಾಗುತ್ತಿವೆ. ಹಳ್ಳಿಗಾಡಿನಿಂದ ಬಂದು ನೆಲೆಸಿ ಇನ್ನೂ ಬಹುಕಾಲ ಕಳೆದಿಲ್ಲದವರ ಬಾಯಲ್ಲಿ ಮಾತ್ರ ಉಳಿದುಕೊಂಡಿವೆ. ಪಟ್ಟಣದ ಜೀವನ ಪರಿಚಯವಾಗುತ್ತಾಗುತ್ತ ಬಂದಂತೆಲ್ಲ ಇಂಥ ಪದಗಳು ಹಿಂದೆ ಬಿದ್ದು ಎಂದೋ ಒಂದು ದಿನ ಕಣ್ಮರೆಯಾಗಿಬಿಡುತ್ತವೆ.

ಇಷ್ಟೇ ಅಲ್ಲ; ಈ ಪರಭಾಷಾ ವ್ಯಾಮೋಹ, ಅದಕ್ಕಿಂತ ಹೆಚ್ಚಾಗಿ ಸ್ವಭಾಷೆಯ ಮೇಲಿನ ಅಲಕ್ಷ್ಯ, ಜೀವನದ ಇತರ ಕ್ಷೇತ್ರಗಳಿಗೂ ವ್ಯಾಪಿಸಿದೆ. ಉದಾಹರಣೆಗೆ: ಅಪ್ಪ, ಅಮ್ಮ--ಡ್ಯಾಡಿ, ಮಮ್ಮಿ ಆಗಿದ್ದಾರೆ. ಮಗು ಬೇಬಿಯಾಯಿತು. ಮನೆಯ ನಾಯಿಯ ಹೆಸರು ಟೈಗರ್; ಹುಲಿ ಅಥವಾ ಹುಲಿಯ ಅಲ್ಲ. ನಾವು ಔಷಧ ತೆಗೆದು ಕೊಳ್ಳುವುದು 'ಡಾಕ್ಟರ'ರ ಹತ್ತಿರ; ಪಂಡಿತರಿಗೆ ಈಗ ಬೆಲೆಯಿಲ್ಲವಾಗಿದೆ. "ನಮ್ಮ ಫಾದರ್‌ಗೆ ಫೀವರ್ ಬಂದಿದೆ. ಏನಾದರೂ ಮೆಡಿಸಿನ್ ಕೊಡಿ ಸಾರ್" ಎಂಬಂಥ ಮಾತು ಕಿವಿ ಕೊರೆಯುವಷ್ಟು ಕೇಳಬರುತ್ತದೆ.

ಈ ಬಗೆಯ ಇಂಗ್ಲೀಷ್ ವ್ಯಾಮೋಹ ಪಟ್ಟಣಕ್ಕೆ ಮಾತ್ರ ಮೀಸಲಾಗಿಲ್ಲ. ಹಳ್ಳಿಯ ಕಡೆಗೂ ಹರಡಿದೆ. ಬೆಂಗಳೂರಿನಿಂದ ನೂರೈವತ್ತು ಮೈಲಿ ದೂರವಾಗಿ ಒಳನಾಡಿನಲ್ಲಿರುವ ನಮ್ಮ ಹಳ್ಳಿಯಲ್ಲಿ ಅಕ್ಷರವನ್ನರಿಯದ ರೈತ "ಟೇಮೆಷ್ಟಾಯ್ತು ಸ್ವಾಮಿ?" ಎಂದು ಕೇಳುತ್ತಾನೆ. ಬೇರೂರಿಗೆ ದಾರಿ ಕೇಳಿದರೆ "ಈ ರೊಟೇನಾಗೇ (Road) ನೆಟ್ಟಗೆ ಹೋಗಿ ಸ್ವಾಮಿ" ಎನ್ನುತ್ತಾನೆ. "ನಮ್ಮುಡುಗ ಎಂತೆಂತ ಕ್ವಚ್ಚನ್ ( Question )ಹಾಕ್ಯಾನೇಂತೀರ!" "ಅದೀಗ ಪೈಂಟು (Point )" "ಕಂಟೀಸನ್ನಗೇಳ್ಬಡು ( Condition )" ಎಂದು ಮುಂತಾದ ಮಾತುಗಳು ಅವನ ಬಾಯಲ್ಲಿ ಸರಾಗವಾಗಿ ಹೊರಬರುತ್ತವೆ. ಹೊತ್ತು, ದಾರಿ, ರಸ್ತೆ, ಹಾದಿ, ಪ್ರಶ್ನೆ, ಖಂಡಿತವಾಗಿ ಮೊದಲಾದ ಪದಗಳನ್ನು ಅವನು ಮರೆತಿದ್ದಾನೆಯೆಂದಲ್ಲ. ದಿನದಿನವೂ ಬಳಸುವುದಿಲ್ಲವೆಂದಲ್ಲ. ಆದರೆ ಅವಕ್ಕಿಂತ ರೋಟು, ಟೇಮು ಮುಂತಾದವು ಹೆಚ್ಚುನಾಗರಿಕವಾದ, ಗೌರವಾರ್ಹವಾದ ಪದಗಳೆಂದು ಅವನ ಭಾವನೆ. ಈ ಭಾವನೆ ಬಹಳ ಅನರ್ಥಕಾರಿ. ಇದನ್ನು ಈಗಲೆ ತಿದ್ದಿ ಸರಿಪಡಿಸದಿದ್ದರೆ ಕಾಲಕ್ರಮದಲ್ಲಿ ನಾವು ದಿನಬಳಕೆಯ ಎಷ್ಟೋ ಮಾತುಗಳನ್ನು ಪೂರ್ತಿಯಾಗಿ ಕಳೆದುಕೊಳ್ಳಬೇಕಾಗುತ್ತದೆ.

ಈಗ 'ದಿನ' ಕ್ಕೆ ಕನ್ನಡದಲ್ಲಿ ಮಾತೇ ಇಲ್ಲ, 'ಹೊತ್ತು' ಹಿಂದೊಮ್ಮೆ ಈ ಅರ್ಥದಲ್ಲಿ ಸಲುವಳಿಯಾಗುತ್ತಿತ್ತೆಂದು ಕಾಣುತ್ತದೆ. ಈಗ ಅವತ್ತು, ಇವತ್ತು ಎಂಬಲ್ಲಿ ಮಾತ್ರ ಆ ಅರ್ಥ ಉಳಿದಿದೆ. ದಿನಕ್ಕೆ ಇನ್ನೊಂದು ಪದ 'ನಾಳ್'. ಇದು ತಮಿಳಿನಲ್ಲಿ ಈಗಲೂ ಜೀವಂತವಾಗಿದೆ. ಕನ್ನಡದಲ್ಲಿ ಎಂದೋ ಕಣ್ಮರೆಯಾಗಿದೆ. ನಾಳೆಯಲ್ಲಿ ಅದನ್ನು ನಾವು ಗುರುತಿಸಬಹುದು. ಆದರೆ ನಾಳೆ ಎಂದಾದರೂ ಈ ದಿನ ಆದೀತೆ? 'ಅನ್ನ' ಬಂದು ಕೂಳು ಕೀಳಾಗಿ ತಲೆಮರೆಸಿಕೊಂಡಿತು. ಈಗ 'ಕೂಳು' ಹಾಕಿದರೆ ಯಾರಿಗಾದರೂ ಕೋಪ ಬರುತ್ತದೆಯೇ ಹೊರತು ಸಂತೋಷವಾಗುವುದಿಲ್ಲ! ನಮ್ಮ ನೆತ್ತರು ರಕ್ತವಾಯಿತು. ನೇಸರು ತಿಂಗಳುಗಳು ಸೂರ್ಯಚಂದ್ರರಾದರು. ಬೆಳಗು ಬೈಗುಗಳು ಪ್ರಾತಃಕಾಲ ಸಂಧ್ಯಾಕಾಲಗಳಲ್ಲಿ ಮುಳುಗಿಹೋದವು. ಮೂಡುವುದು ಮುಳುಗುವುದು ಕೂಡ ಉದಯಾಸ್ತಗಳಾದುವು. 'ಮೂಡ, ಪಡುವ, ತೆಂಕ, ಬಡಗ' ದಿಕ್ಕುಗಳು ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರಗಳಾದವು. ಈ ಪಟ್ಟಿಯನ್ನು ಹೀಗೆಯೇ ಹೇಳುತ್ತ ಹೋಗಬಹುದು.

ದಿನದಿನದ ವ್ಯವಹಾರದಲ್ಲಿ ಬಳಕೆ ತಪ್ಪಿದ

ಮತ್ತು ಬಹು ವಿರಳವಾಗಿ ಪ್ರಯೋಗವಾಗುತ್ತಿರುವ ಈ ಮಾತುಗಳೆಲ್ಲ ನಮ್ಮ ಸಾಹಿತ್ಯದಲ್ಲಿ ಸ್ಥಾನ ಪಡೆದಿರುವಂಥವೇ. ಹಿಂದಿನ ಕವಿಗಳು ತಮ್ಮ ಕಾಲದಲ್ಲಿ ಬಳಕೆಯಲ್ಲಿದ್ದ ಪದಗಳನ್ನು ಗ್ರಂಥದಲ್ಲಿ ಕೂಡಿಟ್ಟಿದ್ದಾರೆ. ಗ್ರಂಥಸ್ಥವಾಗದೆ ಬಾಯಿಂದ ಬಾಯಿಗೆ ಬರುವ 'ಜನಪದ ಸಾಹಿತ್ಯ'ದಲ್ಲಿಯೂ ಇಂಥ ಎಷ್ಟೋ ಪದಗಳು ಸಿಕ್ಕುತ್ತವೆ. ಅವನ್ನೆಲ್ಲ ಆಯ್ದುಕೊಂಡು ಉಚಿತವರಿತು ಮತ್ತೆ ಬಳಸುತ್ತಾ ಬರುವುದು ಸಾಧ್ಯ. ಅಷ್ಟೇ ಅಲ್ಲ, ಬಹು ಅಗತ್ಯ.

ನಮ್ಮ ಸಾಹಿತ್ಯವನ್ನೂ ಅಕ್ಕಪಕ್ಕದ ಸೋದರ ಭಾಷಾಸಾಹಿತ್ಯಗಳನ್ನೂ ಅಭ್ಯಾಸಮಾಡಿ ನಮ್ಮ ಪದ ಸಂಪತ್ತನ್ನು ಹೆಚ್ಚಿಸಿಕೊಳ್ಳುವುದೇನೋ ಆವಶ್ಯಕ. ಆದರೆ ಅದಕ್ಕಿಂತ ಮುಂಚೆ ಮಾಡಬೇಕಾದ ಮತ್ತೊಂದು ಕೆಲಸವಿದೆ. ನಮ್ಮ ಕನ್ನಡನಾಡಿನಲ್ಲೇ ಒಂದು ಭಾಗದ ಕೆಲವು ಮಾತುಗಳು ಮತ್ತೊಂದು ಭಾಗದವರಿಗೆ ಅರ್ಥವಾಗುವುದಿಲ್ಲ. 'ಕಾಸು' ಎಂಬ ಪದವನ್ನು ನಾನು ಬಳಸಿದ್ದಕ್ಕೆ ನನ್ನ ಬೆಂಗಳೂರಿನ ಸ್ನೇಹಿತರೊಬ್ಬರು "ಇದು ತಮಿಳಿನಿಂದ ತಂದು ಸೇರಿಸಿದ ಪದ, ಕನ್ನಡವಲ್ಲ. ಹೀಗೆ ತಮಿಳು ಪದಗಳನ್ನು ಕನ್ನಡಕ್ಕೆ ಬೆರೆಸಬೇಡಿ," ಎಂದರು. ಹಾಸನ ಚಿಕ್ಕಮಗಳೂರು ಕಡೆಯ ನಮ್ಮ ಮಲೆನಾಡಿನಲ್ಲಿ 'ಕಾಸು' ಸರ್ವಸಾಮಾನ್ಯವಾದ ಪದವೆಂದು ಇವರಿಗೆ ಗೊತ್ತಿಲ್ಲ. ಹೀಗೆ ಅಲ್ಲಲ್ಲೇ ಬಳಕೆಯಿರುವ ಪದಗಳನ್ನೆಲ್ಲ ಕೂಡಿಸಿ ಎಲ್ಲ ಭಾಗದವರಿಗೂ ಅರ್ಥವಾಗುವಂತೆ ವಿವರಿಸಿ ಪ್ರಕಟಿಸುವುದು ಅತ್ಯಾವಶ್ಯಕವಾಗಿದೆ.

ನಮ್ಮ ಭಾಷಾ ಭಂಡಾರವನ್ನು ರಕ್ಷಿಸಿಕೊಳ್ಳಲೂ ಹೆಚ್ಚಿಸಿಕೊಳ್ಳಲೂ ನಾವು ಅನುಸರಿಸಬೇಕಾದ ದಾರಿ ಇಷ್ಟರಿಂದ ಸೂಚಿತವಾಗಿದೆಯೆಂದು ನಂಬಿದ್ದೇನೆ. ಅದರೂ ಒಂದು ಮಾತನ್ನು ಒತ್ತಿ ಹೇಳುವುದು ಅವಶ್ಯವೆಂದು ತೋರುತ್ತದೆ. ಸಮರ್ಥವಾದ ಅಚ್ಚ ಕನ್ನಡ ಪದವಿರುವಾಗ ಅದನ್ನು ಬಿಟ್ಟು ಬೇರೆ ಭಾಷೆಯ ಪದವನ್ನು ಉಪಯೋಗಿಸುವುದು ಹಿತವಲ್ಲ. ಅದರ ಜೊತೆಜೊತೆಯಲ್ಲೇ ಬೇಕಾದರೆ ಬಳಸಿಕೊಳ್ಳಲಿ. ಅದೂ ಆ ಬೇರೆ ಪದದ ಪ್ರಯೋಗದಿಂದ ಯಾವುದಾದರೊಂದು ರೀತಿಯಲ್ಲಿ ಮಾತಿಗೆ ಕಳೆದುಂಬುವಂತಿದ್ದರೆ ಮಾತ್ರ. ಹಾಗಲ್ಲದೆ ಸುಮ್ಮಸುಮ್ಮನೆ ಅನ್ಯ ಭಾಷೆಯ ಪದಗಳನ್ನು ಪ್ರಯೋಗಿಸುತ್ತ ಬಂದರೆ ಅದು ಭಾಷೆಯ ದುರುಪಯೋಗವೆನ್ನಿಸಿಕೊಂಡೀತು.

ಈ ವಿಷಯದಲ್ಲಿ ನಾವು ತಮಿಳರನ್ನು ಅನುಸರಿಸುವುದು ಮೇಲು. ಅವರ ಭಾಷಾಭಿಮಾನಕ್ಕೆ ಎಣೆಯಿಲ್ಲ. ಅವರ ಮಾತಿನಲ್ಲಿ ತಮಿಳಲ್ಲದ ಇತರ ಭಾಷೆಯ ಪದ ನೂರರಲ್ಲಿ ಎಂಟು ಹತ್ತು ಸಿಕ್ಕಿದರೆ ಹೆಚ್ಚು. ಸಂಸ್ಕೃತದಲ್ಲಿ ಮಹಾ ಪಂಡಿತರಾದವರು ಕೂಡ ತಮಿಳಿನಲ್ಲಿ ಬರೆಯುವಾಗ ಅಚ್ಚ ತಮಿಳು ಪದಗಳನ್ನೇ ಬಳಸುತ್ತಾರೆ. ಶ್ರೀಕುಲಶೇಖರಾಳ್ವಾರರ ಗ್ರಂಥಗಳನ್ನು ಇದಕ್ಕೆ ನಿದರ್ಶನವಾಗಿ ಹೇಳಬಹುದು. ಅಂಥವರು ಬರೆದ ತಮಿಳನ್ನು ಜನ ಅರ್ಥ ಮಾಡಿಕೊಳ್ಳುತ್ತಾರೆ. ತಮಿಳು ಪುಸ್ತಕಗಳನ್ನೂ ಪತ್ರಿಕೆಗಳನ್ನೂ ಸಾಮಾನ್ಯ ಜನ, ಕೂಲಿಯವರು ರಿಕ್ಷ ಎಳೆಯುವವರು ಕೂಡ ತಪ್ಪಿಸದೆ ಓದುತ್ತಾರೆ. ಇದರಿಂದ ತಮಿಳು ಪತ್ರಿಕೆಗಳೂ ಪುಸ್ತಕಗಳೂ--ಪ್ರೌಢ ಗ್ರಂಥಗಳು ಕೂಡ--ಹತ್ತಾರು ಸಾವಿರ ಅಚ್ಚಾಗುತ್ತವೆ. ಈ ಸ್ಥಿತಿ ಕನ್ನಡಕ್ಕೂ ಬರಬಾರದೆ?

ನಾವು ಸ್ವಲ್ಪ ಎಚ್ಚರಿಕೆ ವಹಿಸಿದರೆ ಇದು ಸಾಧ್ಯವಾಗುತ್ತದೆ. ಮರೆತುಹೋದ ಒಳ್ಳೆಯ ಮಾತುಗಳನ್ನೆಲ್ಲ ಹುಡುಕಿ ಹೊರತರಬಹುದು. ಸವಕಲು ನಾಣ್ಯದಂತೆ ಕೆಲವು ಭಾಗದ ಅರ್ಥ ಕುಗ್ಗಿ ಹೋದವನ್ನು ಹೊಸ ಮೆರಗು ಕೊಟ್ಟು ಸರಿಪಡಿಸಿ ಬಳಸಿಕೊಳ್ಳಬಹುದು. ಆ ಪದಗಳ ಅಂಗಾಂಗ ರಚನೆಯನ್ನು ಗಮನಿಸಿ ಅಂತಃಸತ್ವವನ್ನರಿತುಕೊಂಡು ಇಂದಿನ ಆವಶ್ಯಕತೆಗೆ ಹೊಂದುವಂತೆ ಹೊಸ ಪದಗಳನ್ನು ಸೃಷ್ಟಿಸಿಕೊಳ್ಳಬಹುದು. ಕಡೆಯ ಪಕ್ಷ ಗ್ರಂಥ ರಚನೆ ಸಾಹಿತ್ಯ ನಿರ್ಮಾಣಗಳಲ್ಲಿಯಾದರೂ ಇದರಿಂದ ವಿಶೇಷ ಫಲ ಪಡೆಯಬಹುದು.

ಅವರು ಮೂಲತಃ ಈ ದೇಶದವರು
ಆದರೆ ಅವರಿಗೇ ಅದು ಗೊತ್ತಿಲ್ಲ

# ಜಿಪ್ಸಿಗಳು ಭಾರತದವರು



ಭಾರತವು ಪಾಶ್ಚಾತ್ಯ ಜಗತ್ತಿಗೆ ನೀಡಿದ ಕಾಣಿಕೆಗಳಲ್ಲಿ ಜಿಪ್ಸಿ ಜನಾಂಗವೂ ಒಂದು. ಕಳೆದ ಐದು ಶತಮಾನಗಳಿಂದ ಯುರೋಪಿನಲ್ಲೆಲ್ಲ ಅವರು ಲೋಕಜೀವನಕ್ಕೆ ತಮ್ಮ ನೃತ್ಯ ಸಂಗೀತಗಳಿಂದ ಒಂದು ಅಪರೂಪವಾದ ಮೆರುಗನ್ನು ಕೊಟ್ಟಿದ್ದಾರೆ.

ಜಿಪ್ಸಿ ಜನರ ಇತಿಹಾಸ ಇಪ್ಪತ್ತನಾಲ್ಕು ಶತಮಾನಗಳ ಕಷ್ಟಕ್ಲೇಶಗಳ ಆಖ್ಯಾಯಿಕೆಯಾಗಿದ್ದರೆ, ಅವರ ಜೀವನವು ಆಮೋದ ಪ್ರಮೋದಗಳ, ನಿಶ್ಚಿಂತ ತೃಪ್ತಿಯ ಕಥೆಯಾಗಿದೆ. ಜಿಪ್ಸಿಗಳು ಐನೂರುವರ್ಷಕ್ಕೆ ಮೇಲ್ಪಟ್ಟು ಯುರೋಪಿನ ಉದ್ಯೋಗಶೀಲ, ಕುಬೇರಪೂಜಕ ವಾತಾವರಣದಲ್ಲಿ ಉಸಿರಾಡಿಸಿದ್ದರೂ ಅವರ ಜೀವನ ದೃಷ್ಟಿ ಅತ್ಯಂತ ಅಯೌರೋಪ್ಯವಾಗಿಯೇ ಉಳಿದಿದೆ. ಅವರಲ್ಲಿ ಧನಪಿಪಾಸೆಯೂ ಇಲ್ಲ, ಉದ್ಯೋಗಪ್ರಿಯತೆಯೂ ಇಲ್ಲ.

ಯುರೋಪಿನಲ್ಲೆಲ್ಲ ಕೆಲ ಲಕ್ಷ ಜಿಪ್ಸಿಗಳಿದ್ದಾರೆ. ಅಮೇರಿಕದಲ್ಲಿ ಕೂಡ ಸುಮಾರು ೩೦,೦೦೦ ಜನ ಜಿಪ್ಸಿಗಳಿರಬೇಕು. ಅವರು ೧೪ನೇ ಶತಮಾನದಲ್ಲಿ ಮೊಟ್ಟಮೊದಲು ಯುರೋಪಿನ ಆಗ್ನೇಯ ಭಾಗದಲ್ಲಿ ಕಾಣಿಸಿಕೊಂಡು ಹಬ್ಬತೊಡಗಿದಂದಿನಿಂದ ಯಾವ ದೇಶದಲ್ಲಿಯೂ ಅವರಿಗೆ ಸ್ವಾಗತವಿದ್ದಿಲ್ಲ--ಈಗಲೂ ಇಲ್ಲ. ಅವರನ್ನು " ಅಲಸಿಗರು, ಅಲಕ್ಷದವರು, ಕೊಳಕರು" ಎಂದು ಎಲ್ಲೆಲ್ಲಿಯೂ ತಿರಸ್ಕರಿಸುವವರೇ, ಪೀಡಿಸುವರೇ. ಯಹೂದ್ಯರನ್ನು ಬಿಟ್ಟರೆ, ಯೌರೋಪ್ಯರ ಕೈಯಲ್ಲಿ ಜಿಪ್ಸಿಗಳಷ್ಟು ಪೀಡಿತವಾದ ಜನಾಂಗ ಬೇರೊಂದಿರಲಾರದು.

ಹಿಟ್ಲರನ ಕಾಲದಲ್ಲಿ ಈ ಪೀಡೆ ಪರಮಾವಧಿಗೇರಿತು. ಸಾವಿರಗಟ್ಟಳೆ ಜಿಪ್ಸಿಗಳು ಅವನ ಗ್ಯಾಸ್ ಕೋಣೆಗಳಲ್ಲಿ ಪ್ರಾಣ ತೆತ್ತರು. ಜರ್ಮನ್ ಡಾಕ್ಟರರು ತಮ್ಮ ಸಂಶೋಧನೆಗಳಲ್ಲಿ ಜಿಪ್ಸಿಗಳನ್ನು ಪ್ರಾಯೋಗಿಕ ಪ್ರಾಣಿಗಳಾಗಿ ಉಪಯೋಗಿ

ವಿವಿಧ ಮೂಲಗಳಿಂದ

ಸಿದ್ದೂ ಉಂಟು. ಇಂಥ ಇಬ್ಬರು ಡಾಕ್ಟರರನ್ನು ಅಮಾನುಷ ಕ್ರೌರ್ಯಕ್ಕಾಗಿ ಯುದ್ಧಾನಂತರ ವಿಚಾರಣೆಗೆ ಗುರಿಪಡಿಸಿದಾಗ, ಅವರು ಪಶ್ಚಾತ್ತಾಪ ವ್ಯಕ್ತಪಡಿಸುವ ಬದಲು ಮಾನವಕುಲದ ಹಿತಕ್ಕಾಗಿ ಜಿಪ್ಸಿಗಳಂಥ ಅನಾರ್ಯ ಜನರ ಮೇಲೆ ತಾವು, ಸಂದರ್ಭ ಸಿಕ್ಕಿದರೆ ಇನ್ನಾದರೂ ಪ್ರಯೋಗ ಮಾಡುವವರೇ ಎಂದರು!

ಆದರೆ ಜಿಪ್ಸಿಗಳು ಕಷ್ಟಕ್ಲೇಶಗಳನ್ನೆಲ್ಲ ಹಾಡುತ್ತಕುಣಿಯುತ್ತಲೇ ಎದುರಿಸಿ ಸಾಗಿದ್ದಾರೆ. ಅವರ ಸಾವಿರಗಟ್ಟಳೆ ಮೈಲಿನ ಸುದೀರ್ಘ ಯಾತ್ರೆಯಲ್ಲಿ ಗಿಟಾರ, ಸಿತಾರ, ಮಂಡೋಲಿನ್ ವಾದ್ಯಗಳು ಮಾತ್ರ ಅವರ ಆಸ್ತಿಯಾಗಿ, ನಿರಂತರ ಸಂಗಾತಿಗಳಾಗಿ ಬಂದಿವೆ. ಅವರ ಈ ಮನೋಹರ ಹಾಡು ಕುಣಿತಗಳು ಮಾತ್ರವೇ ಅವರನ್ನು ನಾಗರಿಕ ಯೌರೋಪ್ಯರಿಗೆ ಸಹ್ಯವಾಗಿ ಮಾಡಿವೆ. ಕೆಲ ರಶಿಯನ್ ಶ್ರೀಮಂತರು ಈ ಸಂಗೀತ ನೃತ್ಯಗಳಿಗೆ ಮುಗ್ಧರಾಗಿಯೇ ಜಿಪ್ಸಿ ರಮಣಿಯರನ್ನು ಮದುವೆಯಾದದ್ದುಂಟು.

ಜಿಪ್ಸಿ ಜನರನ್ನು ಕೇಳಿದರೆ ಅವರಿಗೆ ತಮ್ಮ ಭಾರತೀಯ ಮೂಲದ ವಿಚಾರ ಗೊತ್ತೇ ಇಲ್ಲ. ಈ ದೇಶವನ್ನು ಅವರು ಬಿಟ್ಟು ಹೋಗಿ ಅಷ್ಟು ದೀರ್ಘ ಕಾಲವಾಯಿತು. ಯುರೋಪಿಗೆ ಅವರು ಮೊದಲು ಬಂದಾಗ ತಾವು ಇಜಿಪ್ತದವರೆಂದು ಹೇಳಿಕೊಂಡರು. ಅದರಿಂದಲೇ ಅವರಿಗೆ ಜಿಪ್ಸಿ ಎಂಬ ಹೆಸರು ಬಿತ್ತು. ೧೫ ನೇ ಶತಮಾನದಲ್ಲಿ ಜಿಪ್ಸಿಗಳ ನಾಯಕನಾಗಿದ್ದ ಮೈಕೇಲನೆಂಬವನು ತನ್ನನ್ನು "ಇಜಿಪ್ತದ ರಾಜಕುಮಾರ" ನೆಂದು ಹೇಳಿಕೊಳ್ಳುತ್ತಿದ್ದನು ಕೂಡ.

ಜಿಪ್ಸಿಗಳು ಭಾರತೀಯ ಬುಡಕಟ್ಟಿನವರಿರಬೇಕೆಂದು ಮೊದಲು ಊಹಿಸಿದವನು ಹಂಗೆರಿಯ ಸ್ಟೀಫನ್ ವಾಲಿಯೆಂಬ ಪಾದ್ರಿ. ೧೭೬೩ರಲ್ಲಿ ಅವನು ಒಂದು ಲೇಖವನ್ನು ಪ್ರಕಟಿಸಿ ಜಿಪ್ಸಿಗಳ ಭಾಷೆಗೂ ಸಂಸ್ಕೃತ ಮತ್ತು ಉತ್ತರ ಭಾರತದ ಆರ್ಯ ಭಾಷೆಗಳಿಗೂ ನಿಕಟ ಸಂಬಂಧವಿರುವುದರಿಂದ ಅವರು ಮೂಲತಃ ಭಾರತದವರೇ ಇರಬೇಕೆಂದು ಅಭಿಪ್ರಾಯಪಟ್ಟನು. ಅನಂತರ ಜಿಪ್ಸಿಗಳ ತಲೆಬುರುಡೆಯ ಆಕೃತಿ ಮೊದಲಾದವುಗಳಿಂದಲೂ ಈ ಮಾತು ಸ್ಥಿರಪಟ್ಟಿತು.

ಜಿಪ್ಸಿಗಳು ತಮ್ಮನ್ನು ರೋಮಾಣಿಗಳೆಂದು ಕರೆದುಕೊಳ್ಳುತ್ತಾರೆ. ಈ ಹೆಸರಿಗೂ ನಮಗೆಲ್ಲ ಪರಿಚಿತವಾದ ಲಮಾಣಿ ಶಬ್ದಕ್ಕೂ ಇರುವ ಸಾಮೀಪ್ಯ ತಟ್ಟನೆ ಹೊಳೆಯುತ್ತದೆ. ಆದರೆ ರಾಜಪುತಸ್ಥಾನದಿಂದ ದಕ್ಷಿಣಕ್ಕೆ ಹಬ್ಬಿದ ಲಮಾಣಿಗಳಿಗೂ ಯುರೋಪಿನ ರೋಮಾಣಿಗಳಿಗೂ ಸಂಬಂಧವಿದ್ದಂತೆ ಕಾಣುವುದಿಲ್ಲ. ಬದಲಿಗೆ ಉತ್ತರ ಭಾರತದ "ಡೋಮ್" ಅಥವಾ "ಡೊಂಬ" ಎಂಬ ಕೀಳು ಜಾತಿಯ ಗಾಯಕ ನರ್ತಕ ಜನರಿಗೂ ಇವರಿಗೂ ಸಂಬಂಧವಿರಬೇಕೆಂದು ಪಂಡಿತರು ತರ್ಕಿಸುತ್ತಾರೆ. ಡೊಂಬರೂ ಜಿಪ್ಸಿಗಳಂತೆ ಸಂಚಾರಿ ಜನರು; ಇವರಂತೆಯೇ ಜಾನಪದ ನೃತ್ಯ ಸಂಗೀತಗಳಲ್ಲಿ ನಿಪುಣರು.

ಭಾರತದ ಡೊಂಬರು ರೊಂಬರಾಗಿ ಯುರೋಪನ್ನು ಹೇಗೆ ಸೇರಿದರೆಂಬುದು ಇಂದಿಗೂ ತರ್ಕವಾಗಿಯೇ ಉಳಿದಿದೆ. ಈ ಜನರ ರಕ್ತದಲ್ಲಿ ಏನೋ ಒಂದು ಚರಪಿಶಾಚಿ ಮನೆಮಾಡಿಕೊಂಡು ಅವರನ್ನು ನಿಂತ ನೆಲೆಯಲ್ಲಿ ನಿಲ್ಲದಂತೆ ಮಾಡಿತೇನೋ. ಮೂಲತಃ ಅವರು ಗಂಗಾತೀರದವರಿರಬೇಕು. ತಮ್ಮ ನಿರಂತರ ಸಂಚಾರಿ ಜೀವನದಲ್ಲಿ ಅವರು ಈಶಾನ್ಯ ಭಾರತವನ್ನು ಸೇರಿ ಅಲ್ಲಿ ಅನೇಕ ಶತಮಾನಗಳನ್ನು ಕಳೆದಿರಬೇಕು.

ಅವರನ್ನು ಭಾರತದ ಹೊರಗೆ ಎಳೆದದ್ದು ಅಥವಾ ನೂಕಿದ್ದು ಏನಾಗಿರಬಹುದು? ಗ್ರೀಕ್ ವಿಜೇತ ಸಿಕಂದರನ ದಾಳಿಯಾದಾಗ ಮತ್ತು ಅನಂತರ ಈ ಬಡ ಜನಾಂಗವು ಭಾರತದಾಚೆಗೆ ಅಟ್ಟಲ್ಪಟ್ಟಿರಬೇಕೆಂಬುದು ಒಂದು ಊಹೆ.

೧೧ ನೇ ಶತಮಾನದಲ್ಲಿ ಇರಾಣದ ಪುರಾತನ ರಾಜರನ್ನು ಕುರಿತು ಮಹಾಕಾವ್ಯ ಬರೆದ ಫಿರ್ದೂಸಿಯು ತನ್ನ "ಶಾಹನಾಮಾ"ದಲ್ಲಿ ಒಂದು ಐತಿಹ್ಯವನ್ನು ಬಣ್ಣಿಸಿದ್ದಾನೆ. ೫ ನೇ ಶತಮಾನದಲ್ಲಿ; ಇಸ್ಲಾಮದ ಉದಯಕ್ಕೂ ಹಿಂದೆ, ಇರಾಣದ ಅರಸನಾಗಿದ್ದ ಬೈರಾಮ ಗೂರನು ಭಾರತದಿಂದ ಹತ್ತುಸಾವಿರ ಗಾಯಕರನ್ನು ಬರಮಾಡಿ

ಕೊಂಡನು. "ಇಲ್ಲಿ ನೀವು ನೆಲಸಿರಿ. ನನ್ನ ಬಡ ಪ್ರಜೆಗಳು ನೃತ್ಯ-ಸಂಗೀತಗಳ ಸುಖ ಶ್ರೀಮಂತರ ಮೀಸಲು ನೈವೇದ್ಯವಾಗಿಬಿಟ್ಟಿದೆಯೆಂದು ದೂರುತ್ತಾರೆ. ನೀವು ಅವರಿಗೆ ನಿಮ್ಮ ನಾಟ್ಯ-ಸಂಗೀತಗಳ ರಸವನ್ನು ಉಣಬಡಿಸಿರಿ," ಎಂದು ಹೇಳಿ ಅವರಿಗೆ ಕೃಷಿಗಾಗಿ ಭೂಮಿಕಾಣಿಗಳನ್ನೂ ದನಎತ್ತುಗಳನ್ನೂ ಕತ್ತೆಗಳನ್ನೂ ಬೀಜಕ್ಕೆ ಧಾನ್ಯಗಳನ್ನೂ ದಯಪಾಲಿಸಿದನು. ಆದರೆ ಈ ಗಾಯಕರು ನೆಲಸಲಿಲ್ಲ, ಕೃಷಿಮಾಡಲೂ ಇಲ್ಲ. ಪರಿಶ್ರಮ ಅವರಿಗೆ ಕಲ್ಪನಾತೀತವಾಗಿತ್ತು. ಅವರು ಬೀಜಗಳನ್ನು ಬಿತ್ತುವ ಬದಲು ಅಟ್ಟು ತಿಂದರು; ದನ-ಕರುಗಳನ್ನು ಕೊಂದು ಸ್ವಾಹಾಕರಿಸಿದರು; ಕೇವಲ ಹಾಡಿದರು, ಬಾರಿಸಿದರು, ಕುಣಿದರು. ಸುಮ್ಮನೆ ದೇಶವೆಲ್ಲ ಅಲೆದರು. ಕೊನೆಗೆ ಹುಟ್ಟುಸೋಮಾರಿಗಳಾದ ಈ ಗಾಯಕರಿಗೆ ಬೇಸತ್ತು ಬೈರಾಮನು ಅವರ ಡೇರೆಗಳನ್ನೂ ಕಂಬಳಿ ದುಪ್ಪಟಿಗಳನ್ನೂ ಅವರ ಕತ್ತೆಗಳ ಮೇಲೆ ಹೇರಿಸಿ ಅವರನ್ನು ತನ್ನ ರಾಜ್ಯದಿಂದ ಹೊರಗಟ್ಟಿದನು.

ಫಿರ್ದೂಸಿಯ ಈ ಗಾಯಕರೇ ಜಿಪ್ಸಿಗಳಾಗಿರಬಹುದೇ? ಇವರೂ ಆಗಿರಬಹುದು. ಸಿಂಧದ ಮೇಲೆ ಅರಬರ ಧಾಳಿಯಾದ ಮೇಲೆ ಮತ್ತೂ ಅನೇಕ ಭಾರತೀಯ "ಡೊಂಬ" ಗಾಯಕರು ಪಶ್ಚಿಮಾಭಿಮುಖವಾಗಿ ಹೋಗಿರಬಹುದೆಂದು ಎ ಎಲ್. ಬಾಶಾಮರು ತಮ್ಮ **Wonder That Was India** ದಲ್ಲಿ ಬರೆದಿದ್ದಾರೆ.

ಫಿರ್ದೂಸಿ ಹೇಳಿದ ಸೋಮಾರಿತನ ಇಂದಿಗೂ ಜಿಪ್ಸಿಗಳಲ್ಲಿ ಉಳಿದುಕೊಂಡಿದೆ. ಅವರು ಒಂದೇ ಸ್ಥಳದಲ್ಲಿ ಎಂದೂ ನಿಲ್ಲರು. ಡೇರೆಗಳಲ್ಲಿ ಅವರ ವಾಸ. ಒಂದು ಸ್ಥಳ ಬೇಸರವಾದರೆ ಮತ್ತೊಂದಕ್ಕೆ ಹೊರಟರೇ. ಊರ ಹೊರಗೆ ಬಯಲು ಸ್ಥಳದಲ್ಲಿ ತಂಬುಗಳನ್ನು ಹೊಡೆದು ಸ್ಥಳೀಯ ಜನರನ್ನು ಬಲು ಚಾತುರ್ಯದಿಂದ ಸುಲಿದು ಹೊಟ್ಟೆ ಹೊರೆದುಕೊಳ್ಳುವುದು ಅವರಮುಖ್ಯಉದ್ಯೋಗ. ಲೋಹದ ಕೆಲಸ, ಪಾತ್ರ ಪರಡಿ ದುರಸ್ತಿಗಳಲ್ಲಿಯೂ ಅವರು ನಿಪುಣರು.

ಯೌರೋಪ್ಯರು ಜಿಪ್ಸಿಗಳನ್ನು ಪರೋಪಜೀವಿಗಳೆಂದು ತಿರಸ್ಕರಿಸಬಹುದು. ಆದರೆ ಜಿಪ್ಸಿಗಳು ಅಚ್ಚ ಆರ್ಯರಂತೆ ತಾವೇ ಬಿಳಿಯರಿಗಿಂತ ಶ್ರೇಷ್ಠರೆಂದೂ ಜಾಣರೆಂದೂ ಬಗೆಯುತ್ತಾರೆ. ಯುರೋಪಿಯನ್ನರನ್ನು ಅವರು "ಗಾರ್ಜಿಯೋ" ಅಂದರೆ ವಿದೇಶೀಯರೆಂದು ಕರೆಯುವರು! ಬಿಳಿ ಮನುಷ್ಯನು ತನ್ನ ಕಾಯದೆಯ ಜಾಲದಲ್ಲಿ ತಾನೇ ಸಿಕ್ಕಿಕೊಂಡು ಒದ್ದಾಡುವ ಮೂರ್ಖನೆಂದು ಅವರ ತಿಳಿವಳಿಕೆ. ಪ್ರಪಂಚದಲ್ಲಿ ಯಾರಾದರೂ ಸ್ವತಂತ್ರ ಮನುಷ್ಯರು ಉಳಿದಿದ್ದರೆ ತಾವೇ ಎಂದು ಅವರೆಂದುಕೊಳ್ಳುತ್ತಾರೆ. ಯುರೋಪಿಯನ್ನರ ಕಾಯದೆಗಳನ್ನು ಲೆಕ್ಕಿಸದೆ ಅವರು ತಮ್ಮ ತಂಬುಗಳಲ್ಲಿ ತಮ್ಮದೇ ಸರಳ ನೀತಿನಿಯಮಗಳನ್ನು ಪಾಲಿಸುತ್ತಾರೆ. ಬಿಳಿಯರು ಕುಡಿದ ಪಾತ್ರದಲ್ಲಿ ಜಿಪ್ಸಿಗಳು ಕುಡಿಯರು; ಅವರು ಮಲಗಿದ ಹಾಸಿಗೆಯಲ್ಲಿ ಮಲಗರು. ಗಂಡಸರು ಕೆಲ ಮಟ್ಟಿಗೆ ಬಿಳಿಯರ ವೇಷ ಭೂಷೆಗಳನ್ನು ಈಚೆಗೆ ಅಂಗೀಕರಿಸಿದ್ದರೂ ಜಿಪ್ಸಿ ರಮಣಿಯರು ತಮ್ಮ ಸನಾತನವಾದ ಬಣ್ಣಬಣ್ಣದ ಲಂಗ, ಬಳೆ, ಕಂಠಾಭರಣ, ಕೇಶಾಭರಣಗಳಿಗೇ ಅಂಟಿಕೊಂಡಿದ್ದಾರೆ.

ಜಿಪ್ಸಿಯ ಸ್ವಾತಂತ್ರ್ಯಕ್ಕೆ ಮಿತಿಯಿಲ್ಲದಂತೆ, ಅವನ ನೈತಿಕ ಕಟ್ಟುಕಟ್ಟಳೆಗಳೂ ಬಿಗಿಯಾಗಿಲ್ಲ. ಕಾಮವಿಚಾರದಲ್ಲಿ ಜಿಪ್ಸಿಗಳು ಸ್ವೇಚ್ಛಾಚಾರಿಗಳೆಂದು ಆರೋಪಿಸಲಾಗಿದೆ. ಆದರೆ ಇದರಲ್ಲಿ ಹುರುಳಿಲ್ಲ. ಜಿಪ್ಸಿ ಹುಡುಗಿಯರು ನಿಜವಾಗಿ ಬಿಳಿಯರಿಗಿಂತ ಶುದ್ಧಚರಿತ್ರರಾಗಿದ್ದಾರೆ. ಅವರ ಮಾತು ಅಸಹ್ಯವಾಗಿರುವುದರಿಂದ ಮಾತ್ರ ನೀತಿಭ್ರಷ್ಟತೆಯ ಆರೋಪ ಬಂದಿದೆಯಷ್ಟೆ.

ಜಿಪ್ಸಿಗಳು ಕಳ್ಳತನದಿಂದ, ಮೋಸದಿಂದ ಜೀವಿಸುವರೆಂಬುದು ನಿಜ. ಆದರೆ ಅದರಲ್ಲಿಯೂ ಅವರು ಕೆಲವು ನೀತಿನಿಯಮಗಳನ್ನು ಪಾಲಿಸುವರು. ಅವರು ದೊಡ್ಡ ಕಳವುಗಳನ್ನು ಮಾಡುವುದು ತೀರ ವಿರಳ. ಬಂದೂಕು ತೋರಿಸಿ ಸುಲಿಯುವುದಂತೂ ಅವರ ಪಾಲಿಗೆ ಶುದ್ಧ ಅಧರ್ಮ. ಚಿಕ್ಕ ಪುಟ್ಟ ಕಳವುಗಳನ್ನು ಅವ

ರೊಂದು ಕಲೆಯೆಂಬಂತೆ, ವಿದ್ಯಾಪ್ರಾವೀಣ್ಯ ಪ್ರದರ್ಶನವೆಂಬಂತೆ, ಮಾಡುತ್ತಾರೆ.

ಜಿಪ್ಸಿ ಗಂಡಸರು ತಾವು ಎಂದೂ ಕದಿಯುವುದಿಲ್ಲ ಎಂದು ಸಾಧಿಸುತ್ತಾರೆ. ತಮ್ಮ ಹೆಂಡಂದಿರೇ ತಮಗಾಗಿ ಸಂಪಾದಿಸುತ್ತಾರೆಂದು ಅವರ ಅಂಬೋಣ. ಇದರಲ್ಲಿ ತಥ್ಯವುಂಟು. ಚಾಕಚಕ್ಯದಲ್ಲಿ, ಮರೆಮೋಸದಲ್ಲಿ ಜಿಪ್ಸಿ ಹೆಂಗಸರು ಪಾರಂಗತರೇ ಸೈ. ಅವರು ಭವಿಷ್ಯ ಹೇಳುವ ಕಲೆಯನ್ನು ಹಸ್ತಗತ ಮಾಡಿಕೊಂಡಿದ್ದಾರೆ. ಮನುಷ್ಯನ ಕಣ್ಣುಗಳನ್ನು ನೋಡಿಯೇ ಅವನ ಹೃದಯವನ್ನು ಓದಿಬಿಡಬಲ್ಲ ಈ ಚದುರೆಯರು ತಮ್ಮ ಬಿನ್ನಾಣದಿಂದ ನೀರು ಕುಡಿದಂತೆ ಹೆಡ್ಡರನ್ನು ನಂಬಿಸಿ ಅವರನ್ನು ಸುಲಿದುಬಿಡುತ್ತಾರೆ. ಅವರ ಮಾಟಕ್ಕೆ ಮರುಳಾಗದ ಪುರುಷರು ಕಲ್ಲೆದೆಯವರೇ ಇರಬೇಕು. ಆದರೆ ಜಿಪ್ಸಿಗಳೆಂದೂ ಸಂಪತ್ತನ್ನು ಶೇಖರಿಸುವುದಿಲ್ಲ.

ಜಿಪ್ಸಿಗಳು ಭಾರತೀಯ ಮೂಲದವರೆಂಬುದಕ್ಕೆ ಇಂದು ಅವರ ಭಾಷೆಯೊಂದೇ ಪ್ರಮಾಣವಾಗಿ ಉಳಿದಿದೆ. ಅವರ ನಿರಂತರ ಯಾತ್ರೆಯಲ್ಲಿ ಅವರು ಸಂಚರಿಸಿದ ನಾಡುಗಳ ಮುದ್ರೆ ಅವರ ಭಾಷೆಯ ಮೇಲೆ ಬಿದ್ದಿದ್ದರೂ ಹಲವು ಶಬ್ದಗಳೂ ಉಚ್ಚಾರಗಳೂ ಇಂದಿಗೂ ಅವರ ಪೂರ್ವಜರ ಭಾರತೀಯತ್ವವನ್ನು ನಿರ್ದೇಶಿಸುತ್ತವೆ. ಏಕ, ದುಯಿ, ತ್ರೀನ್, ಸ್ಟಾರ್, ಪಂಚಿ, ಸೋ,ದೆಸ್, ಬೀಸ್ ಈ ಸಂಖ್ಯಾವಾಚಕಗಳೂ ಜೀಬ್ (ನಾಲಗೆ), ಮಾನುಷ (ಮನುಷ್ಯ), ಬಾಲ (ಕೂದಲು), ಕಾನ (ಕಿವಿ), ನಾಕ (ಮೂಗು), ಕಾಲೊ (ಕಪ್ಪು), ಚಾಚೊ (ಸತ್ಯ) ಇತ್ಯಾದಿ ಅನೇಕ ಶಬ್ದಗಳೂ ಇದಕ್ಕೆ ಸಾಕ್ಷಿ.

ಜಿಪ್ಸಿ ಸಂಗೀತ ಇಂದು ಅವರಿರುವ ದೇಶದ ಜಾನಪದ ಸಂಗೀತವನ್ನೇ ಹೋಲುತ್ತಿದ್ದರೂ ಕೆಲ ಭಾರತೀಯ ಲಕ್ಷಣಗಳು ಅದರಲ್ಲಿ ಉಳಿದುಕೊಂಡಿವೆ. ಭೈರವ ರಾಗದ ಮೇಲೆ ಪ್ರೀತಿ, ಸ್ವರವಿಸ್ತಾರದ ಕ್ರಮ, ಜಟಿಲ ತಾಳಗಳ ಮೋಹ ಇವೆಲ್ಲವೂ ಭಾರತದ ನೆನಪನ್ನು ತರುತ್ತವೆ.

ಜಿಪ್ಸಿಗಳು ಹೆಸರಿಗೆ ಅಲ್ಲಲ್ಲಿನ ಮತಧರ್ಮಗಳನ್ನು ಸ್ವೀಕರಿಸಿದ್ದರೂ ಅವರ ಕೆಲ ರೂಢಿ ಸಂಪ್ರದಾಯಗಳಲ್ಲಿ ಭಾರತದ ಪ್ರತಿಬಿಂಬವಿದೆ. ಮಗು ಹುಟ್ಟಿದರೆ ಜಿಪ್ಸಿಗಳಲ್ಲಿ ಅಸಾಧ್ಯ ಆನಂದ ಸಂಭ್ರಮ; ಸತ್ತವರಿಗಾಗಿ ೭೨ ತಾಸು ಆಕ್ರೋಶ ನಡೆಯುವುದು; ಮದುವೆಯಲ್ಲಿ ಹೆಣ್ಣಿನ ಕಡೆಯವರಿಗೆ ತೆರಕೊಡುವರು—ಇವು ಅಸ್ಪಷ್ಟ ಸಾಮ್ಯಗಳು.

ಭಾರತದಲ್ಲಿ ಹೇಗೋ ಹಾಗೆ ಜಿಪ್ಸಿಗಳಲ್ಲಿಯೂ ಹೆಂಗಸು ಹಡೆದಾಗ ಮೈಲಿಗೆಯೆನಿಸುತ್ತಾಳೆ. ಅವಳು ಡೇರೆಯ ಹೊರಗೇ ಹೆರಬೇಕು. ಸೂಲಗಿತ್ತಿಯರು ಆಮರಣ ಮೈಲಿಗೆ ಜನರು. ಹೆಣಗಳೂ ಅಶುಚಿಯೆಂಬ ನಂಬಿಕೆಯಿರುವುದರಿಂದ ಸಾಯಲಾದವರನ್ನು ಡೇರೆಯಿಂದ ಹೊರಗೊಯ್ದು ಬಯಲಲ್ಲಿ ಜೀವಬಿಡುವಂತೆ ಮಾಡುತ್ತಾರೆ.

ಜಿಪ್ಸಿಗಳ ಇತಿಹಾಸ ಅತಿ ದಾರುಣವಾಗಿದ್ದರೂ ಅವರು ಸಾವಿರಾರು ವರ್ಷಗಳಿಂದ ಅಲೆಯುತ್ತ ತಮ್ಮ ಮೂಲವನ್ನು ಮರೆತಿದ್ದರೂ ಭಾರತೀಯ ರಕ್ತದ ಗುಣವಾದ ಜಾತಿಪ್ರತ್ಯೇಕತೆಯನ್ನು ಅವರು ಗಟ್ಟಿಯಾಗಿ ಅವಚಿಕೊಂಡು ಬಂದಿದ್ದಾರೆ. ಅವರನ್ನು ಯುರೋಪಿನ ಜನಸಾಗರದಲ್ಲಿ ಸಮಾವೇಶಗೊಳಿಸುವ ಎಲ್ಲ ಸಾಮ-ದಂಡೋಪಾಯಗಳು ವ್ಯರ್ಥವಾಗಿವೆ. ಭಾರತೀಯ ಡೊಂಬರು ಇಂದಿಗೂ ಒಂದು ಪ್ರತ್ಯೇಕ ಜಾತಿಯಾಗಿರುವಂತೆ ಯೌರೋಪ್ಯ ಜಿಪ್ಸಿಗಳೂ ಪ್ರತ್ಯೇಕ ಜಾತಿಯಾಗಿ ಉಳಿದಿದ್ದಾರೆ. ೨೦ ನೇ ಶತಕವು ಕೂಡ ಅವರ ಜಾತಿಕಟ್ಟನ್ನು ಮುರಿಯಲು ಅಸಮರ್ಥವಾಗಿದೆ.

---

ಮನಃಪೂರ್ವಕ ಪ್ರಾರ್ಥನೆ ಮಾಡಿದರೆ ಎರಡರಲ್ಲೊಂದು ಸಿದ್ಧಿಸುತ್ತದೆ: ನಮಗೆ ಬಂದ ವಿಪತ್ತಾದರೂ ಪರಿಹಾರವಾಗುತ್ತದೆ ಇಲ್ಲವೆ ಅದನ್ನು ಎದುರಿಸುವ ಧೈರ್ಯವಾದರೂ ಬರುತ್ತದೆ. —ಘೋಸ್ಟಿಕ

ಬೇಸಗೆಯ ಬೇಗೆಗೆ ಕೆಲ
ಉಪಾಯಗಳು—

# ಅಬ್ಬಾ ! ಏನು ಸೆಕೆ !

"ಏನು ಸೆಕೆಯಿದು ಮಹಾರಾಯಾ ! ಈ ಬೇಸಗೆ ಬಂದರೆ ನನ್ನ ಪ್ರಾಣವೇ ಹೋದಹಾಗಾಗುತ್ತದೆ. ನಡಿ. ಹೋಟೇಲಿಗೆ ಹೋಗಿ ಐಸ್ ಸೋಡಾ, ಐಸ್‌ಕ್ರೀಂ ಹಾಕುವಾ. ಸ್ವಲ್ಪ ತಂಪಾದೀತು."

ಹೌದು ಕೇಳಲು ತಂಪು; ದೇಹಕ್ಕೆ ತಂಪಾದೀತೆ ? ನಿಜ ಹೇಳಬೇಕಾದರೆ, ಐಸ್‌ಕ್ರೀಂ, ಐಸ್ ಸೋಡಾ ಸೆಕೆಯನ್ನು ಕಡಿಮೆ ಮಾಡುವುದು ದೂರವಿರಲಿ, ಮೊದಲಿಗಿಂತಲೂ ಹೆಚ್ಚು ಬೇಗೆಯುಂಟುಮಾಡುವುದು.

ನಮಗೆ ಸೆಕೆಯಾಕಾಗುತ್ತದೆಂದು ಮೊದಲು ನೋಡುವಾ. ನಮ್ಮ ದೇಹವೆಂಬುದು ಒಂದು ಒಲೆಯಿದ್ದಂತೆ. ಒಲೆಯು ಕಟ್ಟಿಗೆ ಉರಿಸಿ ಕಾವು ಹುಟ್ಟಿಸುವಂತೆ ನಮ್ಮಶರೀರ ಆಹಾರವನ್ನುಉರಿಸಿ ಶಕ್ತಿಯನ್ನೂ ಉಷ್ಣತೆಯನ್ನೂ ಉಂಟುಮಾಡುತ್ತದೆ. ಈ ಉಷ್ಣತೆಯೇ ನಮ್ಮ ಮೈಯನ್ನು ಬೆಚ್ಚಗಿರಿಸುತ್ತದೆ.

ದೇಹದಲ್ಲಿ ಹುಟ್ಟಿದ ಕಾವು ಮಿತಿಮೀರಿತೆಂದರೆ ನಮಗೆ ಬೇಗೆ ಅನಿಸತೊಡಗುವುದು. ಹೀಗೆ ಮಿತಿಮೀರಿದ ಉಷ್ಣತೆ ದೇಹದಲ್ಲಿ ಶೇಖರವಾಗದಂತೆ ನಮ್ಮ ಚರ್ಮ ಉಷ್ಣತೆಯನ್ನು ಹೊರಚೆಲ್ಲುವ ಕೆಲಸಮಾಡುತ್ತದೆ. ಅದು ಅನಗತ್ಯ ಉಷ್ಣತೆಯನ್ನು ಹೊರಚೆಲ್ಲಿ ಮೈಯನ್ನುತಂಪಾಗಿಸುತ್ತದೆ.

ಆದರೆ ಅಷ್ಟೇ ಸಾಲದು. ನಮ್ಮ ದೇಹದ ಕಾವು ಚರ್ಮಮೂಲಕ ಸಿಕ್ಕಾಬಟ್ಟೆ ಹೊರಬಿದ್ದು ಹೋದರೇನು ಗತಿ ? ಅದಕ್ಕೆ ಒಂದು ಉಷ್ಣತಾನಿಯಂತ್ರಕ ಯಂತ್ರ ಬೇಕು. ಇದು ಮಿದುಳಿನಲ್ಲಿದೆ. ಅದು ಹಲವು ಕ್ರಮಗಳಿಂದ ನಮ್ಮ ದೇಹದ ಉಷ್ಣತೆಯನ್ನು ಸುಮಾರು ೯೮.೬ ಅಂಶ ಫೈರನ್ಹೈಟಿನಲ್ಲಿ ಹದವಾಗಿ ಇಟ್ಟಿರುತ್ತದೆ. ಅದು ಉಷ್ಣತೆಯ ಉತ್ಪಾದನೆಯನ್ನೂ ವಿತರಣೆಯನ್ನೂ ಹಿಡಿತದಲ್ಲಿಡುತ್ತದೆ. ತಿಂದ ಆಹಾರವು ಉಷ್ಣವಾಗಿ ಪರಿವರ್ತನೆ ಹೊಂದುವುದನ್ನು ಅದು ಅಗತ್ಯಕ್ಕನುಸಾರ ನಿಯಂತ್ರಿಸುವುದು. ದೇಹದ ಶಾಖ ಹೆಚ್ಚಾದರೆ ಅದು ರಕ್ತವನ್ನು ಚರ್ಮದ ಕಡೆ ಧಾರಾಳವಾಗಿ ಹರಿಯುವಂತೆ ಪ್ರಚೋದಿಸುತ್ತದೆ. ಉಷ್ಣತೆ ಕಡಿಮೆಯಾದರೆ ಚರ್ಮದ ಕಡೆ ಹೆಚ್ಚು ರಕ್ತ ಹರಿಯದಂತೆ ನೋಡಿಕೊಳ್ಳುತ್ತದೆ. ಹೀಗೆ ಚರ್ಮ ಮೂಲಕ ಉಷ್ಣತೆ ಹೊರಟುಹೋಗುವುದನ್ನು ಅದು ಅಂಕೆಯಲ್ಲಿಡುತ್ತದೆ.

ಬಹಳ ಸೆಕೆಯಾಗಿ ಬಿಟ್ಟರೆ ಮೇಲಿನ ಉಪಕರಣಗಳಷ್ಟೇ ಉಷ್ಣತೆಯನ್ನು ನೀಗಿಸಲು ಸಾಲವು. ಆಗ ಸ್ವೇದ ( ಬೆವರಿನ ) ಗ್ರಂಥಿಗಳು ಕೆಲಸ ಮಾಡುತ್ತವೆ. ಅವು ದೇಹದ ಉಷ್ಣತೆಯನ್ನು ಹಬೆಯ ರೂಪದಲ್ಲಿ ಸಂಗ್ರಹಿಸಿ ಚರ್ಮವನ್ನು ತೇವಗೊಳಿಸುತ್ತವೆ. ಈ ತೇವ ಗಾಳಿಯಲ್ಲಿ ಆರುವಾಗ ಮೈ ತಂಪಾಗುತ್ತದೆ.

ಇದನ್ನು ಅರ್ಥ ಮಾಡಿಕೊಂಡರೆ ನೀವು ಬೇಸಗೆಯಲ್ಲಿ ಶಾಸ್ತ್ರಶುದ್ಧವಾಗಿ ನಿಮ್ಮ ದೇಹವನ್ನು ತಂಪಾಗಿರಿಸಿಕೊಳ್ಳಲು ಉಪಾಯಗಳನ್ನು ಯೋಚಿಸಬಲ್ಲಿರಿ. ಇಲ್ಲಿ **ಹತ್ತು** ಸೂಚನೆಗಳಿವೆ :

( ೧ ) ಶ್ರಮದ ಕೆಲಸಗಳನ್ನು ತಂಪು ಹವೆಯಿರುವ ಬೆಳಗು-ಸಂಜೆ ಹೊತ್ತುಗಳಲ್ಲಿ ಮಾಡಿರಿ. ಶ್ರಮದ ಕೆಲಸ ಮಾಡುವಾಗ ದೇಹದೊಳಗೆ ಉಷ್ಣತೆ ಬಹಳ ಉತ್ಪತ್ತಿಯಾಗುತ್ತದೆ. ಹವೆ

'ಹೆರಾಲ್ಡ್ ಆಫ್ ಹೆಲ್ತ್'ಇಂದ ಸಂಗ್ರಹ

ತಂಪಾಗಿದ್ದರೆ ಈ ಕಾವು ಸುಲಭವಾಗಿ ಆರುವುದು.

(೨) ಸೆಕೆ ವಿಪರೀತವಾಗಿರುವ ಮಧ್ಯಾಹ್ನ ದಲ್ಲಿ ಹಗುರು ಕೆಲಸ ಮಾಡಿರಿ, ಇಲ್ಲವೆ ಸಾಧ್ಯ ವಾದರೆ ವಿಶ್ರಾಂತಿ ತೆಗೆದುಕೊಳ್ಳಿರಿ ಒಳಗೆ ಹೆಚ್ಚು ಕಾವು ಹುಟ್ಟದಿದ್ದರೆ ಹೊರಗಿನ ಕಾವು ಸಹ್ಯವಾಗುತ್ತದೆ.

(೩) ಧಾರಾಳವಾಗಿ ನೀರು ಕುಡಿಯಿರಿ. ಬೆವರಾಗಿ ದೇಹದ ನೀರು ಆರಿದಂತೆ ನೀರನ್ನು ಪೂರೈಸುತ್ತ ಹೋದರೆ ಪುನಃ ಮೈ ಬೆವತು ದೇಹ ತಂಪಾಗಲು ಅನುಕೂಲವಾಗುವುದು. (ದೇಹ ದಲ್ಲಿ ನೀರಿನಂಶ ಕಡಿಮೆಯಾದರೆ ಬೆವರುವುದು ಕಷ್ಟ.) ಬಹಳ ಬೆವರು ಬಂದು ಮೈ ನಿಶ್ಶಕ್ತವಾ ದರೆ ನೀರಿಗೆ ತುಸು ಉಪ್ಪು ಬೆರಸಿ ಕುಡಿಯಿರಿ. ಆಗ ಕಸುವು ಬರುವುದು.

(೪) ಸಡಿಲಾದ ಹಗುರು ಬಟ್ಟೆಗಳನ್ನು ಧರಿಸಿರಿ. ಬಟ್ಟೆಯಲ್ಲಿ ಗಾಳಿ ಸಂಚಾರಕ್ಕೆ ಸಾಕಷ್ಟು ಅವಕಾಶವಿದ್ದರೆ ಬೆವರು ಆರಲು ಸಹಾಯವಾಗು ವುದು. ಇದು ಚರ್ಮವನ್ನು ಶೀತಲಗೊಳಿಸು ವುದು. ಬೇಸಗೆಯ ಬಟ್ಟೆಗಳು ಬಿಳಿದು ಇಲ್ಲವೆ ತಿಳಿ ಬಣ್ಣದವಿದ್ದಷ್ಟು ಒಳಿತು. ತಿಳಿ ಬಣ್ಣಗಳು ಉಷ್ಣತೆಯ ಕಿರಣಗಳನ್ನು ಹೀರಿಕೊಳ್ಳದೆ ಪ್ರತಿ ಫಲಿಸುವಂತೆ ಮಾಡುತ್ತವೆ.

(೫) ಕಿಡಿಕಿ ಬಾಗಿಲು ತೆರೆದಿಟ್ಟು, ಅಥವಾ ಬೀಸಣಿಕೆಗಳನ್ನುಪಯೋಗಿಸಿ ನಿಮ್ಮ ಸುತ್ತು ಗಾಳಿ ಸಂಚಾರಕ್ಕೆ ಅವಕಾಶ ಮಾಡಿ ಕೊಡಿರಿ. ವಾಯುಸಂಚಾರ ಹೆಚ್ಚಿದಷ್ಟೂ ಮೈಯ ಉಷ್ಣತೆ ಬೆವರಿನಲ್ಲಿ ಹೊರಬೀಳಲು ಅನುಕೂಲ.

(೬) ಬಹಳ ಬೇಗೆ ಇದ್ದ ದಿನ ನಸು ಬೆಚ್ಚನ್ನ ನೀರಿನಿಂದ ಎರಡು ಮೂರುಸಲ ಸ್ನಾನ ಮಾಡಿರಿ. ನಸು ಬೆಚ್ಚನ್ನ ನೀರು ರಕ್ತವನ್ನು ಧಾರಾಳವಾಗಿ ಚರ್ಮದತ್ತ ಹರಿಸಿ ಕಾವನ್ನು ಹೊರದೂಡುವುದು. ಬಹಳ ಶೀತವಾದ ನೀರು ಮಿಂದರೆ ಶರೀರ ನಿಜವಾಗಿ ತಂಪಾಗಲಾರದು. ತಣ್ಣನ್ನ ನೀರು ಚರ್ಮದ ಬಳಿ ಹರಿಯುವ ರಕ್ತವನ್ನು ಒಳಗೆ ಓಡಿಸುವುದರಿಂದ ಕಾವಿಗೆ ಹೊರಬರಲು ದಾರಿಯೇ ಇಲ್ಲದಾಗುವುದು.

(೭) ಕೊಬ್ಬು ಕಾವನ್ನು ಕಾಪಾಡುವುದು. ಆದ್ದರಿಂದ ಬೇಸಗೆ ಬರುವುದರೊಳಗೆ ದೇಹದ ಕೊಬ್ಬು ಆದಷ್ಟು ಇಳಿಯುವಂತೆ ಮಾಡಿಕೊ-ಳ್ಳಿರಿ. ಕೃಶ ದೇಹವಿದ್ದರೆ ಸೆಕೆಯ ಬಾಧೆ ಕಡಿಮೆ.

(೮) ಮೇಲಿನ ಕಾರಣಕ್ಕಾಗಿ ಬೇಸಗೆ-ಯಲ್ಲಿ ಆಹಾರನಿಯಂತ್ರಣ ಬೇಕು. ಬೇಳೆ ಮೊದಲಾದ ಪ್ರೋಟೀನು ದ್ರವ್ಯಗಳನ್ನೂ ಬೆಣ್ಣೆ, ಮಾಂಸ ಮೊದಲಾದ ಕೊಬ್ಬು ಹೆಚ್ಚಿಸುವ ಆಹಾರ ವನ್ನೂ ಆದಷ್ಟು ವರ್ಜಿಸಿರಿ. ಕೊಬ್ಬುಳ್ಳ ಆಹಾರ ಗಳು ದೇಹದಲ್ಲಿ ಉಷ್ಣವನ್ನು ಹೆಚ್ಚಾಗಿ ಹುಟ್ಟಿ-ಸುತ್ತವೆ.

(೯) ಮುಟ್ಟಿದರೆ ತಂಪೆನಿಸುವ ಐಸ್-ಕ್ರೀಮ್, ಐಸ್‌ಸೋಡಾ, ಐಸ್‌ನೀರುಗಳ ಮಬ್ಬಿಗೆ ಬೀಳಬೇಡಿರಿ. ಇಂಥ ಅತಿ ಥಂಡಿ ಪದಾ ರ್ಥಗಳು ಹೊಟ್ಟೆಯೊಳಗೆ ಹೋದಕೂಡಲೆ ಅಲ್ಲಿ ಒಂದು ಬಗೆಯ "ಆಘಾತ" ಉತ್ಪನ್ನವಾಗು-ತ್ತದೆ. ಆಗ ರಕ್ತ ಆಘಾತದ ಕಡೆ ಧಾವಿಸಿ ಅಲ್ಲಿಯೇ ಕೂಡಿ ಬೀಳುತ್ತದೆ. ಅಲ್ಲಿ ರಕ್ತದ ಉಷ್ಣತೆಯನ್ನು ನೀಗಿಸುವ ಸಾಧನಗಳಿಲ್ಲ.

ಅಲ್ಲದೆ ಈ ತಂಪಾದ ಆಹಾರ-ಪಾನೀಯಗಳು ಬಹುತರವಾಗಿ ಸಕ್ಕರೆಯಿಂದ ತುಂಬಿರುತ್ತವೆ. ಸಕ್ಕರೆ ದೇಹವನ್ನು ಹೊಕ್ಕೊಡನೆ ಬೇಗನೆ ಉಷ್ಣತೆಯಾಗಿ ಮಾರ್ಪಟ್ಟು ಬೇಗೆಯನ್ನು ಮತ್ತೂ ಹೆಚ್ಚಿಸುತ್ತದೆ. ಇದರ ಬದಲಿಗೆ ಅಷ್ಟು ಥಂಡಿಯಲ್ಲದ ಹದತಂಪು ನೀರನ್ನು ಬೇಕಾದಷ್ಟು ಕುಡಿಯಬಹುದು.

(೧೦) ಕೊನೆಯ ಸಲಹೆಯೆಂದರೆ ಮನ ಸ್ಸನ್ನು ಸಮಾಧಾನದಲ್ಲಿಡಿರಿ. ಸೆಕೆ ಸೆಕೆಯೆಂದು ಗೋಳಾಡಿದಷ್ಟು ಅದರ ಅರಿವು ಹೆಚ್ಚಾಗಿ ನಿಮಗೆ ಮತ್ತೂ ಕಷ್ಟವಾಗುವುದು.



೧೯೫೮ ರಿಂದ ಭಾರತದಲ್ಲಿಯೂ
ಜಾರಿಯಲ್ಲಿ ಬರಲಿರುವ—

# ಮೆಟ್ರಿಕ್ ತೂಕ - ಅಳತೆಗಳ ಕಥೆ

—ಪಾವೆಂ

ಮೊನ್ನೆ ನಾನು ಒಂದು ಸೇರು ಅಕ್ಕಿ ತರಲು ನನ್ನ ಎಂಟು ವರ್ಷದ ಮಗನನ್ನು ಅಂಗಡಿಗೆ ಕಳಿಸಿದೆ. ಅಂಗಡಿಯಾತ ಎರಡು ಸೇರು ಕೊಟ್ಟು ಕಳಿಸಿದ. ಅವನನ್ನು ದೂರಿ ಫಲವಿಲ್ಲ. ನಾನು ಬೇಡಿದ್ದು ಈಗಿನ ಪಕ್ಕಾ ಸೇರು; ಅವನು ಕೊಟ್ಟದ್ದೂ ಸೇರೇ—ಧಾರವಾಡ ಜಿಲ್ಲೆಯ ಕೆಲವೆಡೆ ಪ್ರಚಲಿತವಿದ್ದ ಹಳೇ ಸೇರು, ಅಷ್ಟೇ.

ಈ ತೂಕ-ಅಳತೆಗಳ ಗೊಂದಲ ಭಾರತದಲ್ಲೆಲ್ಲ ಇದೆ. ಮಣಗಳೆಷ್ಟಿವೆ ನೋಡಿರಿ: ರೇಲ್ವೆ ಮಣವೆಂದು ಪ್ರಸಿದ್ಧವಾದ ಬಂಗಾಲಿ ಮಣ ೪೦ ಬಂಗಾಲಿ ಸೇರಿನದು. ಇತರ ಭಾಗಗಳಲ್ಲಿ ೪೮ ಸೇರಿನ ಮಣಗಳಿವೆ. ಹುಬ್ಬಳ್ಳಿಯಲ್ಲಿ ಕೆಲ ವರ್ಷಗಳ ಹಿಂದೆ ಬೆಲ್ಲ ೫೨ ಸೇರಿಗೊಂದು ಮಣ, ಆದರೆ ಕಟ್ಟಿಗೆ ೫೬ ಸೇರಿಗೊಂದು ಮಣ ಇತ್ತು. ಈ ಸೇರುಗಳಾದರೂ ಏಕರೂಪವಾಗಿವೆಯೆ? ಬಂಗಾಲಿ ಸೇರು ಸುಮಾರು ೮೦ ತೊಲೆ ತೂಗುತ್ತಿದ್ದರೆ, ಇತರ ಕಡೆ ೨೪ ತೊಲೆಗೆ ಸೇರು. ಭಾರತೀಯ ತೂಕಗಳನ್ನು ಪೌಂಡುಗಳಿಗೆ ಹೊಂದಿಸಲು ಕೆಲ ವರ್ಷಗಳ ಹಿಂದೆ ಮುಂಬಯಿ ಸರಕಾರ ೨೦ ತೊಲೆಗೆ ಒಂದು ಸೇರೆಂದು ಸಾರಿತು. ಹೀಗಾಗಿ ಉತ್ತರ ಕನ್ನಡದ ದಕ್ಷಿಣ ತುದಿಯ ಭಟಕಳದಲ್ಲಿ ೨೦ ತೊಲೆಗೊಂದು ಸೇರಾದರೆ ದಕ್ಷಿಣ ಕನ್ನಡದ ಉತ್ತರ ತುದಿಯ ಬೈಂದೂರಲ್ಲಿ ಸೇರಿಗೆ ೨೪ ತೊಲೆಯಾಯಿತು. ಮಣ-ಸೇರುಗಳ ಗಲಿಬಿಲಿಯೇ ಸಾಲದಿದ್ದರೆ ಮೈಸೂರಲ್ಲಿ ವೀಸೆ ಪಾವಲಾಪವೂ ಇದೆ.

ತೂಕ-ಅಳತೆಗಳ ಹೆಸರು ಮತ್ತು ವಾಸಿಯ ಗೊಂದಲ ಇಂದು ನಿನ್ನೆಯದೂ ಅಲ್ಲ, ಒಂದು ದೇಶದ್ದೂ ಅಲ್ಲ. ೧೨ ನೇ ಶತಮಾನದ ಕನ್ನಡ ಗಣಿತಶಾಸ್ತ್ರಿ ರಾಜಾದಿತ್ಯನು ತನ್ನ "ವ್ಯವಹಾರ ಗಣಿತ"ದಲ್ಲಿ ಒಂದೊಂದು ಪ್ರದೇಶದಲ್ಲಿ ತೂಕ-ಅಳತೆ ವಾಸಿಗಳು ಒಂದೊಂದು ಬಗೆಯಾಗಿದ್ದು ಇದರಿಂದ ತಗಲು-ಮೋಸಗಳಾಗುತ್ತಿದ್ದುದನ್ನು ಉಲ್ಲೇಖಿಸಿದ್ದಾನೆ.

ನಮ್ಮಲ್ಲಿ ಬ್ರಿಟಿಶ್ ಆಳಿಕೆ ಬಂದ ಮೇಲೆ ಪ್ರಚಾರಕ್ಕೆ ಬಂದ ಇಂಚು-ಫೂಟು-ಗಜಗಳ ಕಥೆ ಕೇಳಿದರೆ ನಗು ಬರುವಂತಿದೆ. ೧೪ ನೇ ಶತಮಾನದಲ್ಲಿ ಇಂಗ್ಲಂಡಿನಲ್ಲಿದ್ದ ಅಳತೆಗಳ ಗೊಂದಲ ತ. ಸಲು ಒಂದನೇ ಹೆನ್ರಿ ಅರಸನು ಒಂದು ಯಾರ್ಡ್



ಎಂದರೆ ತನ್ನ ಮೂಗಿನ ತುದಿಯಿಂದ ಕೈ ಹೆಬ್ಬೆಟ್ಟಿನ ತುದಿಯ ವರೆಗಿನ ದೂರದಷ್ಟು ಎಂದು ಸ್ಥಾಪಿಸಿದನು. ಇದು ಗೊಂದಲವನ್ನೇನೂ ತಪ್ಪಿಸಲಿಲ್ಲ; ಯಾಕಂದರೆ ಅದರಿಂದ ಉದ್ದಳತೆಯು ಆಳುವ ದೊರೆಯ ಅರಸನ ಮೂಗಿನ ನೇರಕ್ಕೆ ಸರಿಯಾಗಿ ಬದಲಾಗುತ್ತ ಹೋಗುವ ಸಂಪ್ರದಾಯ ಬಂತು. ಕುಳ್ಳ ದೊರೆ ಪಟ್ಟವೇರಿದರೆ

‹ ಮದ್ರಾಸ್ ಸಮಾಚಾರ ›ದ ಆಧಾರ

ಯಾರ್ಡು ಕುಳ್ಳಗಾಗುವಂತಾಯಿತು !

ಇದಾಗಿ ನೂರು ವರ್ಷಗಳ ನಂತರ ಎಲಿಜಬೇತ ರಾಣಿ ದಂಡ ( *rod* ) ದ ಅಳತೆಯನ್ನು ಅಷ್ಟೇ ಸ್ವೇಚ್ಛೆಯಿಂದ ನಿರ್ಧರಿಸಿದಳು. ಒಂದಾನೊಂದು ಆದಿತ್ಯವಾರ ಪ್ರಾರ್ಥನೆ ಮುಗಿಸಿ ಚರ್ಚಿನಿಂದ ಹೊರಬರುತ್ತಿದ್ದವರಲ್ಲಿ ೧೬ ಜನರನ್ನು ಹಿಡಿದು, ಒಬ್ಬರ ಹಿಂದೊಬ್ಬರನ್ನು ಮುಂದಿನವನ ಎಡ ಹಿಮ್ಮಡಿಗೆ ಹಿಂದಿನವನ ಎಡ ಉಂಗುಟ ತಗುಲುವಂತೆ ನಿಲ್ಲಿಸಬೇಕು ; ಹೀಗೆ ನಿಂತ ಹದಿನಾರು ಜನರ ಎಡ ಪಾದಗಳು ಒಟ್ಟಾಗಿ ಆವರಿಸಿದ ಉದ್ದವೇ ಕಾಯದೇಶೀರು [illegible] ಅದರ ೧/೧೬ ಅಂಶ ಕಾಯದೇಶೀರು ಅಡಿ ಅಥವಾ ಫೂಟು—ಇದು ಅವಳ ಸುಗ್ರೀವಾಜ್ಞೆಯಾಗಿತ್ತು.

ಭಾರತದಲ್ಲಿಯೂ ತೂಕ ಅಳತೆಗಳು ಯಾವಾಗಲೂ ಶಾಸ್ತ್ರಶುದ್ಧವಾಗಿರಲಿಲ್ಲ. ಕ್ರೋಶ ಎಂದರೆ ಕೂಗಳತೆ. ನಿಮ್ಮ ನಿಮ್ಮ ಕ್ರೋಶವೆಂಬುದು ನಿಮ್ಮ ನಿಮ್ಮ ಕಂಠತ್ರಾಣವನ್ನು ಅವಲಂಬಿಸಿ ಸಣ್ಣ ದೊಡ್ಡದಾಗಿರಬಹುದು! ವ್ಯವಹಾರದಲ್ಲಿ ೨,೦೦೦ ದಂಡವೆಂದರೆ ಕ್ರೋಶವೆಂದು ಹೇಳಿದೆ. ಆದರೆ ಈ ದಂಡವಾದರೂ ನಿಶ್ಚಿತ ಮಾನವಾಗಿತ್ತೆನ್ನಬರುವುದಿಲ್ಲ. ಮೊಳ, ಗೇಣು, ಅಂಗುಲ ಮೊದಲಾದ ಮನುಷ್ಯನ ಕೈಯಳತೆ



ಗಳನ್ನು ಅವು ಅವಲಂಬಿಸಿದ್ದವು. ಅತಿ ಚಿಕ್ಕ ಉದ್ದಳತೆ "ಯವ" ಅಂದರೆ ಜವೆಗೋದಿಯ ಒಂದು ಕಾಳಿನ ಉದ್ದ. ಭಾರತದಲ್ಲಿ ೮ ಜವೆಗೋದಿಗಳ ಉದ್ದ ಒಂದಂಗುಲ. ಆದರೆ ರೋಮನ್ನರಿಗೆ ೩ ಜವೆಗೋದಿಯುದ್ದವೇ ಒಂದಂಗುಲವಾಗಿತ್ತು. ಅವರ ಜವೆಗೋದಿ ಬಹಳ ದೊಡ್ಡದಾಗಿ ಬೆಳೆಯುತ್ತಿದ್ದಿರಬೇಕು

ತೂಕ ಅಳತೆಗಳ ಗೊಂದಲ ತಪ್ಪಿಸಿ, ಅವುಗಳಿಗೊಂದು ಏಕರೂಪ ತಳಹದಿ ಹಾಕುವ ಯತ್ನಗಳು ಮೇಲಿಂದ ಮೇಲೆ ಆಗಿವೆ. ಆದರೆ ಸಾಮಾನ್ಯವಾಗಿ ಜನರು ಅವುಗಳನ್ನು ಕಡೆಗಣಿಸಿ ತಮಗೆ ಪರಿಚಿತವಾದ ವಿಚಿತ್ರ ಅಳತೆಗಳನ್ನೇ ಉಪಯೋಗಿಸುತ್ತ ಬಂದಿದ್ದಾರೆ. "ಮೆಟ್ರಿಕ್ ಪದ್ಧತಿ" ಯೊಂದು ಮಾತ್ರ ಅಪರೂಪವಾದ ಯಶವನ್ನು ಸಂಪಾದಿಸಿತು. ಜನಸಾಮಾನ್ಯರು ಯಾವ ಅಳತೆಯನ್ನೇ ಅನುಸರಿಸಲಿ, ಇಡೀ ಜಗತ್ತಿನಲ್ಲಿ ವಿಜ್ಞಾನಿಗಳು ಮೆಟ್ರಿಕ್ ಪದ್ಧತಿಯನ್ನೇ ಅನುಸರಿಸುತ್ತಾರೆ.

ಮೆಟ್ರಿಕ್ ಪದ್ಧತಿಯು ಉದಯವಾದದ್ದು ೧೮ ನೇ ಶತಕದ ಕೊನೆಗೆ, ಫ್ರೆಂಚ್ ಕ್ರಾಂತಿಯ ಹುಮ್ಮಸದಲ್ಲಿ. ಹಳೆಯ ಕಂದಾಚಾರಗಳನ್ನೆಲ್ಲ ತೊಡೆದು ಹಾಕುವಾಗ ತೂಕ-ಅಳತೆಗಳಿಗೂ ಹೊಸ ಶಾಸ್ತ್ರೀಯ ಮತ್ತು ನೈಸರ್ಗಿಕ ತಳಹದಿ ಹಾಕಲು ಕ್ರಾಂತಿಕಾರರು ಟಾಲಿರಾಂಡನೆಂಬ ಮುತ್ಸದ್ದಿಯ ನೇತೃತ್ವದಲ್ಲಿ ಪಂಡಿತರ ಒಂದು ಸಮಿತಿಯನ್ನು ನೇಮಿಸಿದರು.

ಅಳತೆಗೆ ಭೂಮಿತಾಯಿಗಿಂತ ನೈಸರ್ಗಿಕ ತಳಹದಿ ಸಿಕ್ಕೀತೆ? ಮನುಷ್ಯ ಆಗಲೇ ಭೂಮಿತಾಯಿಯ ಚಲನೆಯನ್ನನುಸರಿಸಿ ಸಾವಿರಾರು ವರ್ಷಗಳಿಂದ ಕಾಲವನ್ನು ಅಳೆಯುತ್ತ ಬಂದಿದ್ದ. ಫ್ರೆಂಚ್ ವಿಜ್ಞಾನಿಗಳು ದೂರದ ಅಳತೆಗೂ ಭೂಮಿತಾಯಿಯನ್ನೇ ಆಶ್ರಯಿಸೋಣ ಎಂದರು.

ಮೆಟ್ರಿಕ್ ಪದ್ಧತಿಯ ಮೂಲ ಅಳತೆ ಮೀಟರ್. ಮೀಟರ್ ಎಂದರೆಷ್ಟು? ಉತ್ತರ ದಕ್ಷಿಣ ಧ್ರುವಗಳನ್ನು ಹಾದುಹೋಗುವ ಒಂದು ರೇಖಾಂಶವನ್ನು ನಾಲ್ಕು ಭಾಗಮಾಡಿ ಒಂದು ಭಾಗವನ್ನು ತಿರುಗಿ ಒಂದು ಕೋಟಿ ಭಾಗ ಮಾಡಿದರೆ ಬರುವ ಉದ್ದವೇ ಮೀಟರ್ ಎಂದು ಅವರು ಗೊತ್ತುಪಡಿಸಿಕೊಂಡರು.

ಆದರೆ ಈ ಬಗೆಯಾದ ಭೂಮಿಯ ಸುತ್ತಳತೆಯನ್ನು ಗೊತ್ತುಹಚ್ಚುವ ಬಗೆ ಹೇಗೆ? ಧ್ರುವದಿಂದ ಧ್ರುವಕ್ಕೆ ದಾರ ಕಟ್ಟಿ ಅಳೆಯಲಾದೀತೆ? ಆದ್ದರಿಂದ ವಿಜ್ಞಾನಿಗಳು ಸಮುದ್ರ ಮಟ್ಟದಲ್ಲಿದ್ದ

ಡಂಕರ್ಕ್ ಮತ್ತು ಬಾರ್ಸೆಲೋನಾ ಪಟ್ಟಣಗಳ ನಡುವಣ ದೂರವನ್ನು ಅಳೆದು ಗಣಿತ ಸಹಾಯದಿಂದ ಭೂಮಿಯ ಸುತ್ತಳತೆಯನ್ನು ಲೆಕ್ಕ ಹಾಕಬೇಕೆಂದರು. ಡಿ ಲಾಂಬರ ಮತ್ತು ಮೆಕ್ಯೆನರೆಂಬ ಇಬ್ಬರು ಇಂಜನಿಯರರು ಈ ಕಾರ್ಯ ಪ್ರಾರಂಭಿಸಿದರು.

ಅವರ ಕೆಲಸ ಸುಲಭವಾಗಿರಲಿಲ್ಲ. ಅನೇಕ ಮೈಲುಗಳ ಅಂತರದಲ್ಲಿದ್ದ ಈ ಪಟ್ಟಣಗಳ ನಡುವಣ ದೂರವನ್ನು ಗಣಿಸುವುದೇ ಕಷ್ಟ ಕಾರ್ಯ; ಸಾಲದ್ದಕ್ಕೆ ಕ್ರಾಂತಿಕಾರರಿಗೆ ಆಗಲೆ ವಿಜ್ಞಾನಿಗಳ ಮೇಲೆ ನಿರರ್ಥಕ ಸಂದೇಹ ಮೂಡಿತ್ತು. ಅವರು ಇವರ ಕಾರ್ಯದಲ್ಲಿ ವಿಘ್ನಗಳನ್ನೊಡ್ಡ ತೊಡಗಿದರು. ಅಂತೂ ಸುಮಾರು ಎಂಟು ವರ್ಷಗಳ ನಂತರ ಅವರು ೧೭೯೮ ರಲ್ಲಿ ತಮ್ಮ ಕೆಲಸ ಮುಗಿಸಿದರು.

ಅನೇಕ ಸಮಿತಿಗಳ ಪರಿಶೀಲನೆಗೊಳಪಟ್ಟ ನಂತರ ೧೭೯೯ ಜೂನ್ ೨೨ ರಂದು ಮೀಟರಿನ ಉದ್ದವು ನಿರ್ಧಾರಗೊಂಡಿತು. ಅಂದು ಒಂದು ಪ್ಲಾಟಿನಂ ಲೋಹದ ಕೋಲನ್ನು ಮೀಟರಿನ ಅಳತೆಗೆ ಸರಿಯಾಗಿ ಮಾಡಿಸಿ ಪ್ಯಾರೀಸಿನ ರಾಷ್ಟ್ರೀಯ ವಿದ್ಯಾಪೀಠದ ಕೋಶಾಗಾರದಲ್ಲಿ ಇರಿಸಲಾಯಿತು. ಇದೇ ಇಂದು ಜಗತ್ತಿಗೆಲ್ಲ ಅಳತೆಯ ಆಧಾರವಾದ ಮೀಟರ್.

ಮೀಟರ್ ಎಂಬುದು ನಮ್ಮ ಮಾತ್ರಾ (=ಅಳತೆ) ಎಂಬ ಸಂಸ್ಕೃತ ಶಬ್ದಕ್ಕೆ ಸಮಾನವಾದ ಲ್ಯಾಟಿನ್ ಶಬ್ದ. ಅದು ಗಜ (ಯಾರ್ಡ್)ಕ್ಕಿಂತ ತುಸು ದೊಡ್ಡದು. ಪರಿವರ್ತಿಸಿದರೆ ಅದು ೩೯.೩೭೧ ಇಂಚುಗಳಷ್ಟಾಗುತ್ತದೆ. ಅದನ್ನು ದಶಾಂಶ ಪದ್ಧತಿಯಂತೆ ಏರಿಳಿಸಿ ಇತರ ಮೆಟ್ರಿಕ್ ಅಳತೆಗಳನ್ನು ಗೊತ್ತುಪಡಿಸಲಾಗಿದೆ. ಮೀಟರನ್ನು ೧೦ ಪಾಲು ಮಾಡಿದರೆ ಡೆಸಿಮಿಟರ್, ೧೦೦ ಪಾಲು ಮಾಡಿದರೆ ಸೆಂಟಿಮಿಟರ್, ೧೦೦೦ ಪಾಲು ಮಾಡಿದರೆ ಮಿಲಿಮೀಟರ್; ಅದೇ ಪ್ರಕಾರ ೧೦ ಮೀಟರ್ ಎಂದರೆ ಡೆಕಾಮೀಟರ್, ೧೦೦ ಮೀಟರಿಗೆ ಒಂದು ಹೆಕ್ಟಾಮೀಟರ್, ೧೦೦೦ ಮೀಟರಿಗೆ ಒಂದು ಕಿಲೋಮೀಟರ್. ಭೂಮಿಯ ದೂರಗಳನ್ನು ಕಿಲೋಮೀಟರಿನಲ್ಲಿ ಅಳೆಯುತ್ತಾರೆ. ಒಂದು ಕಿಲೋಮೀಟರು ೫ ಫರ್ಲಾಂಗಿಗೆ ತುಸು ಕಡಿಮೆ.

ಉದ್ದಳತೆಯನ್ನು ಸ್ಥಿರೀಕರಿಸಿದಂತೆ ಪ್ಯಾರೀಸಿನ ಪಂಡಿತರು ಘನ ಅಳತೆಯನ್ನೂ ತೂಕವನ್ನೂ ಶಾಸ್ತ್ರೀಯವಾಗಿ ವ್ಯವಸ್ಥಿತಗೊಳಿಸಿದರು. ನಾವೀಗ ಉಪಯೋಗಿಸುವ ಅಳತೆಗೂ ತೂಕಕ್ಕೂ ಏನೂ ಸಂಬಂಧವಿಲ್ಲ. ಆದರೆ ಮೆಟ್ರಿಕ್ ಪದ್ಧತಿಯನ್ನು ನಿರ್ಮಿಸಿದ ವಿಜ್ಞಾನಿಗಳು ಅಳತೆಗೂ ತೂಕಕ್ಕೂ ಬಲು ಜಾಣ್ಮೆಯಿಂದ ತಳಕು ಹಾಕಿದರು.

ಅವರು ಒಂದು ಘನ ಡೆಸಿಮಿಟರ್ (೧೦೦೦ ಘನ ಸೆಂಟಿಮಿಟರ್) ಅಳತೆಯನ್ನು ಒಂದು ಲೀಟರ್ ಎಂದು ಕರೆದು ಅದನ್ನು ಘನ ಅಳತೆಗೆ ಆಧಾರ ಪರಿಮಾಣವೆಂದು ಹಿಡಿದರು. ಒಂದು ಲೀಟರ್ ನೀರಿನ ತೂಕವನ್ನು ಸರಿಯಾಗಿ ಕಂಡುಹಿಡಿದು ಆ ತೂಕಕ್ಕೆ ಒಂದು ಕಿಲೋಗ್ರಾಂ ಎಂದು ಹೆಸರಿಟ್ಟರು. ಅದರ ೧/೧೦೦೦ ಅಂಶವೇ ಔಷಧಾದಿಗಳಲ್ಲಿ ಉಪಯೋಗಿಸುವ ಗ್ರಾಂ.

೧೭೯೯ ಡಿಸೆಂಬರ ೧೦ ರಂದು ಫ್ರೆಂಚ ಸರಕಾರ ಮೆಟ್ರಿಕ್ ತೂಕ ಅಳತೆಗಳಿಗೆ ಕಾಯದೆಯ ಮನ್ನಣೆ ಕೊಟ್ಟಿತು. ಅಂದಿನಿಂದ ಒಂದು ನೂರು ವರ್ಷ ದಾಟುವುದರೊಳಗೆ ೪೩ ದೇಶಗಳು ಮೆಟ್ರಿಕ್ ಪದ್ಧತಿಯನ್ನು ಅಂಗೀಕರಿಸಿದವು. ಹೆಚ್ಚು ಹೆಚ್ಚು ದೇಶಗಳು ತಮ್ಮ ಓಬೀರಾಯನ ಕಾಲದ ತೂಕ ಅಳತೆ ಪದ್ಧತಿಗಳನ್ನು ತ್ಯಜಿಸಿ ಮೆಟ್ರಿಕ್ ಪದ್ಧತಿಗೆ ಬದಲಾಯಿಸುತ್ತಿವೆ. ಹದಿನೆಂಟನೆಯ ಶತಮಾನದ ಕೊನೆಗೆ ಫ್ರೆಂಚ್ ಪಂಡಿತರು ನಿರ್ಧರಿಸಿದ ಈ ಶಾಸ್ತ್ರೀಯ ತೂಕ ಅಳತೆಗಳನ್ನು ಇಡೀ ಜಗತ್ತಿನಲ್ಲಿ ಇಂದು ವಿಜ್ಞಾನಿಗಳು ಉಪಯೋಗಿಸುತ್ತಾರೆ. ಮೆಟ್ರಿಕ್ ಪದ್ಧತಿಯನ್ನು ಕಂಡುಹಿಡಿದ ವಿಜ್ಞಾನಿಗಳ ಕಾರ್ಯದ ಜಾಗತಿಕ ಮಹತ್ವದ ಹೆಗ್ಗುರುತಾಗಿ ಪ್ಯಾರೀಸಿನ ಬಳಿ ಇರುವ ಸೇವರ್ ಎಂಬಲ್ಲಿ ಈ ಮೂಲ ಮೀಟರ್ ಪಟ್ಟಿ ಮತ್ತು ಕಿಲೋಗ್ರಾಂ ತೂಕದ ಕಲ್ಲುಗಳು ಅಂತಾರಾಷ್ಟ್ರೀಯ ತೂಕ ಅಳತೆಗಳ ಕಚೇ

ಣಿಯಲ್ಲಿರಿಸಲ್ಪಟ್ಟಿವೆ. ಈ ಕಚೇರಿ ಇರುವ ಸ್ಥಳ ಅಂತಾರಾಷ್ಟ್ರೀಯ ಒಡೆತನದ್ದೆಂದು ೨೭ ರಾಷ್ಟ್ರಗಳ ಒಪ್ಪಂದದಿಂದ ಘೋಷಿಸಲ್ಪಟ್ಟಿದೆ. ಮೊದಲೇ ಹೇಳಿದಂತೆ ಈ ಮೂಲ ಮೀಟರ್ ಪ್ಲಾಟಿನಂ ಲೋಹದ ಪಟ್ಟಿ; ಕಿಲೋಗ್ರಾಂ ತೂಕದ ಕಲ್ಲೂ ಪ್ಲಾಟಿನಂ ಲೋಹದ್ದೇ; ಅದು ೩೯ ಮಿಲಿಮಿಟರ್ ಎತ್ತರ ಮತ್ತು ಅಷ್ಟೇ ವ್ಯಾಸವುಳ್ಳ ಒಂದು ಸಿಲಿಂಡರ್ ಆಕೃತಿಯ ಘನವಾಗಿದೆ.

ಭಾರತವು ೧೯೫೮ ಎಪ್ರಿಲಿನಿಂದ ಮೆಟ್ರಿಕ್ ತೂಕ-ಅಳತೆ ಪದ್ಧತಿಗಳನ್ನು ಅನುಸರಿಸಲು ನಿರ್ಧರಿಸಿದೆ. ದಶಾಂಶ ನಾಣ್ಯಪದ್ಧತಿಯನ್ನು ಅಂಗೀಕರಿಸಿದ ನಂತರ ಮೆಟ್ರಿಕ್ ಪದ್ಧತಿಯನ್ನೂ ಒಪ್ಪಿಕೊಳ್ಳುವುದು ತರ್ಕಬದ್ಧವಾಗಿಯೇ ಇದೆ. ಆಗ ನಮ್ಮ ಇಂಚು--ಅಂಗುಲ, ಯಾರ್ಡ--ಗಜ, ಖಂಡಿ--ಟನ್ ಗೊಂದಲವೆಲ್ಲ ಕೊನೆಗೊಳ್ಳಬೇಕು. ನಾವು ಅನಂತರ ಅಳತೆಗೆ ಮೀಟರ್ ಮತ್ತು ತೂಕಕ್ಕೆ ಗ್ರಾಂಗಳನ್ನು ಅನುಸರಿಸಬೇಕಾಗುತ್ತದೆ.

ಈ ಬದಲಾವಣೆಯನ್ನು ಜನ ಗುಣುಗುಟ್ಟದೆ ಒಪ್ಪಿಕೊಂಡಂತೆ ಮನಃಪೂರ್ವಕವಾಗಿ ಬಳಕೆಗೆ ತರುವರೆಂದು ನಂಬುವುದು ಮಾತ್ರ ಕಷ್ಟ. ಮೆಟ್ರಿಕ್ ಪದ್ಧತಿಯನ್ನು ಅಧಿಕೃತವಾಗಿ ಒಪ್ಪಿಕೊಂಡ ಅಮೇರಿಕದಂಥ ಮುಂದುವರಿದ ದೇಶಗಳಲ್ಲಿ ಕೂಡ ಜನರು ಬಟ್ಟೆಕೊಳ್ಳಲು ಗಜವನ್ನೇ ಬೆಣ್ಣೆ ಕೊಳ್ಳಲು ಪೌಂಡನ್ನೇ ಬಳಸುವ ಅಭ್ಯಾಸ ಬಿಟ್ಟಿಲ್ಲ. ನಮ್ಮಲ್ಲೇ ನೋಡುವುದಾದರೆ ಮುಂಬೈ ಸರಕಾರ ಅಧಿಕೃತವಾಗಿ ಬಂಗಾಲಿ ಮಣವನ್ನು ಕಾಯದೇಶೀರೆಂದು ಸಾರಿದ್ದರೂ ಕಟ್ಟಿಗೆ ಕೊಳ್ಳುವಾಗ ಹಳೇ ೫೬ ಸೇರಿನ ೨೮ ಮಣದ ಖಂಡಿಗಳನ್ನೇ ಉಪಯೋಗಿಸುವ ಚಟ ಉಳಿದು ಹೋಗಿದೆ. ಹಳೇ ಖಂಡಿಗೆ ಸರಿದೂಗಿಸಲು ಕಟ್ಟಿಗೆ ವ್ಯಾಪಾರಿಗಳು ಅನೇಕ ಚಿಲ್ಲರೆ ಬಂಗಾಲಿ ಮಣ- ಸೇರುಗಲ್ಲುಗಳನ್ನು ಹೊಂದಿಸಿಟ್ಟಿರುತ್ತಾರೆ! ಧಾನ್ಯಗಳನ್ನು ತೂಗಿ ಮಾರಬೇಕೆಂದು ನಿಯಮವಿದ್ದರೂ ಹಳೇ ಅಳತೆ ಚಟ್ಟಿಗೆ ಸರಿದೂಗಿಸಲು ೭॥ ಬಂಗಾಲಿ ಸೇರಿನಷ್ಟು ಅಕ್ಕಿಯನ್ನು ತೂಗಿ ಕೊಡುತ್ತಾರೆ! ಜನರು ಹೊಸತಿಗೆ ಬುದ್ಧಿಪೂರ್ವಕ ಹೊಂದಿಕೊಳ್ಳದಿದ್ದರೆ ಮೆಟ್ರಿಕ್ ಪದ್ಧತಿಯು ನಮ್ಮ ತೂಕ ಅಳತೆಗಳ ಕೋಲಾಹಲಕ್ಕೆ ತನ್ನ ಪಾಲಿನ ಗೊಂದಲವನ್ನೂ ಸೇರಿಸಿದ್ದಷ್ಟೇ ಬಂದೀತು!



## ಪಾಪದ ಜನ್ಮ

ಒಮ್ಮೆ ಮಾನವನ ದೇಹ ಮತ್ತು ಆತ್ಮಗಳಲ್ಲಿ ವಾದ-ವಿವಾದ ನಡೆಯಿತು. ದೇಹವು ಸಿಟ್ಟಿಗೆದ್ದು ಹೇಳಿತು: "ನಾನು ಜಡ ವಸ್ತು. ಮಣ್ಣಿನ ಪಿಂಡ. ಮೋಹವನ್ನು ಉಂಟುಮಾಡುವ ವಸ್ತುಗಳನ್ನು ನೋಡಲು ಸಾಧ್ಯವಿಲ್ಲದವನು. ಅಂದಮೇಲೆ ನಾನು ಪಾಪ ಮಾಡುವದಾದರೂ ಹೇಗೆ?"

ಆತ್ಮವು ಉತ್ತರ ಕೊಡದೆ ಇದ್ದೀತೇ? "ನನ್ನ ಹತ್ತಿರ ಪಾಪ ಮಾಡುವ ಸಾಧನಗಳೇ ಇಲ್ಲ. ಅಂದಮೇಲೆ ನಾನು ಪಾಪ ಮಾಡುವದು ಹೇಗೆ? ಇಂದ್ರಿಯಗಳಿಲ್ಲದೆ ಯಾರ ಕಾರ್ಯವಾದರೂ ಆದೀತೇ?" ಎಂದಿತು ಆತ್ಮ.

ಈ ವಾದವನ್ನು ಕೇಳಿದ ಪರಮಾತ್ಮನು ನಸುನಕ್ಕು "ಪಾಪಕ್ಕೆ ನೀವಿಬ್ಬರೂ ಹೊಣೆಗಾರರಾಗಿರುತ್ತೀರಿ. ಆತ್ಮವು ಎಂದು ದೇಹದಲ್ಲಿ ಸೇರಿಕೊಳ್ಳುವದೋ ಆಗ ಅವೆರಡರ ಸಹಯೋಗದಿಂದ ಪಾಪದ ಜನ್ಮವಾಗುತ್ತದೆ," ಎಂದು ಹೇಳಿದನು.



ಒಂದು ವಿಧಿವೈಚಿತ್ರ್ಯ—

# ಆ ಸರ್ಟಿಫಿಕೇಟು

ಗಾಡಿ ಓಡುತ್ತಿದ್ದಂತೆಯೆ ಜೀವನನು ತನ್ನ ಉಡುಪನ್ನು ಬದಲಾಯಿಸಿಕೊಂಡು ಮುಂದಿನ ಸಿಲ್ದಾಣದಲ್ಲಿಯೇ ಇಳಿದನು.

ಮನಸ್ಸಿನಲ್ಲಿಯೆ ಅವನು ನಡೆದ ಇಡೀ ಘಟನೆಯ ಸಿಂಹಾವಲೋಕನ ಮಾಡಿದನು. ಹೇಗಾದರೂ ಮಾಡಿ ಡಾಕ್ಟರರಿಂದ ಸುಳ್ಳು ಸರ್ಟಿಫಿಕೇಟು ಒಂದನ್ನು ಸಂಪಾದಿಸಿಕೊಂಡರೆ ತನ್ನ ಮಾತಿಗೆ ಬೇರೆ ಸಾಕ್ಷಿ ಬೇಕಾಗುವದಿಲ್ಲ ; ಮತ್ತೆ ಈ ಸರ್ಟಿಫಿಕೇಟಿನ ಬಲದಿಂದ ತಾನು ಸುಲಭವಾಗಿ ಕಾಯದೆಯ ಕಾವಲುಗಾರರಾದ ಪೋಲೀಸರ ಕಣ್ಣಿಗೆ ಮಣ್ಣೆರಚಬಹುದು ಎಂದು ಆತ ಅಂದುಕೊಂಡನು.

ಆತ ಅಲ್ಲಲ್ಲಿ ವಿಚಾರಿಸಿ ಮೊಟ್ಟಮೊದಲನೆಯ ಅವಕಾಶವನ್ನು ಉಪಯೋಗಿಸಿಕೊಂಡು ಆ ಊರಿನ ಧರ್ಮಾರ್ಥ ದವಾಖಾನೆಯ ಮುಖ್ಯ ಡಾಕ್ಟರರನ್ನು ಖಾಸಗಿಯಾಗಿ ಕಂಡನು.

ಡಾಕ್ಟರ ಪಾಲರಿಗೆ ೫೦ ವರ್ಷಗಳಾಗಿ ಹೋಗಿದ್ದವು. ಕೂದಲು ಬೆಳ್ಳಗಾಗತೊಡಗಿದ್ದವು. ಒಳ್ಳೆಯ ಡಾಕ್ಟರರೆಂದು ಅವರು ಹೆಸರು ಪಡೆದಿದ್ದರು. ಜೀವನದ ಅನುಭವ ಅವರಿಗೆ ಸಾಕಷ್ಟಿದ್ದಿತು. ಅವರ ದೀರ್ಘಕಾಲದ ಈ ವೃತ್ತಿಜೀವನದಲ್ಲಿ ಅವರೆದುರು ಇಂಥ ಎಷ್ಟೋ ಸಂದಿಗ್ಧ ಪ್ರಸಂಗಗಳು ಬಂದಿದ್ದವು ಅವನ್ನವರು ಯಶಸ್ವಿಯಾಗಿ ಎದುರಿಸಿದ್ದರು. ಅವರ ಮಾತುಗಳ ಮೇಲಿಂದ ತನ್ನ ಕಾರ್ಯ ಸಾಧನೆ ತುಂಬ ಕಠಿಣವಾಗುವದು ಎಂದು ಜೀವನನಿಗೆ ಅನಿಸಿತು. ಆದರೆ ಆತ ಎಂಥ ಕಠಿಣ ಪರಿಸ್ಥಿತಿಯನ್ನೂ ಎದುರಿಸಲು ಸಿದ್ಧನಾಗಿಯೆ ಬಂದಿದ್ದ.

" ಹಾಂ ! ಇಂದಿನ ತಾರೀಖಿನ ಸರ್ಟಿಫಿಕೇಟಾದರೆ, ನೀವು ಕೇಳಕೇಳುತ್ತಲೇ ನಿಮಗದು ಸಿಕ್ಕಿಬಿಡಬಹುದಿತ್ತು. ಆದರೆ ಹಿಂದಿನ ತಾರೀಖಿನ ಸರ್ಟಿಫಿಕೇಟನ್ನು ನಾನು ಹೇಗೆ ಕೊಡಲಿ ?

ಬನಫೂಲರ ಬಂಗಾಲಿ ಕಥೆಯ ರೂಪಾಂತರ

ನೀವು ನನಗೆ ತೀರ ಅಪರಿಚಿತರು. ನೀವು ಯಾರು ಏನು ಎಂದು ನನಗೆ ಎಳ್ಳಷ್ಟೂ ಗೊತ್ತಿಲ್ಲ. ನೀವು ಎಂಥೆಂಥ ಗೊಂದಲ ಹಾಕಿ ಈಗ ಸರ್ಟಿಫಿಕೇಟಿಗಾಗಿ ಬಂದಿರುವಿರೋ ಪರಮಾತ್ಮನೇ ಬಲ್ಲ. ಛೆ! ಛೆ! ಕುಂಬಳಕಾಯಿ ನುಂಗು ಎಂದರೆ ನನ್ನಿಂದ ಸಾಧ್ಯವಿಲ್ಲ," ಡಾ. ಪಾಲರು ಹೇಳಿದರು.

ಆದರೆ ಜೀವನ ಕೇಳಲಿಲ್ಲ.

ಸುಳ್ಳು ಸರ್ಟಿಫಿಕೇಟು ತನಗೆ ಅತ್ಯವಶ್ಯವಾಗಿ ಬೇಕು. ಮತ್ತಾವುದರಿಂದಲೂ ಕಾರ್ಯ ನಡೆಯದು. ಅಷ್ಟಲ್ಲದೆ ಆ ಸರ್ಟಿಫಿಕೇಟಿನಲ್ಲಿ ಮೊನ್ನಿನಿಂದ, "ಶ್ರೀ. ಜೀವನಚಂದ್ರ ಕುಂದು ಇವರು ಡಾ. ಪಾಲರಿಂದ ಚಿಕಿತ್ಸೆ ಹೊಂದುತ್ತಿದ್ದಾರೆ" ಎಂದು ಸ್ಪಷ್ಟವಾಗಿ ಕಾಣಿಸಬೇಕು.

ಹೌದು. ಸುಳ್ಳು ಸರ್ಟಿಫಿಕೇಟು ಅಂದರೆ ಸುಲಭವೇ? ಆದರೆ ಅದಕ್ಕಾಗಿ ಯೋಗ್ಯ ಸಂಭಾವನೆ ಕೊಡಲು ಜೀವನ ಸಿದ್ಧನಿದ್ದನು.

ಹಣದ ಮಾತು ಬಂದರೂ ಡಾ. ಪಾಲರು ಜಗ್ಗಲಿಲ್ಲ. "ಆದರೆ ಸುಳ್ಳು ಸರ್ಟಿಫಿಕೇಟಿನ ವಿಷಯ ತುಂಬ ಗಂಡಾಂತರದ್ದು," ಎಂದರವರು.

ಆದರೆ ಬಾಯಿಂದ ಹೀಗೆ ಹೇಳಿದರೂ ಅವರ ಮನಸ್ಸು ಹೊಯ್ದಾಡುತ್ತಿದೆ ಎಂದು ಅವನಿಗೆ ತೋರಿತು.

ಜೀವನನ ಹೃದಯದ ಬಡಿತ ಜೋರಾಯಿತು. "ಸ್ವಾಮಿ, ದಯವಿಟ್ಟು ನನ್ನನ್ನು ಕಾಪಾಡಿರಿ. ನಾನು ಬಹಳ ದೊಡ್ಡ ಗಂಡಾಂತರದಲ್ಲಿ ಸಿಲುಕಿಕೊಂಡಿದ್ದೇನೆ. ಮೆಡಿಕಲ್ ಸರ್ಟಿಫಿಕೇಟು ಸಿಕ್ಕದಿದ್ದರೆ ನಾನು ಬದುಕುಳಿಯುವಂತೆಯೇ ಇಲ್ಲ," ಜೀವನ ಬೇಡಿಕೊಂಡ.

ಆದರೂ ಡಾ. ಪಾಲರು ಒಪ್ಪಲಿಲ್ಲ. ಜಗತ್ತಿನ ವ್ಯವಹಾರಗಳ ಅನುಭವವಿದ್ದ ಜೀವನನಿಗೆ ತಾನೆಷ್ಟು ಪರಿಯಾಗಿ ಅತ್ತು ಕರೆದರೂ ಪ್ರಯೋಜನವಾಗುವದಿಲ್ಲ, ಡಾ. ಪಾಲರದು ವಜ್ರ ಹೃದಯ ಎಂದು ತಿಳಿಯಬರಲು ತಡವಾಗಲಿಲ್ಲ. ಆ ಹೃದಯವನ್ನು ಭೇದಿಸಲು ಬೇರೆ ಶಸ್ತ್ರವೇ ಬೇಕು. ಕಣ್ಣೀರಿನ ಜೊತೆಗೆ ಹಣದ ಝಣತ್ಕಾರವೂ ಅಗತ್ಯ.

ಸುದೈವದಿಂದ ಜೀವನನಿಗೆ ಜೀವನದಲ್ಲಿ ಹಣದ ಅಭಾವದಿಂದ ಇಂಥದೊಂದು ಕೆಲಸ ನಿಂತಿತು ಎನ್ನುವ ಪ್ರಸಂಗವಿರಲಿಲ್ಲ. ವಂಶಪರಂಪರಾಗತವಾಗಿ ಪ್ರಾಪ್ತವಾಗಿದ್ದ ಸಂಪತ್ತು ಅವನಿಗೆ ಜೀವನದಲ್ಲಿ ಅನೇಕ ಸುಖ-ಸೌಲಭ್ಯಗಳನ್ನು ಒದಗಿಸಿಕೊಟ್ಟಿತ್ತು.

ಆತ ಹತ್ತು ರೂಪಾಯಿಗಳನ್ನು ಕೊಡುವದಾಗಿ ಹೇಳಿದ. ಮುಂದೆ ಭರದಿಂದ ಮೊತ್ತವನ್ನು ಏರಿಸುತ್ತ ಹೋದ. ೨೦, ೫೦, ೧೦೦, ೨೦೦, ೫೦೦, ಕೊನೆಗೆ ತನಗೆ ತಾನು ಹೇಳಿದಂತೆ ಸರ್ಟಿಫಿಕೇಟು ಕೊಟ್ಟಲ್ಲಿ ಒಂದು ಸಾವಿರ ರೂಪಾಯಿಗಳನ್ನು ಕೊಡುವದಾಗಿ ಹೇಳಿದ.

ಡಾಕ್ಟರರು ಕೆಮ್ಮಿ ಗಂಟಲು ಸರಿಪಡಿಸಿಕೊಂಡರು. ಯೋಚಿಸುವವರಂತೆ ಮೀಸೆಯ ಹುರಿಯನ್ನು ತೀಡಿಕೊಂಡರು.

ರೂಪಾಯಿಗಳ ಪ್ರಸ್ತಾಪ ಅವರನ್ನು ಹಾದಿಗೆ ತರುವಂತಿತ್ತು.

"ನಿಮಗೆ ಯಾವುದಾದರೂ ವಿಶಿಷ್ಟ ರೋಗ ಇದೆಯೆ?" ಡಾಕ್ಟರರು ಒಮ್ಮಿಂದೊಮ್ಮೆ ಕೇಳಿದರು.

"ಸುಮಾರು ಎರಡು ವರ್ಷಗಳ ಹಿಂದೆ ನನಗೆ ಅಪೆಂಡಿಸ್ಯಾಟಿಸ್ (ಕರುಳು ರೋಗ) ಆಗಿತ್ತು" ಜೀವನ ಹೇಳಿದ.

"ಆಗ ನೀವು ಆಪರೇಶನ್ ಮಾಡಿಸಿಕೊಂಡಿದ್ದಿರೇನು?"

"ಇಲ್ಲ. ಯಾಕೆ?"

"ಸರಿ. ಹಾಗಾದರೆ ನಾನೀಗ ನಿಮ್ಮ ಅಪೆಂಡಿಸ್ಯಾಟಿಸ್ ಆಪರೇಶನ್ ಮಾಡುತ್ತೇನೆ." ಆದರೆ ಇನ್ನೂ ಜೀವನನ ಪ್ರಶ್ನೆಗೆ ನೇರವಾದ ಉತ್ತರ ಬಂದಿರಲಿಲ್ಲ.

"ಈ ಆಪರೇಶನ್ನಿನಿಂದ ನನ್ನ ಕಾರ್ಯಸಿದ್ಧಿಗೆ ಏನು ಪ್ರಯೋಜನ?"

"ಪ್ರಯೋಜನ! ಪ್ರಯೋಜನವಿದ್ದೇ ಇದೆ. ಒಂದು ವೇಳೆ ಆಗಲಿಲ್ಲವೆಂದೇ ಅನ್ನಿ, ಈ ಕಠಿಣ ರೋಗದಿಂದ ನೀವು ಮುಕ್ತರಾಗುತ್ತೀರಿ, ಸಾಲದೆ?"

ಡಾಕ್ಟರರ ಈ ಬಗೆಯ ಹುಡುಗಾಟಿಕೆ ಜೀವನನಿಗೆ ಸೇರಲಿಲ್ಲ. ಅವನಿಗೆ ಜೀವನ-ಮರಣದ

ಪ್ರಶ್ನೆಯಾದ ವಿಷಯದಲ್ಲಿ ಈ ಡಾಕ್ಟರರು ಕುಚೇಷ್ಟೆ ನಡೆಸಿದ್ದರು.

"ನಿಮ್ಮ ಬಳಿಗೆ ನಾನು ಬಂದದ್ದು ಸರ್ಟಿಫಿಕೇಟಿಗಾಗಿ, ಚಿಕಿತ್ಸೆಗಲ್ಲ ಎಂದು ನಿಮಗೆ ನೆನಪು ಮಾಡಿಕೊಡಬಯಸುತ್ತೇನೆ," ಆತ ಹೇಳಿದ.

"ಅಯ್ಯೋ! ನಿಮಗೆ ಅರ್ಥವಾಗಲಿಲ್ಲವೇ? ಇಲ್ಲಿ ಕೇಳಿ. ನಿಮ್ಮನ್ನು ಆಸ್ಪತ್ರಿಯಲ್ಲಿ ದಾಖಲು ಮಾಡಿಕೊಂಡರೆ ಅದರಿಂದ ನೀವು ಪಡೆಯುವ ಸರ್ಟಿಫಿಕೇಟಿಗೆ ಹೆಚ್ಚಿನ ಬಲ ಬರುವದಿಲ್ಲವೆ? ನಿಮ್ಮ ಹೊಟ್ಟೆಯ ಮೇಲಿರುವ ಚಾಕುವಿನ ಗುರುತು ಜೀವಂತ ಸಾಕ್ಷಿಯಾಗುವದು. ಆದರೆ ಒಂದೆರಡು ದಿನಗಳ ಹಿಂದೆಯೆ ನಿಮ್ಮನ್ನು ಆಸ್ಪತ್ರೆಗೆ ಸೇರಿಸಿಕೊಂಡಿತು ಎಂದು ದಾಖಲೆಯಲ್ಲಿ ಸೇರಿಸುವದು ಸ್ವಲ್ಪ ಕಠಿಣವೇ ಸರಿ."

ಕಾಗದ, ದಾಖಲೆ ಮುಂತಾದವುಗಳ ಪರಿಚಯ ಅಷ್ಟಕಷ್ಟೇ ಇದ್ದ ಜೀವನನಿಗೆ ಡಾಕ್ಟರರು ಕಡ್ಡಿಯನ್ನು ಗುಡ್ಡ ಮಾಡುತ್ತಿದ್ದಾರೆಂದು ಅನಿಸಿತು.

ಡಾಕ್ಟರರು ಮತ್ತೆ ಮಾತು ಮುಂದುವರಿಸಿದರು. "ಇಲ್ಲಿ ನೋಡಿ. ಸರ್ಟಿಫಿಕೇಟು ಸಂಶಯಾತೀತವಾಗಬೇಕಿದ್ದಲ್ಲಿ ರೋಗಿಗಳ ಹೆಸರು ಬರೆದುಕೊಳ್ಳುವ ಪುಸ್ತಕದಲ್ಲಿ ಮೊನ್ನಿನಿಂದ ನೀವು ಈ ಆಸ್ಪತ್ರಿಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದೀರಿ ಎಂದು ಬರೆಯಬೇಕಾಗುವದು. ಆದರೆ ಹೀಗೆ ಎರಡು ದಿನಗಳ ಹಿಂದಿನ ಹೆಸರುಗಳ ನಡುವೆ ನಿಮ್ಮ ಹೆಸರನ್ನು ನನ್ನ ಕೆಳಗಿನ ಡಾಕ್ಟರ ಮತ್ತು ಕಂಪೌಂಡರರ ಸಹಕಾರವಿಲ್ಲದೆ ಸೇರಿಸುವದು ಸಾಧ್ಯವಿಲ್ಲ. ಇಂಥ ಕೆಲಸ ಬಹಳ ಕಠಿಣವಾದದ್ದು. ನಾನೊಬ್ಬನೇ ಮಾಡುವದು ಸಾಧ್ಯವಿಲ್ಲ. ಮಾಡುವ ಧೈರ್ಯವೂ ನನಗಿಲ್ಲ. ಕಾಯಿದೆಗೆ ಸಾವಿರ ಕಣ್ಣುಗಳಿವೆ."

ಡಾಕ್ಟರರ ಕೈಗಳು ಮೀಸೆಯ ಹುರಿಯನ್ನು ತೀಡತೊಡಗಿದವು.

ಸರ್ಟಿಫಿಕೇಟ ಕೊಡಲು ಮಾಡಬೇಕಾದ ವಿಧಿವಿಧಾನಗಳಲ್ಲಿ ಜೀವನನಿಗೆ ಆಸ್ಥೆಯಿರಲಿಲ್ಲ. ಅವನಿಗೆ ಬೇಕಾದದ್ದು ಸರ್ಟಿಫಿಕೇಟು. ಅದಕ್ಕಾಗಿ ಹಣ ತೆರಲು ಅವನು ಸಿದ್ಧನಿದ್ದನು.

"ಇದಕ್ಕೆಲ್ಲ ಒಟ್ಟು ಎಷ್ಟು ಹಣ ತಗಲೀತು?" ಆತ ನೇರವಾಗಿ ಕೇಳಿದ.

"೨,೦೦೦ ರೂಪಾಯಿಗಳು. ಸ್ವಲ್ಪ ಹೆಚ್ಚು ಕಡಿಮೆ ಅಷ್ಟು ಹಣ ಬೇಕಾದೀತು."

೨,೦೦೦ ರೂಪಾಯಿಗಳು! ಅಬ್ಬಾ!

ಆದರೆ ಸರ್ಟಿಫಿಕೇಟಿನ ಅಗತ್ಯವಿದೆಯಲ್ಲವೆ? ಎದುರು ಬಂದ ಸಂಕಟದ ನಿವಾರಣೆಗೆ ಅದೊಂದೇ ಉಪಾಯವಲ್ಲವೆ? ಈ ೨,೦೦೦ ರೂಪಾಯಿಗಳು ಅವನಿಗೆ ಹೊಸ ಜೀವನವನ್ನೇ ಕೊಡುತ್ತಿರುವಾಗ ಹಿಂದೇಟು ಹಾಕುವದೇ?

೨ ಸಾವಿರ ರೂಪಾಯಿಗಳನ್ನು ಕೊಡಲು ಜೀವನ ಒಪ್ಪಿದ.

ಡಾ. ಪಾಲರು ತಮ್ಮ ಕೆಲಸವನ್ನು ಬಹು ಸಮರ್ಥ ರೀತಿಯಲ್ಲಿ ಪೂರೈಸಿ ಕೊಟ್ಟರು.

ಅವರು ಒಳ್ಳೆಯ ಶಸ್ತ್ರವೈದ್ಯರಾಗಿದ್ದರು. ಜೀವನನ ಹೊಟ್ಟೆಯ ಆಪರೇಶನ್ನನ್ನು ಬಹು ಉತ್ತಮ ರೀತಿಯಲ್ಲಿ ಅವರು ಮಾಡಿದರು. ಮತ್ತೆ, ಅವರು ಜೀವನನ ಆರೋಗ್ಯದ ವಿಚಾರದಲ್ಲಿ ತಾಳಿದ ಆಸ್ಥೆ, ವಹಿಸಿದ ಶ್ರದ್ಧೆ, ತೋರಿದ ಪ್ರೇಮಗಳು ಅಸಾಮಾನ್ಯವಾಗಿದ್ದವು. ತನ್ನ ಕುಟುಂಬದವರಾದರೂ ಇಷ್ಟೊಂದು ಕಾಳಜಿಯಿಂದ ತನ್ನನ್ನು ನೋಡಿಕೊಳ್ಳುತ್ತಿದ್ದರೋ ಇಲ್ಲವೋ ಎಂದು ಜೀವನನಿಗನಿಸಿತು.

ಅಸಿಸ್ಟಂಟ ಡಾಕ್ಟರರೂ ಕಂಪೌಂಡರರೂ ಒಳ್ಳೆಯವರೇ ಆಗಿದ್ದರೆನ್ನಬಹುದು. ಅವರು ಕೂಡ ಜೀವನನ ಬಗ್ಗೆ ವಿಶೇಷ ಜಾಗ್ರತೆ ವಹಿಸಿ ಅವನ ಬೇಕು-ಬೇಡಗಳನ್ನು ಆಪ್ತರಂತೆ ನೋಡಿಕೊಂಡರು.

ಶ್ರೀಮಂತನಾಗಿದ್ದ ಜೀವನನಿಗೆ ಹಣ ಕೊಟ್ಟು ಇತರರಿಂದ ಸೇವೆ ಮಾಡಿಸಿಕೊಂಡ ಅನುಭವ ಬೇಕಷ್ಟಿತ್ತು. ಆದರೆ ಈ ಆಸ್ಪತ್ರಿಯಲ್ಲಿ ಅವನಿಗೆ ದೊರೆತ ಸೇವೆಯಲ್ಲಿ ಒಂದು ವಿಧವಾದ ಆತ್ಮೀಯತೆಯಿತ್ತು.

ಅವನನ್ನು ಆಸ್ಪತ್ರಿಯಿಂದ ಬಿಡುಗಡೆ ಮಾಡಿದ ದಿನ ಅವನು ಡಾ. ಪಾಲರ ಮನೆಗೆ ಹೋಗಿ ಅವರನ್ನು ಕಂಡನು. ಡಾಕ್ಟರರು ಅವನನ್ನು ಚಿರ

ಪರಿಚಿತ ಅತಿಥಿಯಂತೆ ಸ್ವಾಗತಿಸಿ ಯಾವ ಬಗೆಯ ಸಂಕೋಚವನ್ನೂ ತೋರದೆ ಅವನ ಬಯಕೆಯಂತೆ ಸರ್ಟಿಫಿಕೇಟು ಬರೆದು ಕೊಟ್ಟರು.

"ಆಯಿತೋ ಇಲ್ಲವೋ ನಿಮ್ಮ ಮನಸ್ಸಿನಂತೆ? ಇದರಲ್ಲಿ ಕುತಂತ್ರ ನಡೆಯಿತು ಎಂದು ಬ್ರಹ್ಮ ದೇವನಿಗೂ ಹೇಳಲು ಸಾಧ್ಯವಿಲ್ಲ" ಡಾಕ್ಟರರು ಹೆಮ್ಮೆಯಿಂದ ನುಡಿದರು. ಮುಖದಲ್ಲಿ ಮಂದ ಹಾಸವನ್ನು ಬೀರುತ್ತ ಅವರು, "ಈ ಸರ್ಟಿಫಿಕೇಟಿನಲ್ಲಿ ಸಂದೇಹ ತಾಳಲು, ನಾ-ನೀ ಎನ್ನುವ ಗುಪ್ತ ಪೋಲೀಸರಿಗೂ ಸಾಧ್ಯವಿಲ್ಲ" ಎಂದರು.

ಜೀವನ ಅವರ ಆಭಾರ ಮನ್ನಿಸಿ ಎದ್ದು ನಿಂತ.

"ತುಸು ಕೂಡ್ರಿ. ಹೋಗುವ ಮೊದಲು ಒಂದು ವಿಷಯ ತಿಳಿಸಿರಲ್ಲ. ಅಲ್ಲಾ, ಇಷ್ಟೊಂದು ಹಣ ವೆಚ್ಚ ಮಾಡಿ ಸುಳ್ಳು ಸರ್ಟಿಫಿಕೇಟು ಪಡೆಯುವ ಅಗತ್ಯ ಬೀಳುವಂತೆ ನೀವು ಮಾಡಿದ್ದಾದರೂ ಏನು?"

ಡಾ. ಪಾಲರ ಕುತೂಹಲ ಕೆರಳಿತ್ತು.

ಜೀವನ ಇಂಥ ನೇರವಾದ ಪ್ರಶ್ನೆಯನ್ನು ನಿರೀಕ್ಷಿಸಿರಲಿಲ್ಲ. ಅವನು ಉತ್ತರ ಕೊಡಲಿಲ್ಲ.

"ಈಗ ನಿಮ್ಮ ಬಳಿ ಅಭೇದ್ಯವಾದ ಲೇಖಿ ಪುರಾವೆಯಿರುವಾಗ ನೀವು ಹೆದರುವ ಕಾರಣ ವೇನು? ನನ್ನ ಮುಂದೆ ಹೇಳುವದರಿಂದ ನಿಮಗಾವ ತೊಂದರೆಯೂ ಇಲ್ಲ."

ಆದರೂ ಜೀವನನಿಗೆ ಧೈರ್ಯವಾಗಲಿಲ್ಲ. "ಈ ಸುದ್ದಿ ನಿಮ್ಮ ಹೊರತು ಅನ್ಯರ ಕಿವಿಗೆ ಬೀಳುವದಿಲ್ಲ ಎಂದು ವಚನ ಕೊಡುವಿರಾ?"

"ಓಹೋ! ಅಗತ್ಯವಾಗಿ ಕೊಡುವೆನು. ಅದರಲ್ಲೇನು? ನಿಮ್ಮ ಗುಟ್ಟನ್ನು ಇತರರಿಗೆ ಹೇಳಿ ನನಗಾಗಬೇಕಾದ್ದಾದರೂ ಏನಿದೆ?" ಡಾಕ್ಟರರು ಹೇಳಿದರು.

"ಸರಿ. ನಾನು ಒಬ್ಬನ ಕೊಲೆ ಮಾಡಿದ್ದೆ."

"ಕೊಲೆ! ಯಾರ ಕೊಲೆ ಮಾಡಿದ್ದಿರಿ?"

ಜೀವನನಿಗೆ ತಾನು ಕೊಂದಿದ್ದವನ ಹೆಸರು ಗೊತ್ತಿತ್ತು. ಆದರೆ ಹೇಳಲು ಸಿದ್ಧನಿರಲಿಲ್ಲ.

ಒಂದು ನಿಮಿಷ ಅವನ ಮನಸ್ಸಿನೆದುರು ರಕ್ತದಲ್ಲಿ ಮುಳುಗಿದ್ದ ಮೃತ ದೇಹದ ಚಿತ್ರ ಸುಳಿದು ಹೋಯಿತು. ಮೃತನ ಮುಂಗೈ ಮೇಲೆ 'ರಮೇಶ' ಎಂದು ಹೆಸರು ಹಚ್ಚೆ ಹಾಕಲ್ಪಟ್ಟಿತ್ತು.

ಜೀವನ ಇದನ್ನೆಲ್ಲ ಡಾಕ್ಟರರಿಗೆ ಹೇಳಲಿಲ್ಲ.

"ಕೊಲೆ ಮಾಡಿದ್ದಾದರೂ ಏಕೆ? ಅಂಥ..."

ಜೀವನ ನಕ್ಕ. "ಓರ್ವ ಸ್ತ್ರೀಯ ಸಲುವಾಗಿ ಕೊಲೆ ಮಾಡಿದೆ. ಅವಳ ಪ್ರೇಮ ಸಂಪಾದನೆಗಾಗಿ ನಾವೀರ್ವರೂ ಸ್ಪರ್ಧೆ ನಡೆಸಿದ್ದೆವು."

"ಎಲ್ಲಿ ಕೊಲೆ ಮಾಡಿದಿರಿ?"

"ರೇಲ್ವೆ ಡಬ್ಬಿಯಲ್ಲಿ."

ಅಷ್ಟರಲ್ಲಿ ಆಸ್ಪತ್ರೆಯ ಶಿಪಾಯಿ ಬಂದು ಸರಕಾರೀ ಲಕೋಟೆಯೊಂದನ್ನು ಡಾಕ್ಟರರ ಕೈಗಿತ್ತ.

ಜೀವನ ಎದ್ದು ನಿಂತ.

"ಬರುತ್ತೇನೆ ಡಾಕ್ಟರರೇ, ನಿಮ್ಮ ಉಪಕಾರ ಬಹಳವಾಯಿತು" ಎಂದಾತ ಕೈ ಮುಗಿದು ಅಲ್ಲಿಂದ ಹೊರಟ.

ಡಾ. ಪಾಲರು ಲಕೋಟೆಯನ್ನೊಡೆದು ಒಳಗಿನ ಕಾಗದವನ್ನೋದಿದರು.

ಅವರ ಮುಖ ಬಿಳುಪಿಟ್ಟಿತು; ಹೆಣದ ಕಳೆ ಮುಖವನ್ನಾವರಿಸಿತು. ಲಕೋಟೆ ಪೋಲೀಸ ಕಚೇರಿಯಿಂದ ಬಂದಿತ್ತು.

ಒಂದು ತಿಂಗಳ ಹಿಂದೆ ಒಂದು ಹೆಣ ಪೋಲೀಸರಿಗೆ ಸಿಕ್ಕಿತ್ತು. ರೇಲ್ವೆ ಡಬ್ಬಿಯಲ್ಲಿ ಸಿಕ್ಕಿದ ಆ ಹೆಣದ ಗುರುತು ಕೂಡ ಸಿಗದಂತೆ ಮುಖದ ತುಂಬ ಗಾಯಗಳಾಗಿದ್ದವು. ಶವಪರೀಕ್ಷೆಯಿಂದ ಅದು ಆತ್ಮಹತ್ಯೆಯಲ್ಲವೆಂದು ಖಚಿತವಾಗಿತ್ತು. ಶವದ ಮುಂಗೈಯ ಮೇಲೆ "ರಮೇಶ" ಎಂಬ ಹೆಸರು ಹಚ್ಚೆ ಹಾಕಿತ್ತು. ವಿಚಾರಣೆಯ ನಂತರ ಮೃತನು ಕಲಕತ್ತೆಯಲ್ಲಿರುತ್ತಿದ್ದನೆಂದೂ ದಲಾಲಿ ಕೆಲಸ ಮಾಡುತ್ತಿದ್ದನೆಂದೂ ಗೊತ್ತಾದದ್ದಲ್ಲದೆ ಆತ ಡಾ। ಟಿ. ಸಿ. ಪಾಲರ ಹಿರಿಯ ಮಗನೆಂದೂ ತಿಳಿದುಬಂದಿತ್ತು.

ಪೋಲೀಸರಿಗೆ ಗೊತ್ತಾದ ಈ ಸುದ್ದಿ ನಿಜವಾಗಿದ್ದಲ್ಲಿ, ಡಾ। ಪಾಲರು ತಮ್ಮ ಹಿರಿಯ ಮಗನ ಬಗ್ಗೆ ಇನ್ನಿತರ ವಿವರಗಳನ್ನು ಪೂರೈಸಿ ಕೊಲೆಗಡಕನ ಪತ್ತೆ ಹಚ್ಚಲು ನೆರವಾಗಬೇಕು ಎಂದು ಪತ್ರದಲ್ಲಿ ವಿನಂತಿ ಮಾಡಿಕೊಳ್ಳಲಾಗಿತ್ತು.

ಡಾ। ಪಾಲರು ಮಂಕಾಗಿ ಕುಳಿತರು.

~

# ರೈತನ ಬಾಂಧವ — ಗೂಗೆ

**ಕೆ. ಆರ್. ಮೋಹನ**

ನಿತ್ಯ ರಾತ್ರಿ ಹೊತ್ತಿನಲ್ಲಿ ವಾಯು ಸೇವನೆಗೆಂದು ಮನೆಯಿಂದ ಹೊರಬಿದ್ದು ಊರ ಬೇರೆ ಬೇರೆ ಕಡೆಗಳಲ್ಲಿ ದೂರದೂರ ಅಲೆದಾಡಿ ಬರುವ ಚಟವನ್ನಿಟ್ಟುಕೊಂಡವರೊಡನೆ ನೀವೂ ಒಂದು ದಿನ ಹೀಗೇ ವಿಹಾರಾರ್ಥವಾಗಿ ಕಾಲು ಹರಿಬಿಟ್ಟು ನೋಡಿರಿ. ಹೊಲಗಳ ಬಳಿಯ ಕಾಲುಹಾದಿಯಲ್ಲಿ ಸಾಗುತ್ತಿರುವಾಗ ಬದಿಗೆ ನಿಮ್ಮ ದೃಷ್ಟಿ ಸಹಜವಾಗಿ ಹರಿಯುತ್ತದೆ. ನೀವು ಒಮ್ಮೆಲೇ ಗಾಬರಿಯಾಗುತ್ತೀರಿ. ಗಿಡಮರಗಳ ಮೇಲೂ ಹೊಲಗಳ ಅಂಚಿನಲ್ಲೂ ನಿಮ್ಮನ್ನು ತಿಂದುತೇಗುವ ಹವಣಿಕೆಯಲ್ಲಿರುವ ಭೂತಪಿಶಾಚಿಗಳು ಕೆಂಗಣ್ಣಿನಿಂದ ಕಿಡಿಕಾರುವಂತೆ ಕಾಣುತ್ತದೆ.

ಜತೆಗಾರನೊಬ್ಬನಿಲ್ಲದಿದ್ದರೆ ನೀವು ಕಂಗಾಲಾಗುವ ಪ್ರಸಂಗವೇ. ಆ "ಭೂತ" ಗಳು ಒಮ್ಮೆ ಘೂಂಕರಿಸಿದರಂತೂ ತೀರಿಯೇ ಹೋಯಿತು. ನಿಮ್ಮ "ಗರ್ಭನಿರ್ಭೇದ "ವಾಗಿ ಹೋಗಬೇಕು. ಆದರೆ ನೀವು ಅಂಜಬೇಕಾದ ಕಾರಣವೇನೂ ಇಲ್ಲ. ಅದು ಕೇವಲ ಗೂಗೆ— ರೈತನ ಅನಿಮಿತ್ತ ಬಾಂಧವ—ಎಂದು ನಿಮ್ಮ ಸಂಗಾತಿ ನಿಮಗೆ ಸಮಾಧಾನ ಹೇಳುವ.




ಉಪಕಾರ ಮಾಡಿಯೂ ಅಪಕೀರ್ತಿಗೊಳಗಾದವರಲ್ಲಿ ಗೂಗೆಯಷ್ಟು ದುರ್ದೈವಿ ಬೇರಿಲ್ಲ. ಗೂಗೆಯನ್ನು ಮೆಚ್ಚುವ ದೇಶ ಜಗತ್ತಿನಲ್ಲಿ ವಿರಳ. ಎಲ್ಲ ವಿಧದ ಅಪಶಕುನಗಳೂ ಅದರ ಅಸಡ್ಡಾಳ ತಲೆಯ ಮೇಲೆ ಹೊರಿಸಲ್ಪಟ್ಟಿವೆ. ಅದು ಮನೆ ಹೊಕ್ಕರಂತೂ ತೀರಿತು, ಮನೆಯ ಮಾಡಿನ ಮೇಲೆ ಕುಳಿತು ಕೂಗಿದರೂ ಸಾಕು, ಮನೆಯಲ್ಲಿ ಯಾರಿಗಾದರೂ ಸಾವು ಕಟ್ಟಿಟ್ಟದ್ದೇ ಎಂದು ಭಾರತದಲ್ಲಿ ನಂಬಿಕೆಯಿದೆ. ಇಂಗ್ಲಂಡಿನಲ್ಲಿ ಗೂಗೆಗಳಿಗೂ ಮಾಟಗಾತಿಯರಿಗೂ ನಿಕಟ ಸಂಬಂಧವಿದೆ ಯೆಂಬ ತಿಳಿವಳಿಕೆಹಬ್ಬಿದೆ. ಗೂಗೆಯನ್ನು ಕೊಂದರಂತೂ ಅತ್ಯಂತ ಭಯಾನಕ ದುರ್ದೈವ ನಿಮಗಾಗಿ ಕಾದಿದೆಯೆಂದು ಇಂಗ್ಲೀಷ ಹಳ್ಳಿಗರು ನಂಬಿದ್ದಾರಂತೆ.

ಕೆಲವೆಡೆ ಗೂಗೆಯ ಮರಿಯನ್ನು ಬೇಯಿಸಿ ಮೋಸದಿಂದ ಆಹಾರದೊಡನೆ ತಿನ್ನಿಸಿದರೆ ತಿಂದ

ಮನುಷ್ಯನ ಬುದ್ಧಿ ಸರ್ವಥಾ ಮಂಕಾಗಿ ಹೋಗುವುದೆಂದು ಅಂಧಶ್ರದ್ಧೆಯಿದೆ. ಗೂಗೆಯನ್ನು ದುರ್ದೈವದ ಹರಿಕಾರನೆಂದು ನಂಬಿದಂತೆ ಮೂಢಶಿಖಾಮಣಿಯೆಂದೂ ಭಾವಿಸಲಾಗಿದೆ. ಪುರಾತನ ಗ್ರೀಕರು ಮಾತ್ರ ಇದರಲ್ಲಿ ಅಪವಾದವಾಗಿದ್ದರೆಂದು ತೋರುತ್ತದೆ. ಅವರು ಒಂದು ಬಗೆಯ ಗೂಗೆಯನ್ನು "ಮಿನರ್ವಾ ದೇವತೆಯ ಗೂಗೆ" ಯೆನ್ನುತ್ತಿದ್ದರು. ಅದು ಬಹಳ ಬುದ್ಧಿಶಾಲಿ ಪ್ರಾಣಿಯೆಂದು ಅವರು ನಂಬಿದ್ದರು.

ಗ್ರೀಕರು ಸರಿಯಾಗಿಯೇ ನಂಬಿದ್ದರು. ಗೂಗೆ ನಿಜವಾಗಿ ಬುದ್ಧಿವಂತ ಪ್ರಾಣಿಯೇ. ಆದರೆ ಅದನ್ನು ತಪ್ಪುತಿಳಿದುಕೊಳ್ಳಲು ಕಾರಣಗಳಿಲ್ಲದಿಲ್ಲ. ಅನೇಕ ಜಾತಿಯ ಗೂಗೆಗಳ ಕಣ್ಣು ಹಗಲಿನ ಬೆಳಕನ್ನು ಸಹಿಸಲಾರದು. ಹಗಲು-ಗುರುಡಲ್ಲದ ಜಾತಿಗಳಲ್ಲಿ ಕೆಲವಕ್ಕೆ ಕಾಗೆಗಳು ಶತ್ರುಗಳಾಗಿರುವುದರಿಂದ ಅವು ಹಗಲಲ್ಲಿ ಹಾಳು ಕಟ್ಟಡಗಳಲ್ಲಿಯೋ ಸತ್ತ ಗಿಡಮರಗಳಲ್ಲಿಯೋ ಆಶ್ರಯ ಪಡೆಯುತ್ತವೆ. ರಾತ್ರಿಚರವಾಗಿರುವುದೇ ಸಾಲದ್ದಕ್ಕೆ ಅದರ ಮುಖಾಕೃತಿಯೂ ಕಣ್ಣುಗಳೂ ಭಯದಾಯಕವಾಗಿಯೇ ಇವೆ. ಅದರ ಕೂಗು ಕೂಡ ಅಷ್ಟೇ. ಮೇಲಾಗಿ ಅದು ನಿಶ್ಶಬ್ದವಾಗಿ ಹಾರುವುದರಿಂದ ಭಯಾನಕತೆಗೆ ನಿಗೂಢತೆಯೂ ಸೇರುತ್ತದೆ.

ಗೂಗೆಗಳು ಜಗತ್ತಿನ ಎಲ್ಲ ಭಾಗಗಳಲ್ಲಿಯೂ (ಅತಿ ಶೀತ ಪ್ರದೇಶಗಳ ಹೊರತು) ಬಹುತರವಾಗಿ ವಾಸಿಸುತ್ತವೆ. ಭಾರತದಲ್ಲಿಯೇ ಇಪ್ಪತ್ತಕ್ಕೂ ಹೆಚ್ಚು ಜಾತಿಯ ಗೂಗೆಗಳಿವೆ. ಅವು ದೇಶದ ಎಲ್ಲ ಭಾಗಗಳಲ್ಲಿಯೂ ಇರುವವು. ಅವುಗಳಲ್ಲಿ ಕಣಜ ಗೂಗೆ (Barn owl) ಹೆಚ್ಚಾಗಿ ಮನುಷ್ಯ ವಸತಿಯ ಸಮೀಪದಲ್ಲಿ ವಾಸಿಸುತ್ತ ಅವನಿಂದ ಬೈಸಿಕೊಂಡು ಅವನಿಗೆ ಅಪರಿಮಿತ ಉಪಕಾರ ಮಾಡುತ್ತದೆ.

ಗೂಗೆಯನ್ನು ಯಾರೇನು ಹೇಳಿದರೂ ರೈತನೂ ಪ್ಲೇಗಿನ ಪಿಡುಗನ್ನು ಹತ್ತಿಕ್ಕಬೇಕೆಂಬವನೂ ಹಾಡಿ ಹರಸಲೇಬೇಕು. ರಾತ್ರಿ ಹೊತ್ತು ಹೊಲದಿಲಿಗಳೂ ಹೆಗ್ಗಣಗಳೂ ಸೇರಿ ದೊಡ್ಡ ದೊಡ್ಡ ಮಿಕಗಳೂ ಒಂದು ದಿನದಲ್ಲಿ ತಿನ್ನಲಾರದಷ್ಟು ಬೆಳೆಯ ಕಾಳುಗಳನ್ನು ಧ್ವಂಸ ಮಾಡಿ ಒಕ್ಕಲಿಗನ ಶ್ರಮವನ್ನು ನಿರರ್ಥಕಗೊಳಿಸುತ್ತಿರುವುದು ಯಾರೂ ಅರಿಯದ ಮಾತಲ್ಲ. ಅಂಥ ಕಳ್ಳ ಪ್ರಾಣಿಗಳನ್ನು ಗೂಗೆಗಳು ಹುಡುಹುಡುಕಿ ಒಯ್ದುಬಿಡುತ್ತವೆ. ಒಂದು ರಾತ್ರಿಯಲ್ಲಿ ಒಂದೊಂದು ಗೂಗೆ ಎರಡೆರಡು ಇಲಿಗಳನ್ನು ನಾಶ ಮಾಡಿದರೂ ಒಕ್ಕಲಿಗನಿಗೆ ಅಪರಿಮಿತ ಸಹಾಯ ಮಾಡಿದಂತೆ. ಆದರೆ ವಾಸ್ತವಿಕವಾಗಿ ಅವು ಇದಕ್ಕಿಂತಲೂ ಹೆಚ್ಚು ಇಲಿಗಳನ್ನು ಕೊಲ್ಲುತ್ತವೆ. ಇಂಗ್ಲಂಡಿನಲ್ಲಿ ಒಂದು ಜತೆ ಗೂಗೆಗಳು ಹಾಕಿದ ೭೦೦ ಹಿಕ್ಕೆಗಳಿಂದ ೨,೫೧೩ ಇಲಿ ಹೆಗ್ಗಣಗಳು ಅವುಗಳ ಹೊಟ್ಟೆ ಸೇರಿದ್ದವೆಂದು ಕಂಡುಬಂತು. ಇನ್ನೊಂದು ಜತೆ ಗೂಗೆಗಳು ಒಂದೇ ರಾತ್ರಿ ೩೧ ಇಲಿ ಹೆಗ್ಗಣಗಳನ್ನು ತಮ್ಮ ಮರಿಗಳಿಗೆ ತಂದುಕೊಟ್ಟಿದ್ದವು. ತಾವು ತಿಂದ ಇಲಿಗಳ ಲೆಕ್ಕ ಬೇರೆಯೇ. ಗೂಗೆಗಳ ಹಸಿವು ಅದ್ಭುತವಾದದ್ದೇ.

ಗೂಗೆಗಳಿಂದಾಗುವ ಇನ್ನೊಂದು ಪ್ರಯೋಜನ ಪ್ಲೇಗ್‌ನಿಯಂತ್ರಣ. ಪ್ಲೇಗು ಜಂತುಗಳು ಇಲಿಗಳಿಂದ ಹಬ್ಬುವ ಮಾತು ಎಲ್ಲರಿಗೂ ಗೊತ್ತಿದೆ. ಸಾವಿರಾರು ಜನರಿಗೆ ಸಾವನ್ನು ತರುವ ಈ ರೋಗವನ್ನು ಹಬ್ಬಿಸುವ ಇಲಿಗಳನ್ನು ಗೂಗೆ ನಷ್ಟಪಡಿಸಿ ಮನುಷ್ಯನ ಅನಧಿಕೃತ ಸಾರ್ವಜನಿಕಾರೋಗ್ಯ ಕಾರ್ಯಕರ್ತನಾಗಿದೆ. ಬ್ರಿಟನ್ನಿನಲ್ಲಿ ಈ ಮೂಷಕ ನಾಶಕ ಮಿತ್ರನ ತಳಿ ಬೆಳೆಯಲು ಜನರು ಬುದ್ಧಿಪೂರ್ವಕವಾಗಿ ಪ್ರಯತ್ನಿಸುತ್ತಾರೆಂದು ತಿಳಿಯುತ್ತದೆ.

ಗೂಗೆಗಳು ಶೌರ್ಯದಲ್ಲಿಯೂ ಕಡಿಮೆಯಲ್ಲ, ದೂರದೃಷ್ಟಿಯಲ್ಲೂ ಅಲ್ಲ. ಗೂಗೆಯ ಗೂಡಿನ ಮೇಲೆ ಕೈಮಾಡುವುದೆಂದರೆ ಗಿಡುಗನ ಗೂಡಿನ ಅತಿಕ್ರಮಣಕ್ಕಿಂತಲೂ ಭಯಂಕರವೆಂದು ಒಬ್ಬ ಲೇಖಕ ಬರೆದಿದ್ದಾನೆ. ಶೌರ್ಯದೊಡನೆ ವಿವೇಕವೂ ಅದಕ್ಕಿದೆ. ಹಗಲಲ್ಲಿ ಅದು ಸಂಚರಿಸದಿರಲು ಅದಕ್ಕೆ ಕಣ್ಣು ಕಾಣದಿರುವುದು ಕಾರಣವಾಗಿರದೆ ಇತರ ಪಕ್ಷಿಗಳು— ವಿಶೇಷವಾಗಿ

ಕಾಗೆ— ತನ್ನನ್ನು ಮೆಚ್ಚುವುದಿಲ್ಲೆಂದು ಅದಕ್ಕೆ ಗೊತ್ತಿರುವುದೇ ಕಾರಣವೆಂದು ಅವನ ಹೇಳಿಕೆ. ದೂರ ದೃಷ್ಟಿಯ ವಿಷಯ ಹೇಳುವುದಾದರೆ,ಅದು ತಾನು ಸಂಗ್ರಹಿಸಿದ ಆಹಾರದಲ್ಲಿ ಕೆಲಭಾಗ ವನ್ನು ಹಗಲಿಗಾಗಿ ಮಾತ್ರವಲ್ಲ, ಮುಂದೆ ಬರ ಬಹುದಾದ "ಕ್ಷಾಮ" ದಿನಗಳಿಗಾಗಿಯೂ ಉಳಿಸಿಕೊಳ್ಳುತ್ತದೆ.

ಗೂಗೆಯ ತಲೆ ಅದರ ದೇಹದ ಮಾನಕ್ಕೆ ದೊಡ್ಡದು. ಅದರ ದುಂಡಾದ ಮುಖ ಮಂಗನ ಮೂತಿಯಂತೆ ವಿಕಾರವಾಗಿದೆ. ಪುಕ್ಕಗಳು ಇಳಿ ಜಾರಾಗಿ ಮೆತ್ತಗಿರುವುದರಿಂದ ಅದು ಹಾರುವಾಗ ಸಪ್ಪಳವಾಗುವುದಿಲ್ಲ. ಇದರಿಂದಲೇ ಇಲಿಗಳ ಮೇಲೆ ಗೂಗೆಗಳ ದಾಳಿ ಗುಪ್ತವಾಗಿಯೇ ಉಳಿದು ಜಯಪ್ರದವಾಗುತ್ತದೆ. ಗೂಗೆಯ ನಖ ಗಳು ಉದ್ದವಾಗಿ ಮೊನಚಾಗಿದ್ದು ಕಾಲಿನ ಹಿಡಿತವು ಬಲವಾದ ಬಿಗುವನ್ನು ಕೊಡುವುದ ರಿಂದ ಅದರ ಹಿಡಿತದಲ್ಲಿ ಸಿಕ್ಕ ಕೊಳ್ಳಿ ಇಕ್ಕಳ ದಲ್ಲಿ ಒತ್ತಲ್ಪಟ್ಟಂತೆ ಕೆಲ ನಿಮಿಷಗಳಲ್ಲೆ ಸಾಯು ತ್ತದೆ.

ಗೂಗೆಗಳು ಗಾತ್ರದಲ್ಲಿ ವಿವಿಧವಾಗಿರುತ್ತವೆ. ಸಾಮಾನ್ಯವಾಗಿ ಮನೆಯ ಬಳಿ ವಾಸಿಸುವ ಕಣ ಜದ ಗೂಗೆ ಕಾಗೆಗಿಂತ ದೊಡ್ಡದು. ಉತ್ತರದ "ಚಿಕ್ಕೆ ಗೂಗೆ" ಇದಕ್ಕಿಂತ ತೀರ ಸಣ್ಣದು. ಭಾರತೀಯ "ಕೋಡಿನ ಗೂಗೆ" ಪರೆಯಾ ಹದ್ದಿ ನಷ್ಟು ದೊಡ್ಡದು. ಇವುಗಳಲ್ಲಿ ಹೆಚ್ಚಿನವುಗಳ ಆಹಾರ ಇಲಿ, ಹೆಗ್ಗಣ, ಚಿಕ್ಕ ಪಕ್ಷಿಗಳು, ಹಲ್ಲಿ ಇತ್ಯಾದಿಗಳು. ಆದರೆ ಆಫ್ರಿಕಾ ಹಾಗು ಭಾರ ತದ ಕರಾವಳಿಯಲ್ಲಿರುವ "ಬೆಸ್ತಗೂಗೆ" ಗಳು ಕೆರೆ ಸರೋವರ ಸಮುದ್ರಗಳಲ್ಲಿಯ ಮೀನು ಗಳನ್ನು ಹಿಡಿಯುವುದೂ ಉಂಟು. ಅವುಗಳ ಕಾಲುಗಳ ಮೇಲ್ಬದಿಗೆ ಕೋಡಿನಂಥ ಕೊಂಡಿ ಗಳಿರುವುದರಿಂದ ನಯವಾಗಿ ಜಾರುವ ಮೀನು ಗಳನ್ನು ಕೂಡ ಅವು ಹಿಡಿತ ತಪ್ಪದಂತೆ ಹಿಡಿ ದೊಯ್ಯಬಲ್ಲವು.

ಆದರೆ ಯುರೋಪಿನಲ್ಲಿರುವ ಹದ್ದುಗೂಗೆಗಳು ದೈತ್ಯಾಕೃತಿಯ ಪ್ರಾಣಿಗಳು. ಅವು ಪರ್ವತ ಪ್ರಾಂತಗಳಲ್ಲೇ ವಾಸಿಸುತ್ತವೆ. ಅವು ಒಂದು ಗಜದ ವರೆಗೂ ಉದ್ದವಿದ್ದು ಹದ್ದಿನಂತೆ ಭಯಂಕರವಾಗಿರುತ್ತವಂತೆ. ಚಿಕ್ಕ ಚಿಕ್ಕ ಚಿಗರೆ ಯಂಥ ಪ್ರಾಣಿಗಳನ್ನು ಕೂಡ ಅವು ಹಿಡಿದು ಹೊಟ್ಟೆ ತುಂಬಿಕೊಳ್ಳುವವೆಂದು ಹೇಳುತ್ತಾರೆ.

ಈ ವರೆಗೆ ಹೇಳಿದ ಗೂಗೆಗಳನ್ನೆಲ್ಲ ಅವುಗಳ ಸ್ವಭಾವದ ಮೇಲಿಂದ ದಾಳಿಗಾರ ಗೂಗೆಗಳೆಂದು (Predatory Owls) ಕರೆಯುತ್ತೇವೆ. ಗೂಗೆಗಳಲ್ಲಿ ಈ ಜಾತಿಯವೇ ಬಹಳ. ಇವು ಗೂಡು ಕಟ್ಟಿ ಬಾಳುವವು. ಇನ್ನೊಂದು ತೆರ ನಾದ ಗೂಗೆಗಳೂ ಇವೆ. ಅವು ಬಿಲನಿವಾಸಿ ಗಳು. ಅಮೇರಿಕದ ಟೆಕ್ಸಾಸದ ವಿಶಾಲ ಮರು ಬಯಲುಗಳಲ್ಲಿ ಹಾಗು ಸುತ್ತಮುತ್ತ ಮಾತ್ರ ಅವು ಕಂಡುಬರುತ್ತವೆ. ಇಣಚಿಯಂಥ ಒಂದು ಪ್ರಾಣಿ ತೋಡಿದ ಬಿಲಗಳಲ್ಲಿ ಆ ಪ್ರಾಣಿಯನ್ನು ತಿಂದು ಆ ಗೂಗೆಗಳು ಆ ಹೊದರುಗಳನ್ನೇ ತಮ್ಮ ಮನೆಯಾಗಿ ಮಾಡಿಕೊಳ್ಳುತ್ತವೆ. ಅವು ಅಂಥದೇ ಬಿಲಗಳಲ್ಲಿ ವಾಸಿಸುವ ಒಂದು ತರದ ಹಾವುಗಳನ್ನೂ ತಿನ್ನುವುದುಂಟು.

ಈಗ ಹೇಳಿ, ಗೂಗೆಗಳು ಮನುಷ್ಯನಿಗೆ ಅನಿ- ಷ್ಟವೊ, ಅನಿಮಿತ್ತ ಬಾಂಧವರೊ ?



ಒಂದು ಸ್ವಾನುಭವದ ಘಟನೆ—

# ರಾಯರು ಬರುವರು!

ಶ್ರೀಮತಿ ನರ್ಮದಾಬಾಯಿ

ಮಕರ ಸಂಕ್ರಮಣದ ಸಂಜೆ ನಮ್ಮ ಮನೆಯಲ್ಲಿ ಚಾಳಿನ ಮಹಿಳೆಯರೆಲ್ಲ ಸೇರಿದ್ದರು. ಹರಟೆಗೆ ರಂಗು ಏರಿತ್ತು. ಅಷ್ಟರಲ್ಲಿ ನಮ್ಮವರ ಆಫೀಸಿನ ಪೇದೆ ರಾಮು ಬಂದು, "ರಾಯರು ಊಟಕ್ಕೆ ಬರುತ್ತಾರಂತೆ. ತರಕಾರಿ ಗಿರಕಾರಿ ತರಲಿಕ್ಕೆ ಒಂದು ಚೀಲ ಕೊಡಬೇಕಂತೆ" ಎಂದ. ನಾನು ಎದ್ದು ಹೋಗಿ ಚೀಲ ಕೊಟ್ಟು 'ಮಂಡಲಿ'ಗೆ ಮರಳಿದೆ.

"ಏನ್ರೀ, ನರ್ಮದಾ ಬಾಯಿ, ಏನು ಸಮಾಚಾರ? ನಿಮ್ಮ ರಾಯರು ಊಟಕ್ಕೆ ಬರುತ್ತಾರಂತಲ್ಲ. ಏನು ದಿನಾ ಊಟಕ್ಕೆ ಬರೋದಿಲ್ಲೇನು? ಇವತ್ತೇ ಏನು ವಿಶೇಷ?" ಎಂದು ಸುಶೀಲಾಬಾಯಿ ಕೆಣಕಿದರು. ರಾಮನ ಮಾತು ನನಗೂ ರಹಸ್ಯವೇ ಆಗಿತ್ತು. "ಬಾರದೆ ಮತ್ತೆಲ್ಲಿ ಹೋಗುತ್ತಾರೆ? ನಿಮ್ಮದೊಂದು!" ಎಂದೆ ನಾನು.

ಆದರೆ ಯಾರೂ ನಂಬಲಿಲ್ಲ. ಇವರ ರಾಯರು ಇವೊತ್ತೇ ಯಾಕೆ ಊಟಕ್ಕೆ ಬರುತ್ತೇವೆ ಅಂತ ಹೇಳಿ ಕಳಿಸಬೇಕು? ಇದರಲ್ಲಿ ಏನೋ ರಹಸ್ಯ ಇರಲೇಬೇಕು. ಗಂಡ-ಹೆಂಡಿರೊಳಗೆ ಏನೋ ಚಟಾಪಟಿ ಎದ್ದಿರಬೇಕು ಎಂದುಕೊಂಡು ಅವರೆಲ್ಲ ನನ್ನನ್ನು ಅರ್ಥವತ್ತಾಗಿ ನೋಡತೊಡಗಿದರು. "ನರ್ಮದಾಬಾಯಿ ಬಲು ಗಟ್ಟಿ. ಬಾಯಿ ಬಿಡೋದೇ ಇಲ್ಲ," ಎಂದರೊಬ್ಬರು. "ಖರೇ ಹೇಳಿರಿ. ಹೂರಣ ಹೊರಬೀಳಲಿಕ್ಕೆ ಹತ್ತಿದೆ. ಇನ್ನೂ ಯಾಕೆ ಗುಟ್ಟು? ಎಷ್ಟು ದಿನದಿಂದ ಹೀಗೆ?" ಎಂದರು ಮತ್ತೊಬ್ಬರು. "ಬಹಳ ದಿನದಿಂದ ಇರಬೇಕು. ಇವೊತ್ತೇನೋ ರಾಜಿ ಆದ ಹಾಗೆ ಕಾಣುತ್ತೆ. ಅಡ್ಡಿಯಿಲ್ಲ ಬಿಡವ್ವ. ಗಂಡಾ ಹೆಂಡತಿ ಇಬ್ಬರೂ ಬಲು 'ಘಾಟಿ' ಅಂತಾರಲ್ಲ ನಿಮ್ಮ ಮೈಸೂರು ಕಡೆ, ಹಾಗಿದ್ದೀರಿ. ಇಷ್ಟು ದಿನದಿಂದ ಈ ಪ್ರಣಯಕಲಹ ನಡೆದಿದ್ದರೂ ಇಬ್ಬರಲ್ಲಿ ಒಬ್ಬರಾದರೂ ಸುಳಿವು ಕೊಡಬೇಕೆ? ಇವೊತ್ತು ಮಧ್ಯಾಹ್ನ ಸಹಿತ ಊಟ ಮಾಡದೇ ಹೋಗಿರಬೇಕು. ಮತ್ತೆ ಈಗ ಹ್ಯಾಗೆ ತಲೆ ತಿರುಗಿತೋ!"

ತಲೆಗೊಬ್ಬೊಬ್ಬರು ಒಂದೊಂದು ಹೇಳಿದರು. ನಾನು ಏನೂ ಆಗಿಲ್ಲ ಎಂದರೆ ಯಾರು ಕೇಳಬೇಕು? ಅಕಸ್ಮಾತ್ತಾಗಿ ರಾಯರು ಊಟಕ್ಕೆ ಬರುತ್ತಾರೆ ಎನ್ನುವ ಸಂದೇಶದ ಅರ್ಥ ಹೇಳಲು ನನಗೂ ಬಾರದ್ದರಿಂದ ಅವರ ಸಂಶಯ ಬಲವಾಗುತ್ತಲೇ ಇತ್ತು. ನಮ್ಮ ಮನೆಯಿಂದ ಸಭೆ ಬರಖಾಸ್ತು ಆದ ಮೇಲೆ ಅವರು ಬೇರೆ ಬೇರೆ ಮನೆಗಳಲ್ಲಿ ಕೂಡಿ ರಹಸ್ಯದ ಚರ್ಚೆ ನಡೆಸಿಯೇ ನಡೆಸಿದರು. ನನಗೂ ದಿಗಿಲು ಬಿತ್ತು. ಅಳು ಬರುವಂತಾಯಿತು.

ರಾತ್ರಿ ಹತ್ತೂವರೆ ಗಂಟೆಯ ವರೆಗೂ ಘನತರವಾದ ಗುಜುಗುಜು ಸಾಗಿಯೇ ಇತ್ತು. ಅಷ್ಟರಲ್ಲಿ ನೆರೆಮನೆಯ ಸುರೇಂದ್ರರಾಯರು ಮನೆಗೆ ಬಂದರು. ಅವರೂ ನಮ್ಮವರ ಆಫೀಸಿನವರೇ. ಅವರು ಒಂದು ಭಾರವಾದ ಚೀಲ ನಮ್ಮಲ್ಲಿಗೆ ಕಳಿಸಿ

" ರಾಯರು ಊಟಕ್ಕೆ ಬರುತ್ತಾರಂತೆ " ಎಂದು ತಿಳಿಸಿದರು.

ಮಹಿಳೆಯರು ಮತ್ತೆ ಬಂದರು. ಚೀಲ ಸುರುವಿದಾಗ ಅವರ ಆಶ್ಚರ್ಯ ಹೆಚ್ಚಿದಂತೆ ಸಂಶಯವೂ ದೃಢಪಟ್ಟಿತು. ಮನೆಗೆ ಎಂದೂ ಬಾರದಿದ್ದ ಅಪೂರ್ವ ತರಕಾರಿಗಳು, ಮೂಸಂಬಿ, ಸೇಬು. ಸ್ವಲ್ಪ ಇಂಗ್ಲಿಷು ಬಲ್ಲ ಸುರೇಂದ್ರರಾಯರ ಹೆಂಡತಿ ಸುಶೀಲಾಬಾಯಿ, " ಏನೋ ಗ್ರ್ಯಾಂಡ್ ರಿಕನ್ಸಿಲಿಯೇಶನ್ ( ಭಾರೀ ಸಂಧಿ ) ನಡದದೆ ಬಿಡ್ರಿ. ಇನ್ನೇನೂ ಹೇಳಬೇಕಿಲ್ಲ. ಅಲ್ರೀ ನರ್ಮದಾಬಾಯಿ, ಇನ್ನು ಯಾವಾಗ ಅಡಿಗೆ, ಏನು ಅಡಿಗೆ? ಅರ್ಧ ರಾತ್ರೀ ಮೇಲೆ ರಾಜಿಯೇನ್ರೀ? " ಎಂದು ನಗೆಯಾಡಿದರು. ನನಗೆ ಏನೂ ಹೊಳೆಯಲಿಲ್ಲ. ಗಾಬರಿಯಾಗಿ ಸುರೇಂದ್ರರಾಯರ ಮನೆಗೆ ಹೋಗಿ " ಯಾವಾಗ ಬರುತ್ತಾರಂತೆ ರಾಯರು ? ಇನ್ಯಾವಾಗ ಅಡಿಗೆ ಮಾಡಬೇಕು ? " ಎಂದು ಕೇಳಿದೆ. " ಈವೊತ್ತಲ್ಲ ನಾಳೆ ಮಧ್ಯಾಹ್ನ ! " ಎಂದರವರು.

ಈಗ ನನಗೆ ನಿಜವಾಗಿ ಹೆದರಿಕೆಯಾಯಿತು. ನಾನು ಜೋಲು ಮೋರೆ ಹಾಕಿಕೊಂಡು ಮರಳಿದೆ. ಮಹಿಳಾ ಮಂಡಲ ನೆರೆದು, " ಮತ್ತೇನೋ ಆಗಿದೆ" ಎಂದು ತರ್ಕಿಸತೊಡಗಿತು. "ಈವೊತ್ತು ರಾತ್ರಿ ಬರೋದಿಲ್ಲಂತೆ ? ಅಂದರೇನು ? "

ನಾನು ಸುಶೀಲಾಬಾಯಿಯನ್ನು ಬದಿಗೆ ಕರೆದು, "ಸ್ವಲ್ಪ ಕೇಳಿರಿ ನಿಮ್ಮವರನ್ನ. ಇವೊತ್ತು ಯಾಕೆ ಬರೋದಿಲ್ಲ ? ನನಗೆ ಯಾಕೊ ಹೆದರಿಕೆ ಆಗುತ್ತಿದೆ. ಈ ಹಬ್ಬದ ದಿನ ಇದೇನು ಬಂತಪ್ಪಾ ! " ಎಂದು ಅಂಗಲಾಚಿದೆ.

ಅವರು ಹೋಗಿ ತಿರುಗಿ ಬರುವವರೆಗೆ ಎರಡು ನಿಮಿಷ ನನಗೆ ಕೆಂಡದ ಮೇಲೆ ನಿಂತಂತಾಗಿತ್ತು. ಅವರು ಬಂದವರೇ ರಹಸ್ಯಮಯವಾಗಿ "ಭ್ರಾಂತಿವಿಲಾಸ ! ಕಾಮೆಡಿ ಆಫ್ ಎರರ್ಸ್ ! " ಎಂದರು.

ನಾನು ಕಳವಳದಿಂದ, " ಏನು ಸಮಾಚಾರ ? ಸರಿಯಾಗಿ ಹೇಳಿ ! " ಎಂದು ಬೇಡಿಕೊಂಡೆ.

ಆಗ ಅವರು ಬಿಚ್ಚಿದ ರಹಸ್ಯ ಬಲು ದೊಡ್ಡ ನಗೆ ಎಬ್ಬಿಸಿತು. " ನಾಳೆ ಮಧ್ಯಾಹ್ನ ಬರೋವರು ನಿಮ್ಮ ರಾಯರಲ್ರೀ, ನಿಮ್ಮ ರಾಯರ ರಾಯರು. ಆಫೀಸಿನ ಬಾಸ್ ! ಅವರನ್ನು ನಾಳೆ ಊಟಕ್ಕೆ ಕರೆದಿದ್ದಾರಂತೆ ನಿಮ್ಮ ರಾಯರು. ನಿಮ್ಮ ರಾಯರು ಇವೊತ್ತು ರಾತ್ರಿಯೇ ಬರುತ್ತಾರೆ. ಅಂಜಬೇಡಿರಿ. ಅವರ ರಾಯರು ನಾಳೆ ಬರುತ್ತಾರಂತೆ ! "

ನಾನು ನಗುವ ಬದಲು ನಿಟ್ಟುಸಿರು ಬಿಟ್ಟೆ. "ಸಾಕಪ್ಪ ಈ ರಾಯರುಗಳ ಸಂಗತಿ ! " ಎಂದರು ಭೀಮಕ್ಕ.



## ನಮ್ರ ಸೂಚನೆ

ಸದ್ಗೃಹಸ್ಥ— ನಿನಗೆ ಒಂದಾಣೆ ಕೊಡುತ್ತಿದ್ದೇನೆ. ನೀನು ಅದಕ್ಕೆ ಅರ್ಹ ಎಂದಲ್ಲ, ದಾನ ಕೊಡುವದರಿಂದ ನನಗೆ ಸಂತೋಷವಾಗುತ್ತದೆ ಎಂದು.

ಭಿಕ್ಷುಕ— ಸ್ವಾಮಿ, ಒಂದಾಣೆಯ ಬದಲು ಎಂಟಾಣೆ ಕೊಟ್ಟರೆ ನಿಮಗೆ ಇನ್ನಿಷ್ಟು ಸಂತೋಷವಾಗಲಿಕ್ಕಿಲ್ಲವೇ ?

ಅರಬಸ್ತಾನದಲ್ಲಿ ಈ ಅಮಾನುಷ ಪದ್ಧತಿ ಇನ್ನೂ ಉಳಿದಿದೆ—

# ಈಗಲೂ ಮನುಷ್ಯರನ್ನು ಮಾರುತ್ತಾರೆ!

ಯುನೆಸ್ಕೊ ವರದಿಗಳಿಂದ

ಈ ೨೦ ನೆಯ ಶತಮಾನದಲ್ಲಿ ಕೂಡ ಮನುಷ್ಯರ ವ್ಯಾಪಾರ ನಡೆಯುತ್ತಿದೆ, ಜಗತ್ತಿನಲ್ಲಿ ಒಂದು ಕೋಟಿಗೆ ಮೇಲ್ಪಟ್ಟು ಗುಲಾಮರಿದ್ದಾರೆ ಎಂದರೆ ನಿಮಗೆ ಆಶ್ಚರ್ಯವಾದೀತು. ಆದರೆ ಇದೇನೂ ಕಟ್ಟು ಕಥೆಯಲ್ಲ.

ಕಳೆದ ವರ್ಷ ಜಿನೀವಾದಲ್ಲಿ ಸಂಯುಕ್ತ ರಾಷ್ಟ್ರ ಸಂಘವು ಸೇರಿಸಿದ್ದ ವಿಶೇಷ ಪರಿಷತ್ತೊಂದರಲ್ಲಿ ೩೦ ರಾಷ್ಟ್ರಗಳ ಪ್ರತಿನಿಧಿಗಳು 'ಗುಲಾಮರ ವ್ಯಾಪಾರ'ವನ್ನು ಚರ್ಚಿಸಿದರು. ಗುಲಾಮಗಿರಿ ವಿರೋಧಿ ಸಮಾಜದ ಲಂಡನ್ ಡಾಯರೆಕ್ಟರ ಸಿ. ಡಬ್ಲ್ಯು. ಗ್ರೀನಿಜ್‌ರು ಈ ಪರಿಷತ್ತಿನಲ್ಲಿ ಸಾದರಪಡಿಸಿದ ೧೧೦ ಪುಟಗಳ ವರದಿಯಲ್ಲಿ "ಅರೇಬಿಯಾದಲ್ಲಿ ೫೦ ಲಕ್ಷ, ಏಶಿಯಾದಲ್ಲಿ ೩೦ ಲಕ್ಷ, ಪೇರು ಮತ್ತು ಇಕ್ವಾಡೋರಗಳಲ್ಲಿ ೬೦ ಲಕ್ಷ ಗುಲಾಮರಿದ್ದಾರೆ". ಎಂದು ಹೇಳಿರುವರು.




ಅರೇಬಿಯಾವೇ ಗುಲಾಮಗಿರಿಗೆ ತವರ್ಮನೆ ಎಂದು ಗ್ರೀನಿಜ್‌ರು ತಮ್ಮ ವರದಿಯಲ್ಲಿ ಹೇಳಿದ್ದಾರೆ. ಅಲ್ಲಿ ಗುಲಾಮರನ್ನಿಟ್ಟುಕೊಳ್ಳುವದು, ಗುಲಾಮರ ವ್ಯಾಪಾರ ಮಾಡುವದು ಕಾಯದೆಗೆ ಸಮ್ಮತವಾದುದು. ಅಲ್ಲಿ ದನಗಳನ್ನು ಸಾಕಿ ಅವುಗಳ ಪೀಳಿಗೆ ಬೆಳೆಸುವಂತೆ ಗುಲಾಮರನ್ನು ಸಾಕಿ ಅವರ ಸಂಖ್ಯೆಯನ್ನು ಹೆಚ್ಚಿಸುತ್ತಾರೆ. ಆಫ್ರಿಕೆ ಮತ್ತು ಬಲುಚಿಸ್ತಾನಗಳಿಂದ ವ್ಯಾಪಾರಿಗಳು ಗುಲಾಮರ ಆಯಾತ ಮಾಡುತ್ತಾರೆ.

ಸೌದಿ ಅರೇಬಿಯದಲ್ಲಿ ಗುಲಾಮರ ವ್ಯಾಪಾರ ಹೆಚ್ಚುತ್ತಿದೆ ಎಂಬುದಕ್ಕೆ ಆಧಾರಗಳಿವೆ. ಅಲ್ಲಿ ಎಣ್ಣೆ ಗಣಿಗಳ ಮೂಲಕ ಸಂಪತ್ತು ಅಪರಿಮಿತವಾಗಿ ಹೆಚ್ಚಿದ್ದು ಇದರಿಂದ ಗುಲಾಮರ ಬೇಡಿಕೆ ಬಹಳವಾಗಿದೆ. ೪೦ ರ ವರೆಗೂ ಗುಲಾಮರನ್ನಿಟ್ಟುಕೊಂಡಿರುವ ಅರಬ ಶ್ರೀಮಂತರು ಅಲ್ಲಿದ್ದಾರೆ. ಮೊದಲಿಗೆ ಗುಲಾಮನೊಬ್ಬನ ಬೆಲೆ ೧೦ ರಿಂದ ೭೦ ಪೌಂಡುಗಳಷ್ಟಿತ್ತು. ಆದರೆ

ಈಗ ಸದೃಢ ಯುವಕನೊಬ್ಬನಿಗೆ ೧೫೦ ಪೌಂಡು ಗಳ ವರೆಗೂ ಸುಂದರ ಯುವತಿಗೆ ೪೦೦ ಪೌಂಡುಗಳ ವರೆಗೂ ಬೆಲೆ ಬರುತ್ತಿದೆ.

ಸೌದಿ ಅರೇಬಿಯಾದಲ್ಲಿ ಗುಲಾಮರಿಗೆ ತುಂಬ ಬೇಡಿಕೆಯಿರುವದರಿಂದ ಆಫ್ರಿಕೆ ಮತ್ತು ಮಧ್ಯ ಪೂರ್ವ ದೇಶಗಳಲ್ಲಿ ಜನರು ಹೆಚ್ಚೆಚ್ಚು ಧೈರ್ಯ ದಿಂದ ಗುಲಾಮರ ವ್ಯಾಪಾರದಲ್ಲಿ ತೊಡಗುತ್ತಿದ್ದಾರೆ.

ಈ ವ್ಯಾಪಾರಿಗಳು ಟ್ರಕ್ಕಿನಲ್ಲಿ ಫ್ರೆಂಚ ಆಫ್ರಿಕಾ, ನೈಜೀರಿಯಾ, ಬೆಲ್ಜಿಯನ್ ಕಾಂಗೋದ ವರೆಗೂ ಹೋಗುತ್ತಾರೆ. ಪೋಲೀಸರು ಸಹಸಾ ಹೋಗಲಾರದ ತೀರ ದೂರದ ಹಳ್ಳಿಗಳಿಗೆ ಮಹ ಮ್ಮದೀಯ ಧರ್ಮಪ್ರಸಾರಕರ ವೇಷದಲ್ಲಿ ತಲು ಪಲು ಅವರಿಗೆ ಕಷ್ಟವಾಗುವದಿಲ್ಲ. ಅಲ್ಲಿ ಜನ ರನ್ನು ಸವಿಮಾತುಗಳಿಂದ ಇಸ್ಲಾಂ ಮತಕ್ಕೆ ಸೇರು ವಂತೆ ಪ್ರೋತ್ಸಾಹಿಸುತ್ತಾರೆ.

ಮುಂದೆ, ಇಹಪರಗಳೆರಡನ್ನೂ ಸಾಧಿಸುವ ದಕ್ಕೆ ಮಕ್ಕಾಯಾತ್ರೆ ಮಾಡುವದು ಅವಶ್ಯ ಎಂದು ಮತಾಂತರ ಹೊಂದಿದವರಿಗೆ ನಂಬಿಕೆಯಾಗು ವಂತೆ ಪುಸಲಾಯಿಸುತ್ತಾರೆ. ಪ್ರವಾಸದ ವೆಚ್ಚವ ನ್ನೆಲ್ಲ ತಾವೇ ವಹಿಸುವದಾಗಿ ಈ ಠಕ್ಕ ಧರ್ಮ ಪ್ರಸಾರಕರನ್ನುವದನ್ನು ಕೇಳಿ ಮತಾಂತರ ಹೊಂದಿದ ಜನರು ನಗನಗುತ್ತ, ಉತ್ಸಾಹದಿಂದ ಟ್ರಕ್ಕುಗಳನ್ನೇರುತ್ತಾರೆ.

ರಾತ್ರಿ ಕಾಲದಲ್ಲಿ ಅಧಿಕಾರಿಗಳ ಕಣ್ಣು ತಪ್ಪಿಸಿ ವ್ಯಾಪಾರಿಗಳು ಟ್ರಕ್ಕುಗಳನ್ನು ಸಾಗಿಸಿ ಕೊಂಡು ಸುವಾಕಿನ್ ಅಥವಾ ಸುಡಾನ ಬಂದ ರಕ್ಕೆ ಬರುತ್ತಾರೆ. ಅಲ್ಲಿ ಅರಬ ಹಡಗಗಳನ್ನೇ ರುತ್ತಾರೆ.

ಹಿಂದಕ್ಕೆ ಬ್ರಿಟಿಶ್ ನೌಕಾಪಡೆ ಕೆಂಪು ಸಮು ದ್ರದಲ್ಲಿ ಗಸ್ತಿ ನಡೆಸುತ್ತಿದ್ದಾಗ ಈ ಹಡಗುಗಳು ಪಾರಾಗುವದು ಪ್ರಯಾಸವಾಗಿತ್ತು. ದ್ವಿತೀಯ ಜಾಗತಿಕ ಮಹಾಯುದ್ಧದ ಕಾಲದಲ್ಲಿ ಈ ಗಸ್ತಿ ಯನ್ನು ಬಿಟ್ಟುಕೊಟ್ಟ ಬ್ರಿಟಿಶ್ ನೌಕಾಪಡೆ ಪುನಃ ಅದನ್ನು ಪ್ರಾರಂಭಿಸಿಲ್ಲವಾದ್ದರಿಂದ ಗುಲಾಮ ರನ್ನು ತುಂಬಿ ತರುವ ಈ ಹಡಗುಗಳಿಗೆ ಈಗ ನಿರಾತಂಕವಾಗಿದೆ.

ಲಿಥ್ ಬಂದರಕ್ಕೆ ಬಂದೊಡನೆ ಸೌದಿ ಅರೇಬಿ ಯದಲ್ಲಿ ಅಪ್ಪಣೆಯಿಲ್ಲದೆ ಪ್ರವೇಶ ಮಾಡಿದ ನೆವದಿಂದ ಈ ಯಾತ್ರಿಕರನ್ನು ಕೈದು ಮಾಡಿ ಜಿಡ್ಡಾ ಸೆರೆಮನೆಗೆ ಒಯ್ಯುತ್ತಾರೆ. ಅಲ್ಲಿಂದ ಮುಂದೆ ಈ ಕೈದಿಗಳು ಗುಲಾಮ ಪೇಟೆಯಲ್ಲಿ ಲೀನವಾಗಿ ಹೋಗುತ್ತಾರೆ. ಸೌದಿ ಅರೇಬಿಯದ ಶ್ರೀಮಂತ ವರ್ಗದವರು ಇವರನ್ನು ಕೊಳ್ಳು ತ್ತಾರೆ. ಪ್ರತಿವರ್ಷ ಕನಿಷ್ಠ ೬೦೦ ಜನರಾದರೂ ಈ ರೀತಿ ಗುಲಾಮರಾಗಿ ಮಾರಲ್ಪಡುತ್ತಾರೆಂದು ತಿಳಿಯುತ್ತದೆ. ಬೇರೆ ಕೆಲವರು ಈ ಸಂಖ್ಯೆ ಸಾವಿರ ಗಟ್ಟಳೆಯಲ್ಲಿದೆಯೆನ್ನುತ್ತಾರೆ. ಇತರ ಸರಕುಗ ಗಳನ್ನು ಮಾರುವಂತೆ ಈ 'ಮನುಷ್ಯ ಸರಕು' ಳನ್ನೂ ಬಹಿರಂಗವಾಗಿಯೇ ಮಾರುತ್ತಾರೆ. ಸೌದಿ ಅರೇಬಿಯದಲ್ಲಿ ಆರು ಕುಲಗಳು ಈ ಗುಲಾಮ ವ್ಯಾಪಾರದಿಂದಲೇ ಜೀವಿಸುವವು.

ಕೆಲವೇಳೆ ಗುಲಾಮರನ್ನು ಹಿಡಿದುತರುವದಕ್ಕೆ ಬೇಟೆಯ ರೂಪ ಬರುವದುಂಟು. ಸಂದಿಗೊಂ ದಿಯ ಆಫ್ರಿಕನ್ ಹಳ್ಳಿಗಳಿಗೆ ಹೋಗಿ ಗುಂಡು ಹಾರಿಸಿ ಜನರನ್ನು ಅಂಜಿಸಿ ಕೈಗೆ ಸಿಕ್ಕವರನ್ನು ಟ್ರಕ್ಕುಗಳಲ್ಲಿ ಹೇರಿ ತೆಗೆದುಕೊಂಡು ಬರುವರು.

ಸೌದಿ ಅರೇಬಿಯದ ೧೯೩೬ರ ಕಾಯದೆಯಲ್ಲಿ "ಗುಲಾಮರ ದಾಖಲೆಯನ್ನು ಸಮರ್ಥ ಅಧಿಕಾ ರಿಗಳ ಮೂಲಕ ಇಡಿಸಬೇಕು. ಪ್ರತಿಯೊಬ್ಬ ಗುಲಾಮನಿಗೂ ಅವನ ಗುರುತಿನ ಸರ್ಟಿಫಿಕೇಟು ಇರಬೇಕು" ಎಂದು ಹೇಳಿದೆ. ಅದರಂತೆ ಅವರ ಒಡೆಯರು ಅನ್ನ-ಬಟ್ಟೆ ವಸತಿಗಳ ಏರ್ಪಾಡು ಮಾಡಿಕೊಡಬೇಕು, ಚನ್ನಾಗಿ ನಡೆಸಿಕೊಳ್ಳ ಬೇಕು, ಬೇನೆ ಬಿದ್ದಾಗ ಪುಕ್ಕಟೆ ಔಷಧೋಪ ಚಾರ ಒದಗಿಸಬೇಕು ಎಂದೂ ಇದೆ.

ಸರಿಯಾಗಿ ನಡೆಸಿಕೊಳ್ಳಲ್ಪಡದ ಗುಲಾಮನು ಕೋರ್ಟಿನಲ್ಲಿ ದೂರಿಕೊಳ್ಳಬಹುದು. ದೂರು ನಿಜವಾಗಿದ್ದರೆ ಒಡೆಯನಿಗೆ ಅವನ ನಡತೆ ಸುಧಾ ರಿಸಿಕೊಳ್ಳಲು ಎರಡು ತಿಂಗಳ ಅವಧಿ ಕೊಡಲ್ಪ ಡುವದು. ಅನಂತರ ಮತ್ತೆ ವಿಚಾರಣೆ ನಡೆದು ಒಡೆಯನ ಚರ್ಯೆ ಸುಧಾರಿಸಿರದಿದ್ದರೆ ಅವನು ಗುಲಾಮನನ್ನು ಮಾರಬೇಕಾಗುತ್ತದೆ.

ಗುಲಾಮರು ತಪ್ಪಿಸಿಕೊಂಡು ಹೋಗಲು




ಯತ್ನಿಸಿದರೆ ಏನಾಗುವುದು? ಪಾಕಿಸ್ತಾನದ ಬಲುಚಿಸ್ತಾನದಿಂದ ಗುಲಾಮ "ಬೇಟೆಗಾರ"ರು ಹಿಡಿದೊಯ್ದು ಅರಬಸ್ತಾನದಲ್ಲಿ ಮಾರಿದ್ದ ಗುಲಾಮರಲ್ಲಿ ೧೨ ಜನ ಧೀರರು ಒಮ್ಮೆ ಒಟ್ಟಾಗಿ ಹೊಂಚು ಹಾಕಿ ಪಾರಾಗುವ ಯೋಜನೆ ಮಾಡಿದರು. ಸಾಕಷ್ಟು ಹಣ ಸಂಗ್ರಹಿಸಿ ಅವರು ಎರಡು ಒಂಟೆಗಳನ್ನು ಕೊಂಡರು. ಪಾರಾಗುವ ಹಂಚಿಕೆ ಯೇನೋ ಸಫಲವಾಯಿತು. ಆದರೆ ಅರ್ಧ ದಾರಿ ಸಾಗಿದ ಬಳಿಕ ಮರುಭೂಮಿಯಲ್ಲಿ ಅವರ ದೈವ ಕೈಬಿಟ್ಟಿತು. ಅವರ ಒಡೆಯರು ಅವರನ್ನು ಬೆಂಬತ್ತಿ ಹಿಡಿದು ೯ ಜನರ ರುಂಡಗಳನ್ನು ಅಲ್ಲೇ ಹಾರಿಸಿದರು. ಉಳಿದ ಮೂವರನ್ನು ರಿಯಾದಕ್ಕೆ ಮರಳಿ ಎಳೆದುಕೊಂಡು ಬಂದು ಬೇರೆ ಗುಲಾಮರಿಗೆ ಪಾಠವೆಂದು ಬಹಿರಂಗವಾಗಿ ಅವರ ಶಿರಶ್ಛೇದ ಮಾಡಿಸಿದರು.

ಸೌದಿ ಅರಸರೇ ಗುಲಾಮರನ್ನು ದೊಡ್ಡ ಸಂಖ್ಯೆಯಲ್ಲಿ ಇಟ್ಟುಕೊಂಡಿರುವದರಿಂದ ಅರೇಬಿಯದಲ್ಲಿ ಗುಲಾಮ ವ್ಯಾಪಾರವನ್ನು ತಡೆಗಟ್ಟು-ವದು ಕಷ್ಟವಾಗಿದೆ. ಸಂಯುಕ್ತ ರಾಷ್ಟ್ರಸಂಘದ ಆರ್ಥಿಕ-ಸಾಮಾಜಿಕ ಮಂಡಲದವರು ಅರಬ-ಸ್ತಾನದಲ್ಲಿರುವ ಗುಲಾಮರ ಬಗ್ಗೆ ಅನೇಕ ವರ್ಷಗಳಿಂದ ವಿವರಗಳನ್ನು ಕೇಳುತ್ತಿದ್ದರೂ ಅದಕ್ಕೆ ಉತ್ತರವೇ ಇಲ್ಲ.

ಸೌದಿ ಅರಸರ ವಶದಲ್ಲಿರುವ ಗುಲಾಮರು ಚೆನ್ನಾಗಿ ಕೆಲಸ ಮಾಡಿದರೆ ತಕ್ಕ ಮಟ್ಟಿಗೆ ಸುಖವಾಗಿರಬಹುದು. ಆದರೆ ಖಾಸಗಿ ಒಡೆಯರಿಟ್ಟುಕೊಂಡ ಗುಲಾಮರ ಅವಸ್ಥೆ ಅತಿ ಕಷ್ಟದಾಯಕವಾಗಿದೆ. ಉಪ್ಪಿನ ಗಣಿಗಳು, ಮುತ್ತುತೆಗೆಯುವದು ಮೊದಲಾದ ಅತಿ ಕಷ್ಟದಾಯಕ ಕಾರ್ಯಗಳಲ್ಲಿ ಅವರನ್ನು ದುಡಿಸಲಾಗುತ್ತಿದೆ. ದುಡಿದುಡಿದು ಸಣ್ಣಾಗಿ ಅವರು ನಿರುಪಯುಕ್ತರಾದ ಮೇಲೆ ಅವರನ್ನು ಅವರ ಒಡೆಯರು "ಸ್ವತಂತ್ರ" ರಾಗಿ ಮಾಡಿಬಿಡುತ್ತಾರೆ. ಆ ಮೇಲೆ ಅವರಿಗೆ ಬೀದಿಯಲ್ಲಿ ಬಿದ್ದು ಬಿಕ್ಕೇ ಬೇಡುವದೊಂದೇ ಬದುಕುವ ಉಪಾಯ.

ಹೆಣ್ಣು ಗುಲಾಮರು ಜೀವನವನ್ನೆಲ್ಲ ಮನೆಗೆಲಸದಲ್ಲಿ ಸವೆಸಬೇಕಾಗುವದು. ಅವರಲ್ಲೇ ಸ್ವಲ್ಪ ಸುಂದರಿಯರಾದವರು ಯಜಮಾನರ ಕಾಮವನ್ನು ತೃಪ್ತಿಪಡಿಸುವವರಾದ್ದರಿಂದ ಅವರು ಸ್ವಲ್ಪ ಸುಖಿಗಳಾಗಿಯೇ ಇರಬಹುದು. ಯಜಮಾನನಿಗೆ ವಿಶೇಷ ಪ್ರೀತಿಪಾತ್ರಳಾಗಿದ್ದ ಸುಂದರಿಗೆ ಅವನಿಂದ ಮಕ್ಕಳು ಹುಟ್ಟಿದರೆ ಆ ಮಕ್ಕಳು ಸ್ವತಂತ್ರರಾಗುವರು. ಯಜಮಾನ ಸತ್ತ ಮೇಲೆ ಅವಳೂ ಸ್ವತಂತ್ರಳೇ.

ಆದರೆ ಇತರ ಸಾಮಾನ್ಯ ಸ್ತ್ರೀಗುಲಾಮರಿಗೆ ಈ ಸುದೈವವಿಲ್ಲ. ಅವರನ್ನು ಗಂಡು ಗುಲಾಮರಿಗೆ-ಜೊತೆ ಮಾಡಿ ದನ ಕರು ಆಡು ಕುರಿಗಳಂತೆ ಸಂತಾನವೃದ್ಧಿಗೆ ಉಪಯೋಗಿಸುತ್ತಾರೆ! ಹೀಗೆ

ಹುಟ್ಟಿದ ಮಕ್ಕಳು ತುದೆ ತಾಯಿಗಳಂತೆ ಗುಲಾಮರೇ ಆಗಿ ಉಳಿದು ಯಜಮಾನನ "ನರಪಶು" ಸಂಪತ್ತನ್ನು ವೃದ್ಧಿಗೊಳಿಸುವರು.

ಮಕ್ಕಾದಂಥ ಪವಿತ್ರ ನಗರದಲ್ಲಿಯೇ ಇಂದು "ದಕ್ಕತ್ ಅಲ್ ಅಬೀದ" (ಗುಲಾಮರ ಚಾವಡಿ) ಇರುವುದನ್ನು ಕಂಡರೆ ಯಾರಿಗೂ ದುಃಖವಾಗದಿರದು. ದನಗಳಂತೆ ಅವರನ್ನು ಕೆಲ ವೇಳೆ ಆರೇಳರ ಗುಂಪಿನಲ್ಲಿ ಸರಪಳಿಗಳಿಂದ ಬಿಗಿದು ಗಿರಾಕಿಗಳಿಗೆ ತೋರಿಸುವದೂ ಉಂಟು.

ಇಥೋಪಿಯದಲ್ಲಿ ಈಗ ಗುಲಾಮಗಿರಿಗೆ ಕಾಯದೆಯ ಪ್ರತಿಬಂಧವಿದ್ದರೂ ಗುಲಾಮಗಿರಿ ಪೂರ್ಣ ಅಳಿದಿದೆ ಎಂದು ಹೇಳಲು ಬರುವಂತಿಲ್ಲ. ಶ್ರೀಮಂತರಾದವರು ಮೊದಲಿನಂತೆಯೇ ಗುಲಾಮರನ್ನಿಟ್ಟುಕೊಂಡಿರುತ್ತಾರೆಂದು ನಂಬಲು ಕಾರಣಗಳಿವೆ.

ಬಲಾತ್ಕಾರದಿಂದ ಹಿಡಿದು ತಂದು ಜನರನ್ನು ಮಾರುವ ಜೊತೆಗೆ ಬೇರೆ ವಿಧದ ಗುಲಾಮಗಿರಿಗಳೂ ಅಸ್ತಿತ್ವದಲ್ಲಿವೆ. ಹುಡುಗಿಯರನ್ನು ನಾನಾ ಆಮಿಷಗಳಿಂದ ಮರುಳು ಮಾಡಿ ವೇಶ್ಯಾವೃತ್ತಿಯವರಿಗೆ ಮಾರುತ್ತಾರೆ. ಏಶಿಯದಲ್ಲಿ ಇಂಥವರ ಸಂಖ್ಯೆ ೩೦,೦೦,೦೦೦ ದಷ್ಟಿದೆ. ಪೇರು ಮತ್ತು ಇಕ್ವಾಡೋರಗಳಲ್ಲಿ ೬೦ ಲಕ್ಷ ಮೂಲನಿವಾಸಿಗಳು ವಂಶಪರಂಪರೆಯಾಗಿ ಗುಲಾಮರಾಗಿರುವಂತೆ ಒಂದು ವ್ಯವಸ್ಥೆಯಿದೆ ಎಂದು ಗೊತ್ತಾಗಿದೆ. ಒಡೆಯರಿಂದ ತೆಗೆದುಕೊಂಡ ಸಾಲಕ್ಕಾಗಿ ಈ ಮೂಲ ನಿವಾಸಿಗಳು ಅವರಲ್ಲಿ ದುಡಿಯಬೇಕಾಗುತ್ತದೆ. ತಲೆತಲಾಂತರಗಳ ವರೆಗೆ ದುಡಿದರೂ ಈ ಸಾಲ ಮುಟ್ಟಿತು ಎಂದಾಗುವದಿಲ್ಲವೆಂಬುದೇ ಈ ಪದ್ಧತಿಯಲ್ಲಿಯ ಚಾಣಾಕ್ಷತನ.

ಜಗತ್ತಿನ ಪ್ರತಿಯೊಂದು ದೇಶದಲ್ಲಿ ಸಾರ್ವಜನಿಕ ವಿವೇಕವು ಜಾಗೃತವಾಗಿ ಗುಲಾಮಗಿರಿಯ ಯಾವ ಸ್ವರೂಪವನ್ನೂ ಸಹಿಸದಂತಾಗುವ ವರೆಗೆ ಒಂದಿಲ್ಲೊಂದು ರೀತಿಯಲ್ಲಿ ಗುಲಾಮರ ವ್ಯಾಪಾರ ನಡೆದೇ ತೀರುತ್ತದೆ ಎಂದು ಗ್ರೀನಿಜ್‌ರು ಅಭಿಪ್ರಾಯಪಟ್ಟಿದ್ದಾರೆ.



## ಅಪ್ರತಿಮರು

**ರಜೆ ಬೇಕಾಗಿದ್ದ ಸೈನಿಕನೊಬ್ಬ ಕಪ್ತಾನನ ಬಳಿಗೆ ಹೋಗಿ ಅಸಾಧ್ಯ ಕಾಯಿಲೆಯಿಂದ ಬಳಲುತ್ತಿರುವ ತನ್ನ ಹೆಂಡತಿ ತನ್ನನ್ನು ಕಾಣಬೇಕೆಂದು ಬಯಸುತ್ತಿದ್ದಾಳೆಂದು ದುಃಖಪೂರ್ಣ ಸ್ವರದಲ್ಲಿ ಹೇಳಿ ರಜೆ ಕೇಳಿದ.**

**"ಆದರೆ ನಿನ್ನ ಹೆಂಡತಿಯಿಂದ ನನಗೆ ಇದೇ ಈಗ ಪತ್ರ ಬಂದಿದೆ. ಮನೆಗೆ ಹೋದರೆ ನೀನು ಕುಡಿದು ಮತ್ತನಾಗಿ ಸಾಮಾನುಗಳನ್ನೆಲ್ಲ ಒಡೆದು ಮುರಿದು ಹಾಕುತ್ತಿ, ಆದ್ದರಿಂದ ನಿನಗೆ ರಜೆ ಕೊಡಬಾರದು ಎಂದು ಬರೆದಿದ್ದಾಳೆ ಅವಳು" ಎಂದ ಕಪ್ತಾನ.**

**ಸೈನಿಕ ಸಲಾಮು ಹೊಡೆದು ಹೊರಡುತ್ತ "ನಾವೀರ್ವರೂ ಸಮಾನರು ಎಂಬ ಭಾವನೆಯಿಂದ ಒಂದು ಮಾತು ಹೇಳಲೇ ಸರ್ ?" ಎಂದು ಕೇಳಿದ.**

**"ಹೇಳಲ್ಲ, ಅದಕ್ಕೇನು ?"**

**"ಅಲ್ಲಾ, ಜಗತ್ತಿನಲ್ಲಿ ಹುಟ್ಟಿ ಬಂದ ಸುಳ್ಳುಗಾರರಲ್ಲಿ ನಾವಿಬ್ಬರೂ ಅಪ್ರತಿಮರು ಎಂದು ವಿಚಾರ ಬಂತು ನನಗೆ. ಯಾಕೆ ಹೇಳಲೇ? ನನಗಿನ್ನೂ ಮದುವೆಯೇ ಆಗಿಲ್ಲ."**

ಅವನು ಶಾಂತಿಗಾಗಿ ಬಹುಮಾನ ಕೊಟ್ಟನು ; ಆದರೆ
ಆದರ ಹಣ ಅತಿಭಯಂಕರ ಮಾರಕಾಸ್ತ್ರದಿಂದ ಬಂದಿತ್ತು—

# ಆಲ್ಫ್ರೆಡ್ ನೋಬೆಲ್ : ಬಹುಮಾನದಾತ

[illegible]ರಲ್ಲಿ ಪ್ಯಾರಿಸ್ಸಿನ ಕೆಲ ಬ್ಯಾಂಕರು ಸ್ವೀಡನ್ನಿನ ಒರ್ವ ಯುವಕನಿಗೆ ಪರಮಾನುಗ್ರಹ ತೋರುವವರಂತೆ ಭೆಟ್ಟಿಯನ್ನು ದಯಪಾಲಿಸಿದರು. ಬಡಕಲ ದೇಹದ, ರೋಗಿಷ್ಠನಾದ ಈ ತರುಣ ಅಳುಕು ಸ್ವಭಾವದವನಾಗಿದ್ದರೂ ಅವನ ಆತ್ಮವಿಶ್ವಾಸ ಬಲವಾಗಿತ್ತು. ತನ್ನಲ್ಲಿ ಒಂದು ಅದ್ಭುತ ವಿಚಾರವಿದೆ ಎಂದು ಈತ ಹೇಳಿದ್ದು ಮಾತ್ರ ಆ ಬ್ಯಾಂಕರರಿಗೆ ಮನವರಿಕೆಯಾಗಲಿಲ್ಲ.

ಈ ತರುಣ ನಾಟಕೀಯವಾಗಿ ಆ ಬ್ಯಾಂಕರರಿಗೆ "[illegible], ನನ್ನ ಬಳಿ ಇಡೀ ಜಗತ್ತನ್ನು [illegible]ಬಲ್ಲ ಎಣ್ಣೆಯೊಂದಿದೆ!" ಎಂದ.

ಬ್ಯಾಂಕರರು "ಹಾ!" ಎಂದು ದಿಗ್ಭ್ರಾಂತ[illegible] ಕುಳಿತರು. ಆದರೆ ಈ ತರುಣ ಮಾತ್ರ [illegible]ರೂ ಗಡಬಿಡಿ ತೋರದೆ ನಿಧಾನವಾಗಿ [illegible] ತನ್ನ ನೂತನ ಸ್ಫೋಟಕ ದ್ರವ್ಯದ [illegible]ವನ್ನು ವಿವರಿಸಿ ಹೇಳಿದನು. ಆದರೆ ಬ್ಯಾಂಕರರಿಗೆ [illegible] ತಾಳ್ಮೆಯುಳಿಯಲಿಲ್ಲ. ನಡುವೆಯೆ ಅವನ [illegible]ನ್ನು ಅವರು ಕಟ್ಟಿದರು. ಹ್ಞುಂ! [illegible] ಮಾತ್ರವು. ಅಲ್ಲದೆ ಜಗತ್ತನ್ನು [illegible] ಬಯಸುವವರಾದರೂ ಯಾರು?

[illegible] ಆಶಯಿಟ್ಟುಕೊಂಡು ಬಂದಿದ್ದ ತರುಣನ [illegible] ಕಥೆ [illegible].

ಆದರೆ ಈ ಸ್ಫೋಟಕದ [illegible] [illegible] [illegible]ನ ಕಿವಿಗೆ ಬಿದ್ದಾಗ ಆತ [illegible] ಬಂಡವಲಗಾರನಿಗೆ ಅದರಲ್ಲಿ ಆಸ್ಥೆ ವಹಿಸಲು ಕೇಳಿಕೊಂಡನು. ಇದರ ಪರಿಣಾಮವಾಗಿ ಆ ತರುಣ—ಆಲ್ಫ್ರೆಡ್ ನೋಬೆಲ್ ಒಂದು ಲಕ್ಷ ಫ್ರಾಂಕುಗಳ ಹುಂಡಿಯನ್ನು ತೆಗೆದುಕೊಂಡು ಸ್ಟಾಕ್‌ಹೋಮಕ್ಕೆ ಹೋಗುವಂತಾಯಿತು. ಇದೇ ನೋಬೆಲ್ ಸಂಪತ್ತಿನ ಅಡಿಗಲ್ಲು.

> **ನೋಬೆಲ್ ಬಹುಮಾನ ಎಲ್ಲ ವಿಜ್ಞಾನಿಗಳ, ಶಾಂತಿ ಕಾರ್ಯಕರ್ತರ, ಸಾಹಿತಿಗಳ ಕನಸು. ಲಕ್ಷಾಂತರ ರೂಪಾಯಿಗಳಷ್ಟು ಹಣ ಸಿಗುತ್ತದೆಂದು ಮಾತ್ರವಲ್ಲ, ವಿಜ್ಞಾನ, ಸಾಹಿತ್ಯ, ರಾಜಕೀಯ ಪ್ರಪಂಚಗಳಲ್ಲಿ ಪ್ರತಿಷ್ಠೆ ಗಳಿಸಿಕೊಡುತ್ತದೆಂದೂ ಅದು ಆಕರ್ಷಕವಾಗಿದೆ.**
>
> **ನೋಬೆಲ್ ಬಹುಮಾನಗಳ ಮತ್ತು ಅದಕ್ಕೆ ಕಾರಣನಾದ ಮನುಷ್ಯನ ಕಥೆ ಅಪೂರ್ವವಾಗಿದೆ. ಜಗತ್ತಿನಲ್ಲಿ ಶಾಂತಿ ಸ್ಥಾಪನೆಗಾಗಿ ದುಡಿದ ಅತಿ ಪ್ರಾಮುಖ್ಯ ವ್ಯಕ್ತಿಗೆ ಬಹುಮಾನವೀಯಲು ದೊಡ್ಡ ಧರ್ಮನಿಧಿಯನ್ನು ನಿರ್ಮಿಸಿದ ವ್ಯಕ್ತಿ ಜಗತ್ತಿನ ಅತ್ಯಂತ ಮಾರಕ ಸ್ಫೋಟಕಗಳಲ್ಲೊಂದನ್ನು ಶೋಧಿಸಿ, ಅದನ್ನು ತಯಾರಿಸಿ, ಮಾರಿ, ಹಣ ಗಳಿಸಿದಾತ.**

ಸ್ಫೋಟಕ ದ್ರವ್ಯಗಳು ಆಲ್ಫ್ರೆಡ್ ನೋಬೆಲ್ಲನಿಗೆ ತೀರ ಪರಿಚಿತ ವಸ್ತುಗಳು. ಅವುಗಳ ಭಯ

ಹಾರ್ಲೆಂಡ್ ಮೆಂಚೆಸ್ಟರರ ಲೇಖದ ಆಧಾರದಿಂದ

ಅವನಿಗಿರಲಿಲ್ಲ. ಅವನ ತಂದೆ ಇಮ್ಯಾನ್ಯುಯೆಲ್ ನೋಬೆಲ್ ಅನೇಕ ವರ್ಷಗಳಿಂದ ಸ್ಫೋಟಕ ದ್ರವ್ಯಗಳೊಡನೆ ಸರಸವಾಡಿದವನಾಗಿದ್ದನು. ಆತ ಕಂಡುಹಿಡಿದಿದ್ದ ನೌಕಾ ಸುರಂಗವೊಂದನ್ನು ಕ್ರಿಮಿಯಾ ಯುದ್ಧದಲ್ಲಿ ರಶಿಯವು ಉಪಯೋಗಿಸಿತ್ತು.

ಇಮ್ಯಾನ್ಯುಯೆಲನಿಗೆ ಹುಟ್ಟಿದ ನಾಲ್ವರು ಗಂಡು ಮಕ್ಕಳಲ್ಲಿ ಆಲ್ಫ್ರೆಡ್ ಮೂರನೆಯವನು. ರೋಗಿಷ್ಠನಾಗಿದ್ದ ಇವನನ್ನು ಬದುಕಿಸಿಕೊಳ್ಳಲು ಇವನ ತಾಯಿ ಸದಾ ರೋಗದೊಂದಿಗೆ ಸೆಣಸಾಡಬೇಕಾಯಿತು.

ತಾರುಣ್ಯದಲ್ಲಿ ಆಲ್ಫ್ರೆಡ್ ಯುರೋಪ ಮತ್ತು ಅಮೇರಿಕೆಗಳಲ್ಲಿ ಸಂಚರಿಸಿದನು. ಪ್ಯಾರಿಸ್ಸಿನಲ್ಲಿ ತಾನು ಮೋಹಿಸಿದ ಹುಡುಗಿ ಸತ್ತದ್ದರಿಂದ ಇವನು ಹತಾಶನಾದನು. ತನ್ನ ಇಪ್ಪತ್ತೊಂದನೆಯ ವಯಸ್ಸಿನಲ್ಲಿ ಈತ ಮರಳಿ ಮನೆಗೆ ಬಂದು ತನ್ನ ತಂದೆಯ ಕಾರಖಾನೆಯಲ್ಲಿ ದುಡಿಯತೊಡಗಿದನು. ತನಗಿನ್ನು ಜೀವನದಲ್ಲಿ ವಿರಾಮ, ಸುಖ, ಸಂತೋಷ ಎಂದರೆ ದುಡಿತವೊಂದೇ ಎಂದು ಅವನು ಮನಸ್ಸು ಗಟ್ಟಿ ಮಾಡಿಕೊಂಡಿದ್ದನು.

ಆಗ ಸಾಮಾನ್ಯವಾಗಿ ಹೃದಯರೋಗಗಳಲ್ಲಿ ಉತ್ತೇಜನಕಾರಿ ಔಷಧವೆಂದು ಉಪಯೋಗಿಸುತ್ತಿದ್ದ ನೈಟ್ರೊಗ್ಲಿಸರಿನ್ ಅದ್ಭುತ ಸ್ಫೋಟಕ ದ್ರವ್ಯವಾಗಬಹುದು ಎಂದು ಆಲ್ಫ್ರೆಡನಿಗೆ ನಂಬಿಗೆಯಾಗಿತ್ತು. ವಿಶಿಷ್ಟವಾದೊಂದು ಪರಿಸ್ಥಿತಿಯಲ್ಲಿ ನೈಟ್ರೊಗ್ಲಿಸರಿನ್ ಸ್ಫೋಟವಾಗುವದು. ಆದರೆ ಆ ಪರಿಸ್ಥಿತಿಯಾವದು ಎಂದು ಯಾರಿಗೂ ಗೊತ್ತಿರಲಿಲ್ಲ. ಕೆಲವು ವೇಳೆ ಈ ದ್ರವ್ಯವಿದ್ದ ಪಾತ್ರ ನೆಲಕ್ಕೆ ಬಿದ್ದು ಅಪ್ಪಳಿಸಿದರೂ ಸ್ಫೋಟವಾಗುತ್ತಿರಲಿಲ್ಲ. ಇನ್ನು ಕೆಲವು ವೇಳೆ ಚಿಕ್ಕ ಹೊಯ್ದಾಟದಿಂದ ಭಯಂಕರ ಸ್ಫೋಟವಾಗುತ್ತಿತ್ತು.

ನೈಟ್ರೊಗ್ಲಿಸರಿನ್ ಮೇಲೆ ಪ್ರಭುತ್ವಪಡೆಯಲು ಆಲ್ಫ್ರೆಡ್ ಮತ್ತು ಅವನ ತಂದೆ ಪ್ರಯತ್ನಿಸ-ತೊಡಗಿದರು.

ಮುಂದೆ ಈ ಪ್ರಯೋಗಗಳಲ್ಲಿ ಧುರೀಣತ್ವ ವಹಿಸಿದ ಆಲ್ಫ್ರೆಡನು ನೈಟ್ರೊಗ್ಲಿಸರಿನನ್ನು ಒಂದು ದಪ್ಪನ್ನ ಪಾತ್ರೆಯಲ್ಲಿ ಹಾಕಿ ಪ್ರಾರಂಭಿಕ ಸ್ಫೋಟವೊಂದರಿಂದ ಚಾಲನೆಯನ್ನೀಯುವದೇ ನೈಟ್ರೊಗ್ಲಿಸರಿನ್ ಸ್ಫೋಟವಾಗುವಂತೆ ಮಾಡುವ ಖಂಡಿತ ಹಾದಿ ಎಂಬ ನಿರ್ಣಯಕ್ಕೆ ಬಂದನು. ಅದಕ್ಕಾಗಿ ಇವನು ತಯಾರಿಸಿದ 'ಬ್ಲಾಸ್ಟಿಂಗ್ ಕ್ಯಾಪ್' (ಸ್ಫೋಟಕ ಬೆಣೆ) ಇಂದಿಗೂ ನೈಟ್ರೊಗ್ಲಿಸರಿನ್ ಮತ್ತು ಸ್ಫೋಟಕ ಮದ್ದಿನ ಉದ್ದಿಮೆಗೆ ತಳಹದಿಯಾಗಿದೆ.

ಮೂರನೆಯ ನೆಪೋಲಿಯನ್ನನ ಸಹಾಯ ದೊರೆಯಲು ಆಲ್ಫ್ರೆಡ್ ಮತ್ತು ಅವನ ತಂದೆ ಆಶೆಯಿಂದ ಕೆಲಸ ಮಾಡತೊಡಗಿದರು. ಆದರೂ ನೈಟ್ರೊಗ್ಲಿಸರಿನ್ ಇವರ ಅಂಕಿತಕ್ಕೆ ಬರಲಿಲ್ಲ. ೧೮೬೪ರಲ್ಲಿ ಸ್ಫೋಟವೊಂದು ಆಲ್ಫ್ರೆಡನ ತಮ್ಮ ಎಮಿಲನನ್ನು ಬಲಿ ತೆಗೆದುಕೊಂಡಿತು. ಈ ಆಘಾತದಿಂದ ಮುದುಕ ಇಮ್ಯಾನ್ಯುಯೆಲ್ ಚೇತರಿಸಿಕೊಳ್ಳಲೇ ಇಲ್ಲ.

ಸ್ಫೋಟಕ ದ್ರವ್ಯಗಳ ಕೆಲಸ ಮಾಡಲು ನೋಬೆಲ್ಲನಿಗೆ ಲೈಸನ್ಸ್ ಇರಲಿಲ್ಲ. ಅಧಿಕಾರಿಗಳ ಉಪಟಳದಿಂದ ಕೆಲಸ ಮಾಡುವದು ಕಠಿಣವಾದ್ದರಿಂದ ಆಲ್ಫ್ರೆಡನು ತನ್ನ ಕಾರಖಾನೆಯನ್ನು ಒಂದು ಸರೋವರದಲ್ಲಿದ್ದ ದೋಣಿಗೆ ಸಾಗಿಸಿದನು. ಈ ಕಾರಖಾನೆಯಲ್ಲಿ ಎಲ್ಲ ಕೆಲಸಗಳನ್ನೂ ಸ್ವತಃ ಮಾಡುತ್ತಿದ್ದ ಆಲ್ಫ್ರೆಡನಿಗೆ ಊಟ ಮಾಡಲು ಕೂಡ ವೇಳೆ ಸಿಗುತ್ತಿರಲಿಲ್ಲ. ಇದರಿಂದ ಮುಂದೆ ಜೀವಮಾನವೆಲ್ಲ ಈತ ಅಪಚನ ರೋಗದಿಂದ ಬಳಲಬೇಕಾಯಿತು. ತನ್ನ ಸ್ಫೋಟಕ ಎಣ್ಣೆ ಸುರಕ್ಷಿತವಾದುದು ಎಂದು ಜಗತ್ತಿಗೆ ತೋರಿಸುತ್ತೇನೆ ಎಂದುಕೊಂಡ ಆಲ್ಫ್ರೆಡ್.

ಮುಂದೆ ಒಂದೇ ಒಂದು ವರ್ಷದಲ್ಲಿ ಸ್ವೀಡನ್ನಿನ ಸರಕಾರವು ಸ್ಟಾಕಹೋಮಿನ ಕೆಳಗಡೆ ರೇಲ್ವೆ ಸುರಂಗ ಮಾರ್ಗವನ್ನು ತೋಡಲು ಆಲ್ಫ್ರೆಡ್‌ನ ಎಣ್ಣೆಯನ್ನು ಉಪಯೋಗಿಸತೊಡಗಿತು. ನಾಲ್ಕು ದೇಶಗಳಲ್ಲಿ ಈ ಎಣ್ಣೆ ತಯಾರಿಸುವ ಕಾರಖಾನೆಗಳನ್ನು ಆಲ್ಫ್ರೆಡ್ ಪ್ರಾರಂಭಿಸಿದ್ದ.

ಆಲ್ಫ್ರೆಡ್ ತೀರ ಆಶಾವಾದಿಯಾಗಿದ್ದ. ನೈಟ್ರೊಗ್ಲಿಸರಿನಿನ ಭಯಂಕರ ಸ್ವರೂಪವಿನ್ನೂ

ಪ್ರಕಟವಾಗುವದರಲ್ಲಿತ್ತು. ನಾರ್ವೆಯಲ್ಲಿಯ ಕಾರಖಾನೆ ೧೮೬೫ ರಲ್ಲಿ ಒಂದು ದಿನ ಸ್ಫೋಟ-ವಾಯಿತು. ಕೆಲ ವಾರಗಳ ನಂತರ ಸಿಲೇಸಿಯಾದಲ್ಲಿ ಹೆಪ್ಪುಗಟ್ಟಿದ್ದ ಎಣ್ಣೆಯನ್ನು ಕೊಡಲಿಯಿಂದ ಒಡೆಯಲೆತ್ನಿಸಿದ ಓರ್ವ ಕೆಲಸಗಾರನ ಕಾಲುಗಳು ಸ್ಫೋಟದಿಂದ ಕತ್ತರಿಸಿ ಅರ್ಧ ಮೈಲು ದೂರ ಹೋಗಿ ಬಿದ್ದವು.

ಮರುವರ್ಷ ಪನಾಮಾ ಬಂದರದಲ್ಲಿ ತಂಗಿದ್ದ ಹಡಗವೊಂದರಲ್ಲಿದ್ದ ನೈಟ್ರೊಗ್ಲಿಸರಿನಿನ ಎಪ್ಪತ್ತು ಪೆಟ್ಟಿಗೆಗಳು ಸ್ಫೋಟವಾದವು. ಸಮೀಪದಲ್ಲಿದ್ದ ಬೇರೊಂದು ಹಡಗಕ್ಕೂ ಬಂದರದ ವಖಾರಕ್ಕೂ ತುಂಬ ಅಪಾಯವಾಯಿತು. ೬೦ ಜನರು ಸತ್ತರು, ೨ ಲಕ್ಷ ಪೌಂಡುಗಳ ಹಾಸಿಯಾಯಿತು. ಇದಾದ ಹದಿನೈದೇ ದಿನಗಳ ನಂತರ ನೈಟ್ರೊಗ್ಲಿಸರಿನ್ ಸ್ಫೋಟದಿಂದ ಸಾನ್ ಫ್ರಾನ್ಸಿಸ್ಕೊದಲ್ಲಿ ಕಟ್ಟಡಗಳ ಸಾಲೇ ಧ್ವಂಸವಾಗಿ ಹದಿನೈದು ಜನ ಸತ್ತರು.

ಸಾನ್ ಫ್ರಾನ್ಸಿಸ್ಕೊದ ಸ್ಫೋಟವಾದ ಬಳಿಕ ಕೆಲವೇ ದಿನಗಳಲ್ಲಿ ತನ್ನ ಸ್ಫೋಟಕ ಎಣ್ಣೆಯ ಪೆಟ್ಟಿಗೆಗಳೊಡನೆ ನ್ಯೂಯಾರ್ಕಕ್ಕೆ ಬಂದ ಆಲ್ಫ್ರೆಡನಿಗೆ ಪ್ಲೇಗ ರೋಗಕ್ಕೆ ಕೊಡುವ ಸ್ವಾಗತವನ್ನು ಅಲ್ಲಿನ ಜನ ಇತ್ತರು. ಆತ ಏರ್ಪಡಿಸಿದ ಸಾರ್ವಜನಿಕ ಪ್ರದರ್ಶನಕ್ಕೆ ಕೇವಲ ೨೦ ಜನ ಮಾತ್ರ ಬಂದರು. ಇವರು ಕೂಡ ಬಹಳ ದೂರದಲ್ಲಿ ನಿಂತುಕೊಂಡಿದ್ದರು. ಆಲ್ಫ್ರೆಡ್ ಎಣ್ಣೆಯನ್ನು ಕಬ್ಬಿಣದ ಚಪ್ಪಟೆ ತುಣುಕಿನ ಮೇಲೆ ಸುರುವಿ ಸುತ್ತಿಗೆಯನ್ನೆತ್ತಿದಾಗ ಈ ಪ್ರೇಕ್ಷಕರು ಹೆದರಿ ಆಶ್ರಯಸ್ಥಾನ ಹುಡುಕಲು ಓಡಿದರು. ಭಯಂಕರ ಸ್ಫೋಟದ ಶಬ್ದ ಕೇಳಿಸಿತಾದರೂ ನೋಬೆಲ್ಲನಿಗೇನೂ ಅಪಾಯವಾಗಲಿಲ್ಲ. ಆತ ಪ್ರೇಕ್ಷಕರನ್ನು ಸಮೀಪಕ್ಕೆ ಬರುವಂತೆ ಮನವೊಲಿಸಿ ಶಾಸ್ತ್ರೀಯ ರೀತಿಯಲ್ಲಿ ತನ್ನ ಎಣ್ಣೆಯ ಗುಣವನ್ನು ವಿವರಿಸಿದನು. ಸುತ್ತಿಗೆಯ ಏಟು ತಗಲಿದ ಎಣ್ಣೆಯಷ್ಟೇ ಸ್ಫೋಟವಾಗುವದು. ಎಲ್ಲ ಎಣ್ಣೆಯನ್ನೂ, ಅದನ್ನು ಒಂದೆಡೆ ಕೂಡದೆ ಸ್ಫೋಟಗೊಳಿಸಲು ಸಾಧ್ಯವಿಲ್ಲವೆಂದು ಹೇಳಿದನು ಬಳಿಕ ಆ ಎಣ್ಣೆಗೆ ಬೆಂಕಿ ಹಚ್ಚಿದನು. ಎಣ್ಣೆ ಉರಿಯಿತಾದರೂ ಸ್ಫೋಟವಾಗಲಿಲ್ಲ.

ಎರಡು ತಾಸುಗಳ ವರೆಗೆ ವಿವಿಧ ಪ್ರದರ್ಶನಗಳನ್ನು ಮಾಡಿ ಕೊನೆಗೆ ಅವನು ನಿಜವಾದ ಸ್ಫೋಟಗಳನ್ನು ಮಾಡಿತೋರಿಸಿದನು ಬಂದಿದ್ದವರಿಗೆ ಆಲ್ಫ್ರೆಡನ ಎಣ್ಣೆಯ ಶಕ್ತಿಯಲ್ಲಿ ನಂಬಿಗೆ ಹುಟ್ಟಿತು.

ಈಗ ಆಲ್ಫ್ರೆಡನ ಕಚೇರಿಗೆ ಆರ್ಡರುಗಳು ಅಪರಿಮಿತವಾಗಿ ಬರತೊಡಗಿದವು. ಆದರೆ ಆಲ್ಫ್ರೆಡನಿಗೆ ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲ. ಅನೇಕ ದೇಶಗಳು ಆ ಎಣ್ಣೆಯ

**ನೋಬೆಲ್ ಪಾರಿತೋಷಕ ಏಶಿಯನ್ನರಿಗೆ ದೊರೆತದ್ದೇ ವಿರಳ. ದೊರೆತವರಲ್ಲಿ ಇಬ್ಬರು ಭಾರತೀಯರಿದ್ದಾರೆ. ೧೯೧೩ ರಲ್ಲಿ ವಿಶ್ವಕವಿ ರವೀಂದ್ರನಾಥ ಠಾಕೂರರಿಗೆ ಅವರ "ಗೀತಾಂಜಲಿ" ಕಾವ್ಯಗ್ರಂಥಕ್ಕಾಗಿ ಸಾಹಿತ್ಯದ ನೋಬೆಲ್ ಪಾರಿತೋಷಕ ಸಿಕ್ಕಿತ್ತು. ಅನಂತರ ಭೌತಶಾಸ್ತ್ರದ ಪಾರಿತೋಷಕ ಸರ್ ಸಿ. ವಿ. ರಾಮನ್ನರಿಗೆ "ರಾಮನ್ ಪರಿಣಾಮ" ದ ಶೋಧಕ್ಕಾಗಿ ಲಭಿಸಿತು.**

**ನೋಬೆಲ್ ಶಾಂತಿ ಪಾರಿತೋಷಕದ ವಿಷಯಕ್ಕೆ ಮಾತ್ರ ದೂರುಗಳು ಕೇಳಿ ಬರುತ್ತವೆ. ನೋಬೆಲ್ ಸಮಿತಿಯಲ್ಲಿರುವ ಪಾಶ್ಚಾತ್ಯ ವಿದ್ವಾಂಸರು ರಾಜಕೀಯ ಒತ್ತಾಯಕ್ಕೊಳಗಾಗಿ ಮಹಾತ್ಮಾ ಗಾಂಧಿಯವರಿಗೆ ಈ ಬಹುಮಾನ ಕೊಡಲಿಲ್ಲೆಂದು ಆರೋಪಿಸಲಾಗಿದೆ. ಭಾರತ ಸ್ವತಂತ್ರವಾದ ನಂತರ ಅವರು ಬಹುಕಾಲ ಬದುಕಿದ್ದರೆ ನೋಬೆಲ್ ಪಾರಿತೋಷಕ ಅವರಿಗೆ ಬರಬಹುದಾಗಿತ್ತೋ ಏನೊ.**

ಉಪಯೋಗವನ್ನು ಪ್ರತಿಬಂಧಿಸಿದವು. ಹಡಗುಗಳು ಅದನ್ನೊಯ್ಯಲು ನಿರಾಕರಿಸಿದವು. ಸುರಕ್ಷಿತವಾದ ನೈಟ್ರೊಗ್ಲಿಸರಿನ್ ಕಂಡುಹಿಡಿಯುವ ಅಗತ್ಯವಿದ್ದಿತು. ಆಲ್ಫ್ರೆಡ್ ಅದನ್ನು ಶೋಧಿಸಿದನು. ಇದು ಅವನಿಗೆ ಸಾಧ್ಯವಾದದ್ದು ಯೋಗಾಯೋಗವೆಂದು ಕೆಲವರನ್ನುತ್ತಾರೆ.

ಉತ್ತರ ಜರ್ಮನಿಯಲ್ಲಿ ಕೀಸೆಲ್‌ಗರ್ (Kieselguhr) ಎಂಬ ಒಂದು ಜಾತಿಯ ಮಣ್ಣು ಇತ್ತು. ಅದಕ್ಕೆ ದ್ರವಗಳನ್ನು ಹೀರಿಕೊಳ್ಳುವ ಗುಣವಿತ್ತು. ನೈಟ್ರೊಗ್ಲಿಸರಿನ್ ಡಬ್ಬಿಗಳನ್ನು ಪ್ಯಾಕ್ ಮಾಡಲು ಉಪಯೋಗಿಸುತ್ತಿದ್ದ ಕಟ್ಟಿಗೆ ಪುಡಿ ತೀರಿದಾಗ ಆಲ್ಫ್ರೆಡನ ಕೆಲಸಗಾರರು ಈ ಮಣ್ಣನ್ನು ಉಪಯೋಗಿಸಿದರು. ಅಕಸ್ಮಾತ್ತಾಗಿ ಒಂದು ಡಬ್ಬಿ ಸೋರಿದಾಗ ಮಣ್ಣು ಎಣ್ಣೆಯನ್ನು ಬ್ಲಾಟಿಂಗ ಪೇಪರಿನಂತೆ ಹೀರಿಕೊಂಡದ್ದನ್ನು ಆಲ್ಫ್ರೆಡ್ ಕಂಡನಂತೆ. ಆಗ ಅವನಿಗೊಂದು ವಿಚಾರ ಹೊಳೆಯಿತು. ಮೂರು ಭಾಗ ಎಣ್ಣೆ ಒಂದು ಭಾಗ ಮಣ್ಣನ್ನು ಕೂಡಿಸಿದನು. ಇದು ಸುರಕ್ಷಿತ ನೈಟ್ರೊಗ್ಲಿಸರಿನ್ ಆಗಿತ್ತು. ಈ ಮಿಶ್ರಣವನ್ನು ಉಂಡೆಕಟ್ಟಿ ಕಾಡತೂಸುಗಳಲ್ಲಿ ತುಂಬಿ ಸುರಕ್ಷಿತವಾಗಿ ಎಲ್ಲಿ ಬೇಕಲ್ಲಿಗೆ ಕಳಿಸಬಹುದಾಗಿತ್ತು. ನೋಬೆಲ್ ಇದನ್ನು ಡೈನಾಮೈಟ ಎಂದು ಕರೆದನು. ಮುಂದೆ ಹತ್ತು ವರ್ಷಗಳಲ್ಲಿ ೧೫ ನೋಬೆಲ್ ಕಾರಖಾನೆಗಳು ಪ್ರತಿ ವರ್ಷ ೬ ಕೋಟಿ ಪೌಂಡಿನಷ್ಟು ಈ ಹೊಸ ಸ್ಫೋಟಕಗಳನ್ನು ತಯಾರಿಸಿದವು.

೪೦ ವರ್ಷ ವಯಸ್ಸಾದಾಗ ಆಲ್ಫ್ರೆಡನಿಗೆ ಜೀವನದಲ್ಲಿ ತನ್ನ ಕೆಲಸವನ್ನು ಬಿಟ್ಟು ಇನ್ನಾವುದರಲ್ಲೂ ಆಸ್ಥೆಯಿರಲಿಲ್ಲ.

ಆದರೆ ಆತ ತುಂಬ ದಣಿದಿದ್ದ. ತನ್ನ ಜೀವನದ ಬಗೆಯನ್ನು ಬದಲಿಸಲೆತ್ನಿಸಿ ಆತ ಪ್ಯಾರಿಸಿನಲ್ಲಿ ಒಂದು ಮನೆಯನ್ನು ಕೊಂಡನು. ಬಾಲ್ಯದಲ್ಲಿ ಆತನಿಗೆ ಶೆಲ್ಲಿಯ ಕವಿತೆಗಳನ್ನು ಓದುವವದೆಂದರೆ ಬಲು ಪ್ರೀತಿಯ ವಿಷಯವಾಗಿತ್ತು. ಈಗ ಮತ್ತೆ ಆತ ಶೆಲ್ಲಿಯ ಕವಿತೆಗಳನ್ನು ಓದತೊಡಗಿದನು. ಲೇಖನವನ್ನು ಕೈಕೊಳ್ಳಬೇಕೆಂಬ ಮನಸ್ಸು ಆತನಿಗಾದಾಗ ಭಾಷೆಯ ತೊಡಕು ಬಂತು. ಆರು ಭಾಷೆಗಳಲ್ಲಿ ಪ್ರವೀಣನಾದ ಅವನಿಗೆ ಯಾವ ಭಾಷೆಯಲ್ಲಿ ಬರೆಯಲಿ ಎಂಬುದೇ ಸಮಸ್ಯೆಯಾಯಿತು. ಸಂಭಾಷಣೆಯ ಕಾಲದಲ್ಲಿ ಕೂಡ ಆತ ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಜಿಗಿಯುತ್ತಿದ್ದ.

ವಿಪರೀತ ಓದುತ್ತಿದ್ದ ಆಲ್ಫ್ರೆಡ್ ತಾಂತ್ರಿಕ ಪುಸ್ತಕಗಳ ಜೊತೆಗೆ ಕವಿತೆ ಮತ್ತು ವೇದಾಂತ ಪುಸ್ತಕಗಳನ್ನೂ ಓದುತ್ತಿದ್ದನು. ಮಾನವನ ಸತತ ಪ್ರಗತಿಯ ಬಗ್ಗೆ ತನ್ನ ವಿಚಾರಗಳನ್ನು ಸಮರ್ಥಿಸುತ್ತಿದ್ದ ಲೇಖಕರೆಂದರೆ ಅವನಿಗೆ ತುಂಬ ಮೆಚ್ಚಿಗೆ.

ಪ್ರತಿನಿತ್ಯವೂ ಆತ ಬರೆಯುತ್ತಿದ್ದ ಸುಮಾರು ೫೦ ಪತ್ರಗಳಲ್ಲಿ ಹೆಚ್ಚಿನವುಗಳಲ್ಲಿ ಕಾದಂಬರಿ, ಕವಿತೆ, ನಾಟಕಗಳ ವಿವರ ಚರ್ಚೆಯಿರುತ್ತಿದ್ದಿತು. ಆತ ಎರಡು ಕಾದಂಬರಿಗಳನ್ನು ಬರೆಯಲು ಪ್ರಾರಂಭಿಸಿದನಾದರೂ ಅವನ್ನು ಕೊನೆಗೂ ಪೂರ್ತಿಗೊಳಿಸಲಿಲ್ಲ. ಕೊನೆಯ ದಿನಗಳಲ್ಲಿ ನಾಟಕವೊಂದನ್ನು ಬರೆಯತೊಡಗಿ ಅದರಲ್ಲಿ ತಲ್ಲೀನನಾಗಿ ಹೋದನು.

ಆದರಾತಿಥ್ಯ ನೀಡುವ ಬಯಕೆಯಿಂದ ಆತ ವಿವಾಹವಾಗಲೆಳಸಿದರೂ ತಾರುಣ್ಯದ ಭಗ್ನ ಪ್ರೇಮಪ್ರಕರಣದ ನಂತರ ಅವನಿಗೆ ತನ್ನ ಮನಕ್ಕೆ ತಕ್ಕ ಹುಡುಗಿ ಕಣ್ಣಿಗೆ ಬಿದ್ದಿರಲಿಲ್ಲ. ತನ್ನನ್ನು ತನ್ನ ಹಣಕ್ಕಾಗಿ ಹೊರತು ಬೇರೆ ಉದ್ದೇಶದಿಂದ ಲಗ್ನವಾಗುವ ಹೆಣ್ಣೇ ಇಲ್ಲವೆಂದು ನಂಬಿದ್ದರಿಂದ ಯಾವಾಗಲೂ ಸ್ತ್ರೀಯರ ವಿಷಯದಲ್ಲಿ ಅವನ ಅಭಿಪ್ರಾಯ ಕಹಿಯೇ ಆಗಿತ್ತು.

ಇವನ ಏಕಾಕಿ ಜೀವನವೇ " ಶಾಂತಿ ಬಹುಮಾನ " ಗಳ ಅಸ್ತಿತ್ವಕ್ಕೆ ಕಾರಣವಾಯಿತು.

ಇವನಲ್ಲಿ ಕಾರ್ಯದರ್ಶಿಯ ಕೆಲಸ ಮಾಡಲು ಒಪ್ಪಿದ್ದ ಓರ್ವ ತರುಣಿ ಬ್ಯಾರನ್ ವಾನ್ ಸಟ್ನರ್ ಎಂಬವನ ಜೊತೆ ಓಡಿ ಹೋಗಿ ಅವನನ್ನು ಲಗ್ನವಾದಳು. ರಶಿಯ-ಟರ್ಕಿ ಯುದ್ಧದಲ್ಲಿ ಈ ದಂಪತಿಗಳು ರೆಡ್‌ಕ್ರಾಸ್ ಸಂಸ್ಥೆಯ ಪರವಾಗಿ ದುಡಿದರು. ಯುದ್ಧದ ಅನಾಹುತವನ್ನು ಪ್ರತ್ಯಕ್ಷ ಕಂಡ ಈ ತರುಣಿ ಯುದ್ಧ ವಿರೋಧಿ ಕಾದಂಬರಿಯೊಂದನ್ನು ಬರೆದಳು. ಶಾಂತಿ ಚಳವಳಿಯ

ಧುರೀಣಳೆಂದು ಕರೆಯಿಸಿಕೊಳ್ಳಲು ಅವಳಿಗೆ ಬಹಳ ಕಾಲ ಹಿಡಿಯಲಿಲ್ಲ. ಶಾಂತಿ ಚಳವಳಿಗೆ ಸಹಾಯ ಮಾಡಲು ಅವಳು ಆಲ್ಫ್ರೆಡ್ ನೋಬೆಲನನ್ನು ಕೇಳಿಕೊಂಡಳು.

ತನ್ನ ಭಯಂಕರ ಸ್ಫೋಟಕಗಳು ಅವಳ ಶಾಂತಿ ಸಭೆಗಳಿಗಿಂತ ಮುಂಚಿತವಾಗಿ ಯುದ್ಧಗಳನ್ನು ಕೊನೆಗೊಳಿಸುವವು, ಶಸ್ತ್ರಾಸ್ತ್ರಗಳು ಭೀಕರವಾದಂತೆ ಭಯದಿಂದ ರಾಷ್ಟ್ರಗಳು ತಮ್ಮ ಸೈನ್ಯಗಳನ್ನು ವಿಸರ್ಜಿಸುವವು ಎಂದು ನೋಬೆಲ್ ಹೇಳಿದ.

ಹಾಗಿದ್ದರೂ ತನ್ನ ೨೦ ಲಕ್ಷ ಪೌಂಡುಗಳ ಆಸ್ತಿಯನ್ನು ಶಾಂತಿ ಕಾರ್ಯಕರ್ತರಿಗೆ ಬಹುಮಾನಗಳನ್ನು ಕೊಡಲು ವಿನಿಯೋಗಿಸಬೇಕೆಂದು ನೋಬೆಲ್ ನಿರ್ಧರಿಸಿದನು. ಮುಂದೆ ವಿಜ್ಞಾನ ಮತ್ತು ಸಾಹಿತ್ಯಗಳಿಗೂ ಈ ಬಹುಮಾನ ಸಿಗುವಂತೆ ಮಾಡಿದನು. ಈ ಬಹುಮಾನಗಳನ್ನು ಯಶಸ್ಸಿನ ಕಿರೀಟಗಳೆಂದಲ್ಲ, ಆದರೆ ಹತಾಶರಾಗುತ್ತಿರುವ ಪ್ರತಿಭಾವಂತರ ಆಶೆ ಚಿಗುರುವದಕ್ಕಾಗಿ ಎಂದು ಆತ ನಿರ್ಮಿಸಿದ್ದನು. ಆದರೆ ಆತನ ಮೃತ್ಯುಪತ್ರದ ಬರವಣಿಗೆಯ ಭಾಷೆ ಸಂದಿಗ್ಧವಾಗಿದ್ದುದರಿಂದ ಬಹುಮಾನ ಪಡೆಯುವವರ ಆರ್ಥಿಕ ಸ್ಥಿತಿಯನ್ನು ಬಹುಮಾನ ವಿತರಣ ಸಮಿತಿಯವರು ಲಕ್ಷಿಸಲು ಬಾರದಂತಾಗಿದೆ. ಆದ್ದರಿಂದ ಕಷ್ಟದಲ್ಲಿರುವ ಬುದ್ಧಿವಂತರಿಗೆ ಮಾತ್ರ ಬಹುಮಾನ ಸಿಗಬೇಕೆಂಬ ತತ್ವ ಉಳಿದಿಲ್ಲ.

ಇಟಲಿಗೆ ತನ್ನ ಸ್ಫೋಟಕವನ್ನು ಆಲ್ಫ್ರೆಡ್ ಮಾರಿದ್ದರಿಂದ ಗಾಬರಿಗೊಂಡ ಫ್ರೆಂಚ ಸರಕಾರವು ಆವನ ಚಟುವಟಿಕೆಗಳನ್ನು ನಿರ್ಬಂಧಿಸಿತು. ನೋಬೆಲ್ ಪ್ಯಾರಿಸನ್ನು ಬಿಟ್ಟು ಇಟಲಿಯ ಸಾನ್‌ರೇಮೊದಲ್ಲಿ ತನ್ನ ಕೊನೆಯ ದಿನಗಳನ್ನು ಏಕಾಂತಜೀವಿಯಾಗಿ ಕಳೆದನು. ಎಣ್ಣೆ ಕಂಪನಿಯಲ್ಲಿ ಅಪಾರ ಸಂಪತ್ತು ಗಳಿಸಿದ್ದ ಈತನ ಅಣ್ಣ ಲಡವಿಗ್ ನೋಬೆಲ್ ಸತ್ತಾಗ ಫ್ರೆಂಚ ಪತ್ರಿಕೆಗಳು ಆಲ್ಫ್ರೆಡನೇ ಸತ್ತನೆಂದು ಬರೆದವು. ಜೀವಂತನಿದ್ದಾಗಲೇ ತನ್ನ ಚರಮಲೇಖಗಳನ್ನು ಓದಿ ಆಲ್ಫ್ರೆಡ್ ಒಂದು ಬಗೆಯ ಸಮಾಧಾನ ಹೊಂದಿದನು. ಮಾತ್ರ ಅವು ಅಷ್ಟು ಪ್ರಶಂಸಾತ್ಮಕವಾಗಿರಲಿಲ್ಲ.

ಸಾನ್‌ರೇಮೊದಲ್ಲಿ ಆಲ್ಫ್ರೆಡ್ ಕೃತಕ ರಬ್ಬರ ಮತ್ತು ರೇಶ್ಮೆಗಳ ಸಂಶೋಧನೆಯ ಕಾರ್ಯದಲ್ಲಿ ಹೆಚ್ಚಿನ ಸಮಯ ಕಳೆದನು. ಅವನ ಹೃದಯ ದುರ್ಬಲವಾಗತೊಡಗಲು ತಜ್ಞರು ಅವನಿಗೆ ನೈಟ್ರೊಗ್ಲಿಸರಿನ್ ಉಪಯೋಗಿಸಲು ಹೇಳಿದರು. ಆಲ್ಫ್ರೆಡ್ ನಕ್ಕ!

೧೮೯೬ ರ ಡಿಸೆಂಬರ ೧೦ ನೆಯ ದಿನಾಂಕ ಆಲ್ಫ್ರೆಡ್ ನೋಬೆಲ್ ತೀರಿಕೊಂಡ.

ಸಾಯುವ ಮೊದಲು ಭಯಂಕರ ಅಸ್ತ್ರಗಳು ರಾಷ್ಟ್ರಗಳನ್ನು ಭಯಪಡಿಸಿ ಶಾಂತಿಗೆ ಕಾರಣವಾಗುವವು ಎಂಬ ತನ್ನ ನಂಬಿಕೆಯನ್ನು ಆಲ್ಫ್ರೆಡ ತ್ಯಜಿಸಿದ್ದ. ರಾಷ್ಟ್ರ ಸಂಘದಂಥ ಸಂಸ್ಥೆಯೇ ಶಾಂತಿಯ ಆಶಾಜ್ಯೋತಿಯೆಂದು ಅವನೀಗ ನಂಬತೊಡಗಿದ್ದ.

ತನ್ನದು ಶಾಶ್ವತ ಶಾಂತಿ ಬಹುಮಾನವಾಗಬೇಕೆಂದೇನೂ ಆಲ್ಫ್ರೆಡ್ ನೋಬೆಲ್ ಬಯಸಿರಲಿಲ್ಲ. ೩೦ ವರ್ಷಗಳ ನಂತರ ಅದನ್ನು ನಿಲ್ಲಿಸಬೇಕೆಂದು ಆತ ಸೂಚಿಸಿದ್ದ. ಅಷ್ಟು ಅವಧಿಯಲ್ಲಿ ಅಂತಾರಾಷ್ಟ್ರೀಯ ಶಾಂತಿ ನೆಲೆಗೊಳ್ಳದಿದ್ದರೆ ಜಗತ್ತು ಮತ್ತೆ ಅನಾಗರಿಕ ಸ್ಥಿತಿಗೆ ಮುಟ್ಟುವದು ಎಂದಾತ ನಂಬಿದ್ದ.



**ಸುಖವೆಂಬ ಸುಗಂಧವನ್ನು ಇತರರ ಮೇಲೆ ಎರಚುವಾಗ ಸ್ವತಃ ನಮ್ಮ ಮೇಲೆ ಕೆಲ ಬಿಂದುಗಳಾದರೂ ಬಿದ್ದೇ ಬೀಳುವವು.** — ಎಮರ್ಸನ್

ಯಾರೂ ಪರಮಾಣುಗಳನ್ನು ಕಂಡಿಲ್ಲ ; ಆದರೆ
ಅದರ ಅದ್ಭುತ ರಹಸ್ಯಗಳನ್ನು ಭೇದಿಸಿದ ವಿಜ್ಞಾನಿಗಳು ಗುರುತಿಸಿದ್ದು—

# ಪರಮಾಣುಗಳ ವಿಚಿತ್ರ ಪ್ರಪಂಚ

ನೀವು ಚಹಾ ಕುಡಿಯುವಾಗ ಚಮಚೆ ಮುಳುಗಿಸಿ ಒಂದು ಚಮಚೆ ಚಹಾ ಮೇಲೆತ್ತಿದರೆ ಅದರಲ್ಲಿ ಕೆಲ ಬಿಂದು ಚಹಾ ಬರುತ್ತದೆ. ಆದರೆ ಆ ಒಂದು ಚಮಚೆ ದ್ರವದಲ್ಲಿ ಎಷ್ಟು ಪರಮಾಣುಗಳಿವೆ ಬಲ್ಲಿರಾ ? ಸುಮಾರು ೫೦,೦೦,೦೦,೦೦,೦೦,೦೦,೦೦,೦೦,೦೦೦. ಇಷ್ಟು ದೊಡ್ಡ ಸಂಖ್ಯೆಯನ್ನು ಕಲ್ಪಿಸಿಕೊಳ್ಳುವುದು ಮಾನವ ಬುದ್ಧಿಗೆ ನಿಲುಕದ ಮಾತು. ಅದರ ಅರ್ಥವನ್ನು ತುಸು ವಿವರಿಸೋಣ.

ಈ ಒಂದೇ ಚಮಚೆ ಚಹಾದಲ್ಲಿರುವ ಪರಮಾಣುಗಳನ್ನು ಒಂದೊಂದಾಗಿ ಎಣಿಸಿ ಕೆಳಗುರುಳಿಸಲು ಪ್ರಯತ್ನಿಸುವಿರಾದರೆ, ಸೆಕಂದಿಗೆ ಮೂರರಂತೆ ಎಣಿಸಿದರೂ ಎಲ್ಲ ಪರಮಾಣುಗಳನ್ನೆಣಿಸಲು ನಿಮ್ಮ ಆಯುಷ್ಯ ಸಾಲದು. ಈ ಕೆಲಸ ಮುಗಿಸಲು ಸುಮಾರು ೫೦ ಸಾವಿರ ಕೋಟಿ ವರ್ಷಗಳು ಬೇಕಾಗಬಹುದು. ಅಂದರೆ ವಿಶ್ವಸೃಷ್ಟಿಯಾಗಿ ಈವೊತ್ತಿನ ವರೆಗಿನ ಕಾಲದಷ್ಟಾಯಿತು.

ನಾವು ದಿನವೂ ಪರಮಾಣುಗಳನ್ನೇ ತಿನ್ನುತ್ತೇವೆ, ಅವನ್ನೇ ಒಡೆಯುತ್ತೇವೆ, ಅವುಗಳಿಂದಲೇ ನಮ್ಮ ಶರೀರಗಳಾಗಿವೆ. ವಾಸ್ತವಿಕವಾಗಿ "ಸೃಷ್ಟಿಯ ಕಟ್ಟಡದ ಸೂಕ್ಷ್ಮ ಇಟ್ಟಿಗೆ" ಅದು. ಸಾಮಾನ್ಯ ಮನುಷ್ಯನ ಶರೀರದಲ್ಲಿ $೧೦^{೨೮}$ (ಅಂದರೆ ೧ ರ ಮುಂದೆ ೨೮ ಶೂನ್ಯಗಳನ್ನು ಹಾಕಿದಷ್ಟು) ಪರಮಾಣುಗಳಿವೆ. ನಾವು ವಾಸಿಸುವ ಪೃಥ್ವಿಯಲ್ಲಿ ಒಟ್ಟು $೧೦^{೫೧}$ (೧ರ ಮುಂದೆ ೫೧ ಶೂನ್ಯಗಳು) ಪರಮಾಣುಗಳು ಇವೆ. ನಾವೀಗ ಪರಮಾಣು ಯುಗದಲ್ಲೇ ಇದ್ದೇವೆ. ಆದರೆ ಯಾರೂ ಪರಮಾಣುವನ್ನು ಕಣ್ಣಿಂದ ಕಂಡವರಿಲ್ಲ.

ಪರಮಾಣುವಿನ ಕಲ್ಪನೆ ಹೊಸದಲ್ಲ. ಪುರಾತನ ಗ್ರೀಕರೂ ಭಾರತೀಯರೂ ಅಂಥದೊಂದು ಸೂಕ್ಷ್ಮ ಕಣವನ್ನು ತರ್ಕಿಸಿದ್ದರು. ಆದರೆ ಅವರ ಕಲ್ಪನೆಯಂತೆ ಅದಿಲ್ಲ. ಅವರು ಕಲ್ಪಿಸಿದ ಪರಮಾಣು ಗಟ್ಟಿ ಕಣ. ಆಧುನಿಕ ವಿಜ್ಞಾನವು ಹೇಳುವ ಪರಮಾಣುವಿನಲ್ಲಿ ಟೊಳ್ಳೇ ಹೆಚ್ಚು.

ಒಂದೊಂದು ಪರಮಾಣುವೂ ಒಂದೊಂದು "ಸೂರ್ಯಸಂಸಾರ"ವಿದ್ದಂತೆ. ಸೂರ್ಯಸಂಸಾರದಲ್ಲಿ ನಡುವೆ ಸೂರ್ಯ, ಅದರ ಸುತ್ತ ದೂರ ದೂರದಲ್ಲಿ ಬುಧ, ಶುಕ್ರ, ಭೂಮಿ, ಮಂಗಳಾದಿ ಗ್ರಹಗಳು ತಿರುಗುವಂತೆ ಮತ್ತು ಅವುಗಳ ನಡುವೆ ಖಾಲಿ ಸ್ಥಳವೇ ಹೆಚ್ಚಾಗಿರುವಂತೆ ಪರಮಾಣುವಿನಲ್ಲಿ ಕೂಡ.

ಪರಮಾಣುವಿನ ಮಧ್ಯದಲ್ಲಿ ಸೂರ್ಯನಂತೆ "ಬೀಜ" (nucleus) ಒಂದಿದೆ. ಆದರ ಸುತ್ತಲೂ ವಿದ್ಯುತ್ಕಣಗಳು (electron) ಅಥವಾ ಇಲೆಕ್ಟ್ರಾನುಗಳು ಗ್ರಹಗಳಂತೆ ಗರಗರ

'ಭಾರತ ಜ್ಯೋತಿ'ಯಿಂದ

ಸುತ್ತುತ್ತವೆ–ಅಥವಾ ಲಯಬದ್ಧವಾಗಿ ಕುಣಿದಾಡುತ್ತವೆನ್ನಬಹುದು.

ಈ ಬೀಜ ಮತ್ತು ವಿದ್ಯುತ್ಕಣಗಳು ಯಾವ ಬಲದಿಂದ ಒಂದಾಗಿ ಹಿಡಿಯಲ್ಪಡುತ್ತವೆ? ಸೂರ್ಯ ಮತ್ತು ಗ್ರಹಗಳು ಗುರುತ್ವಾಕರ್ಷಣದಿಂದ ಪರಸ್ಪರ ಸೆಳೆಯಲ್ಪಟ್ಟು ತಮ್ಮ ನಿರ್ದಿಷ್ಟ ಪಥದಲ್ಲಿ ತಿರುಗುತ್ತವೆಂದು ನಾವು ಬಲ್ಲೆವು. ಆದರೆ ಪರಮಾಣುವಿನ ನಡುವಿನ ಬೀಜದ ಸುತ್ತ ಅಗಾಧವಾದವು. ಪರಮಾಣು ಬೀಜವನ್ನು ಸ್ಥಿರವಾಗಿಟ್ಟಿರುವ ಶಕ್ತಿಯು ಭೂಮಿಯ ಗುರುತ್ವಾಕರ್ಷಣ ಶಕ್ತಿಗಿಂತ ೧,೦೦,೦೦,೦೦,೦೦,೦೦, ೦೦,೦೦,೦೦,೦೦,೦೦,೦೦,೦೦,೦೦,೦೦,೦೦,೦೦, ೦೦,೦೦೦ ($೧೦^{೩೭}$) ಪಟ್ಟು ಹೆಚ್ಚಾಗಿದೆ.

ಸೂರ್ಯನ ಸಂಸಾರದಲ್ಲಿ ಸೂರ್ಯನ ಗಾತ್ರ ದೊಡ್ಡದು, ಗ್ರಹಗಳು ಚಿಕ್ಕವು. ಆದರೆ ಪರಮಾಣು ಬೀಜವು ಅದರ 'ಗ್ರಹ'ಗಳಾಗಿರುವ





**ಪರಮಾಣುವಿನ ರಚನೆ: ನಡುವಿನದು ಬೀಜ. ಇದರಲ್ಲಿ ಪ್ರೊಟಾನ್ ಮತ್ತು ನ್ಯೂಟ್ರಾನುಗಳು ಸೇರಿರುತ್ತವೆ. ಹೊರಗೆ ದೂರದಲ್ಲಿ ಇಲೆಕ್ಟ್ರಾನುಗಳು ಬೇರೆ ಬೇರೆ ಪಾತಳಿಗಳಲ್ಲಿ ಸುತ್ತು ತಿರುಗುತ್ತವೆ.**

ತಿರುಗುವ ವಿದ್ಯುತ್ಕಣಗಳನ್ನು ತಪ್ಪಿಸಿಕೊಂಡು ಚಲ್ಲಾಪಿಲ್ಲಿಯಾಗದಂತೆ ಹಿಡಿದಿಡುವುದು ಗುರುತ್ವಾಕರ್ಷಣವಲ್ಲ. ಈ ಸೂಕ್ಷ್ಮ ಪರಮಾಣು ಪ್ರಪಂಚವನ್ನು ಸಮತೋಲದಲ್ಲಿಟ್ಟಿರುವುದು ವಿದ್ಯುತ್ ಶಕ್ತಿಯ ಸೆಳೆತ.

ಪರಮಾಣುವಿನ ಸೂಕ್ಷ್ಮಾತಿಸೂಕ್ಷ್ಮ ಬೀಜದಲ್ಲಿರುವ ದ್ರವ್ಯ (mass) ವನ್ನು ಭದ್ರವಾಗಿ ಹಿಡಿದಿಟ್ಟಿರುವ ವೈದ್ಯುತ ಶಕ್ತಿಗಳೂ ವೇಗಗಳೂ ಇಲೆಕ್ಟ್ರಾನುಗಳಿಗಿಂತ ಅಷ್ಟೇನೂ ದೊಡ್ಡದಲ್ಲ. ಬೀಜದ ತೂಕ ಮಾತ್ರ ಇಲೆಕ್ಟ್ರಾನುಗಳಿಗಿಂತ ಹೆಚ್ಚು.

ಅಲ್ಲದೆ, ಎಲ್ಲ ಗ್ರಹಗಳು ಸೂರ್ಯನ ಸುತ್ತ ಹೆಚ್ಚು ಕಡಿಮೆ ಒಂದೇ ಪಾತಳಿ (plane)ಯಲ್ಲಿ ಸುತ್ತುತ್ತವೆ. ಇಲೆಕ್ಟ್ರಾನುಗಳು ಬೀಜದ ಸುತ್ತ ಬೇರೆ ಬೇರೆ ಪಾತಳಿಗಳಲ್ಲಿ ಸುತ್ತುತ್ತವೆ. ಇದರಿಂದ ಪರಮಾಣುವಿನ ರಚನೆ ಗೋಲ

ದಂತಾಗಿದೆ. ಸೂರ್ಯ ಸಂಸಾರದ್ದು ತಾಟನಂತಿದೆ.

ಗ್ರಹಗಳಿಗೆ ಸೂರ್ಯನ ಸುತ್ತ ಒಂದು ಸುತ್ತು ಹಾಕಲು ಕೆಲ ತಿಂಗಳುಗಳಿಂದ ಹಲ ವರ್ಷಗಳ ವರೆಗೆ ಬೇಕಾಗುತ್ತದೆ. ಆದರೆ ಪರಮಾಣುವಿನ ಒಂದೊಂದು ಇಲೆಕ್ಟ್ರಾನು ಬೀಜಕ್ಕೆ ಸೆಕೆಂದಿಗೆ ೬೦ ಲಕ್ಷ ಸಲ ಪ್ರದಕ್ಷಿಣೆ ಹಾಕುತ್ತದೆ. ಇಲೆಕ್ಟ್ರಾನುಗಳು ಬೀಜದ ಸುತ್ತ ತಿರುಗುವ ಬದಲು ನೇರವಾಗಿ ಓಡುತ್ತಿದ್ದರೆ ಕೆಲವೇ ಸೆಕೆಂದುಗಳಲ್ಲಿ ಕನ್ಯಾಕುಮಾರಿಯಿಂದ ಹಿಮಾಲಯವನ್ನು ಮುಟ್ಟಬಲ್ಲವು. ಅಷ್ಟು ವೇಗ ಅವುಗಳದು.

ಸೂರ್ಯನ ಸಂಸಾರದಲ್ಲಿ ಖಾಲಿ ಜಾಗವೇ ಬಹಳವೆಂದು ನಾವು ನೋಡುತ್ತೇವೆ. ಸೂರ್ಯನಿಗೂ ಭೂಮಿಗೂ ನಡುವಣ ೯.೩ಕೋಟಿ ಮೈಲುಗಳಲ್ಲಿ ಬುಧ, ಶುಕ್ರ ಗ್ರಹಗಳನ್ನು ಬಿಟ್ಟರೆ ಉಳಿದ ಸ್ಥಳವೆಲ್ಲ ಬಯಲೋ ಬಯಲು. ಆದರೆ ಪರಮಾಣು ಇದಕ್ಕಿಂತಲೂ ಟೊಳ್ಳು ಪದಾರ್ಥ, ಪರಮಾಣು ಬೀಜವು ನೆಲ್ಲಿಕಾಯಿಯಷ್ಟು ದೊಡ್ಡದಾಗುವ ವರೆಗೆ ಪರಮಾಣುವನ್ನು ಉಬ್ಬಿಸಿದರೆ ಇಲೆಕ್ಟ್ರಾನು ಬೀಜದಿಂದ ಅರ್ಧ ಮೈಲು ದೂರದಲ್ಲಿ ಹಾರುವ ಗುಂಗಾಡಿನಂತೆ ಕಂಡೀತು. ಅಲ್ಲದೆ ಇಲೆಕ್ಟ್ರಾನು ಅಗಾಧ ವೇಗದಿಂದ ಹಾರುವುದರಿಂದ ಅದು ಬರಿ ನೆರಳಿನಂತೆ ಕಂಡೀತು. ಹೀಗಿದೆ ಪರಮಾಣುವಿನೊಳಗಿನ ಟೊಳ್ಳುಗಟ್ಟಿ ಸಂಸಾರ. ಅದು ಪದಾರ್ಥವೆನ್ನುವುದಕ್ಕಿಂತಲೂ ಒಂದು ನೆರಳು, ಒಂದು 'ಭೂತ'ವೆನ್ನಬೇಕು. ಆದರೂ ಈ ಅದೃಶ್ಯ ಭೂತವೇ ನಮ್ಮ ದೃಶ್ಯ ವಿಶ್ವದ ಕಟ್ಟಡದ ಮೂಲ ಸಾಮಗ್ರಿ.

ಪರಮಾಣುವಿನ ಒಳಗಿನ ಖಾಲಿ—ಬಟ್ಟಬಯಲನ್ನು ಮೇಲೆ ವರ್ಣಿಸಿದ್ದಾಯಿತು. ಹೊರಗಿನ ಕಥೆ ಕೇಳುತ್ತೀರಾ? ನಿಮಗೆ ಒಳ್ಳೇ ಗಟ್ಟಿ ಪದಾರ್ಥವೆಂದು ತೋರುವ ಕಬ್ಬಿಣದಂಥ ಘನ ಪದಾರ್ಥದೊಳಗಿನ ಪರಮಾಣುಗಳು ಕೂಡ ಒಂದಕ್ಕೊಂದು ತಗಲಿಕೊಂಡಿಲ್ಲೆಂದು ಹೇಳಿದರೆ ನಿಮಗೆ ಆಶ್ಚರ್ಯವಾದೀತು. ಮೇಲೆ ಹೇಳಿದಂತೆ ಬೀಜವು ನೆಲ್ಲಿಕಾಯಿಯಷ್ಟಾಗುವಂತೆ ಪರಮಾಣುಗಳನ್ನು ಹಿಗ್ಗಿಸಿದರೆ ಬೀಜಕ್ಕೂ ಇಲೆಕ್ಟ್ರಾನಿಗೂ ದೂರ ಅರ್ಧ ಮೈಲಿನಷ್ಟಾದರೆ ಒಂದು ಪರಮಾಣುವಿಗೂ ಅದರ ಬಳಿಯ ಇನ್ನೊಂದು ಪರಮಾಣುವಿಗೂ ಇರುವ ದೂರ ಮುಂಬೈಗೂ ಕಲಕತ್ತೆಗೂ ನಡುವಣ ದೂರದಷ್ಟಾಗಬಹುದು.

ಪರಮಾಣು ಪರಮಾಣುಗಳ ನಡುವೆ ಹೀಗೆ ಧಾರಾಳ ಖಾಲಿ ಸ್ಥಳವಿರುವಾಗ, ಉಷ್ಣತೆಯ ತರಂಗಗಳು ಕಬ್ಬಿಣದ ತಗಡನ್ನು ದಾಟಿ, ಪ್ರಕಾಶದ ತರಂಗಗಳು ಕನ್ನಡಿ ಬಾಗಿಲುಗಳನ್ನು ದಾಟಿ, ವಿದ್ಯುತ್ ಶಕ್ತಿಯು ತಾಮ್ರದ ತಂತಿಗಳಲ್ಲಿ ಸಾಗಿ ಬರುವುದಾಗಲೀ ರೇಡಿಯೋ ತರಂಗಗಳು ನೀವು ಬಲು ಗಟ್ಟಿಯೆಂದು ಬಗೆಯುವ ಗೋಡೆಗಳಲ್ಲಿ ಅನಾಯಾಸ ತೂರಿ ಬರುವುದಾಗಲಿ ಏನಾಶ್ಚರ್ಯ?

ಪರಮಾಣು ಪ್ರಪಂಚದಲ್ಲಿ ಇಷ್ಟೆಲ್ಲ ಪೊಳ್ಳಿದ್ದರೂ ಅವುಗಳನ್ನು ಹಿಡಿದು ಒಂದಕ್ಕೊಂದು ಒತ್ತುವಂತೆ ಮಾಡುವುದು ಸುಲಭವಲ್ಲ. ಪರಮಾಣುಗಳನ್ನೊತ್ತಿದರೆ ಸ್ಪ್ರಿಂಗಿನಂತೆ ಪುನರಪಿ ಮೂಲಾಕೃತಿಗೆ ಮರಳುವ ಸ್ವಭಾವ ಅವುಗಳಿಗಿದೆ.

ವಿಜ್ಞಾನಿಗಳಿಗೆ ಈಗ ಗೊತ್ತಿರುವ ಮಟ್ಟಿಗೆ ಸಾಮಾನ್ಯ ಪದಾರ್ಥಗಳ ಪರಮಾಣುಗಳು ಮೂರು ಬಗೆಯ ಮೂಲ ಕಣಗಳಿಂದ ರಚಿಸಲ್ಪಟ್ಟಿವೆ. ಹಗುರಾದ ಇಲೆಕ್ಟ್ರಾನುಗಳು, ಭಾರವಾದ ಪ್ರೋಟಾನ್ ಹಾಗು ನ್ಯೂಟ್ರಾನುಗಳು. ಆದರೆ ಅಪರೂಪವಾಗಿ ಪಾಸಿಟ್ರಾನ್, ಮೆಸಾನ್ ಮೊದಲಾದ ಕಣಗಳೂ ಕಾಣಿಸಿಕೊಳ್ಳುವುದುಂಟು.

ಪರಮಾಣುಗಳ ನಡುವೆ ಖಾಲಿ ಜಾಗ ಬಹಳಿದೆಯೆಂದಾಕ್ಷಣ ಅವು ಒಂದಕ್ಕೊಂದು ತಾಕಲಾಡುವುದಿಲ್ಲೆಂದಿಲ್ಲ. ಹೀಗೆ ತಾಕಲಾಡುವಾಗ ಅವು ರಬ್ಬರು ಚಂಡುಗಳಂತೆ ಒಂದು ಬದಿಗೆ ತುಸು ಜಬ್ಬೆಯಾಗಿ ತಾಕಲಾಟ ತಪ್ಪಿದೊಡನೆ ತಿರುಗಿ ಪೂರ್ವಾಕಾರಕ್ಕೆ ಬರುತ್ತವೆ. ಉಷ್ಣತೆ ಅತಿಯಾಗಿದ್ದಾಗ ಈ ತಾಕಲಾಟ ವಿಪರೀತವಾಗಿ ಪರಮಾಣುಗಳು ಬೇರೊಂದು ಅವಸ್ಥೆಯನ್ನು ತಾಳಬಹುದು. ಆದರೆ ಈ ಉತ್ತೇಜಿತಾವಸ್ಥೆ ಕೇವಲ ಕ್ಷಣಿಕ. ತನ್ನಲ್ಲಿದ್ದ ಹೆಚ್ಚಿನ ಶಕ್ತಿಯನ್ನು ಒಂದು ಕ್ಷಣ ಹೊರಚೆಲ್ಲಿ ಪರಮಾಣವು ಮೂಲ

ಅವಸ್ಥೆಗೇ ಮರಳುವುದು.

ಪರಮಾಣುಗಳಲ್ಲಿ ಬಗೆಬಗೆಯುವಿವೆ. ಜಲ ಜನಕ ವಾಯುವಿನ ಪರಮಾಣುಗಳ ರೂಪವೇ ಬೇರೆ, ತಳತಳಿಸುವ ಬೆಳ್ಳಿಯ ಪರಮಾಣುಗಳ ರೂಪವೇ ಬೇರೆ. ಜಲಜನಕ ಪರಮಾಣು ಎಲ್ಲಕ್ಕಿಂತ ಹಗುರು ಮತ್ತು ಸರಳವಾದದ್ದು. ಪ್ರತಿ ಜಲಜನಕ ಪರಮಾಣುವಿನಲ್ಲಿ ಒಂದೇ ಪ್ರೋಟಾನ್ ಒಂದೇ ಇಲೆಕ್ಟ್ರಾನ್ ಇದೆ. ಆದರೆ ಬೆಳ್ಳಿಯ ಪರಮಾಣುವಿನಲ್ಲಿ ಪ್ರೋಟಾನ್, ಇಲೆಕ್ಟ್ರಾನ್, ನ್ಯೂಟ್ರಾನುಗಳು ಸಂಖ್ಯೆ ಹೆಚ್ಚು ಇದೆ. ಆದ್ದರಿಂದಲೇ ಬೆಳ್ಳಿಯ ಪರಮಾಣುಗಳು ಭಾರವಾಗಿವೆ ಮತ್ತು ಬೆಳ್ಳಿಯೂ ಭಾರವಾಗಿದೆ.

ಪರಮಾಣುಗಳ ಜಾತಿಗಳು ಅಸಂಖ್ಯವೇನೂ ಅಲ್ಲ. ಒಟ್ಟು ಸುಮಾರು ಒಂದು ನೂರು ಜಾತಿಗಳು ಮಾತ್ರ ಇಡೀ ಪ್ರಪಂಚದಲ್ಲಿವೆ. ಇವೇ ಸಮಸ್ತ ಚರಾಚರ ವಸ್ತುಗಳಿಗೆ ಕಾರಣವಾದ ಮೂಲಧಾತುಗಳು. ಇವುಗಳ ಬೇರೆ ಬೇರೆ ಬಗೆಯ ಸಂಯೋಗ--ಮಿಶ್ರಣವೇ ವಿಶ್ವ.

ಒಂದು ಜಾತಿಯ ಪರಮಾಣುವನ್ನು ಇನ್ನೊಂದು ಜಾತಿಯದಾಗಿ ಪರಿವರ್ತಿಸಲು ಸಾಧ್ಯವೇ ? ಕಠಿನ ಸಾಧ್ಯವಾದರೂ ಇಂದು ಇದು ಸಾಧ್ಯವೇ ಸೈ. ಕೀಳ್ತರದ ಲೋಹಗಳನ್ನು ಬಂಗಾರವಾಗಿ ಮಾಡುವ "ರಸವಿದ್ಯೆ" ಯನ್ನು ಕರಗತ ಮಾಡಿಕೊಳ್ಳಲು ಮನುಷ್ಯ ಸಾವಿರಾರು ವರ್ಷಗಳಿಂದ ಹಂಬಲಿಸಿದ್ದಾನೆ. ಅದೀಗ ತತ್ವತಃ ಶಕ್ಯವಾಗಿದೆ.

ನಿಸರ್ಗದಲ್ಲಿ ಈ ಬಗೆಯ ಪರಿವರ್ತನೆ ತಾನಾಗಿ ಆಗುವ ಉದಾಹರಣೆಯೆಂದರೆ ಯುರೇನಿಯಂ ಧಾತು ಸೀಸವಾಗಿ ಪರಿಣಮಿಸುವುದು. ಯುರೇನಿಯಂ ಧಾತು ತನ್ನಲ್ಲಿರುವ ಶಕ್ತಿಯನ್ನು ಕಳೆದುಕೊಂಡು ಲಕ್ಷಾಂತರ ವರ್ಷಗಳಲ್ಲಿ ಸೀಸವಾಗಿ ಹೋಗುವುದು.

ವಿಜ್ಞಾನಿಗಳು ಕೃತಕವಾಗಿ ಧಾತು ಪರಿವರ್ತನೆ ಮಾಡಲು ಅಗಾಧ ಶಕ್ತಿಯ ಸೈಕ್ಲೋಟ್ರಾನ್ ಯಂತ್ರಗಳನ್ನು ಉಪಯೋಗಿಸುತ್ತಾರೆ. ಇವುಗಳಲ್ಲಿ ಒಂದು ಧಾತುವಿನ ಪರಮಾಣುಗಳ ಮೇಲೆ ಪ್ರಚಂಡ ವೇಗದಿಂದ ಇಲೆಕ್ಟ್ರಾನುಗಳನ್ನು ಗುಂಡುಗಳಂತೆ ಹಾರಿಸಲಾಗುತ್ತದೆ. ಅವು ಪರಮಾಣುಗಳ ಬೀಜಗಳನ್ನು ಭೇದಿಸಿ ಅವುಗಳ ರಚನೆಯನ್ನೇ ಆಗ ಬದಲಿಸುತ್ತವೆ. ಒಂದು ಜಾತಿಯ ಪರಮಾಣು ಇನ್ನೊಂದು ಜಾತಿಯದಾಗಿ ಪರಿವರ್ತಿತವಾಗುತ್ತದೆ.

ಪರಮಾಣುವಿನೊಳಗೆ ಹುದುಗಿದ ಶಕ್ತಿ ಅಗಾಧವಾಗಿದೆ. ಕಡಿಮೆ ಶಕ್ತಿಯನ್ನು ಬೀರುವ ಧಾತುವಿನ ಪರಮಾಣುಗಳನ್ನು ಹೆಚ್ಚು ಶಕ್ತಿ ಬೀರುವ ಧಾತುವಿನ ಪರಮಾಣುಗಳಾಗಿ ಪರಿವ-



ಬೆಳ್ಳಿಯ ಹಳುಕಿನಲ್ಲಿರುವ ಪರಮಾಣುಗಳ ರಚನೆ ಹೀಗಿದೆ. (ನಿಜವಾದ ಗಾತ್ರಕ್ಕಿಂತ ೧೦ ಕೋಟಿ ಪಟ್ಟು ಬೆಳಸಿದ್ದು)

ರ್ತಿಸಿದರೆ ಈ ಹೆಚ್ಚಿನ ಶಕ್ತಿಯನ್ನು ಮನುಷ್ಯ ತನ್ನ ಉಪಯೋಗಕ್ಕೆ ತೆಗೆದುಕೊಳ್ಳಬಲ್ಲನು. ಒಂದೇ ಒಂದು ಪೌಂಡ್ ಯುರೇನಿಯಂ ಧಾತುವಿನಿಂದ ಪಡೆಯಬಲ್ಲ ಅಣುಶಕ್ತಿಯು ಮೂವತ್ತು ಲಕ್ಷ ಟನ್ ಕಲ್ಲಿದ್ದಲು ಸುಟ್ಟದ್ದರಿಂದ ಸಿಗಬಹುದಾದ ಶಕ್ತಿಯಷ್ಟಾಗುವುದು.

ವಾಸ್ತವಿಕವಾಗಿ ಪ್ರಪಂಚದ ದ್ರವ್ಯಗಳೆಲ್ಲವೂ ಶಕ್ತಿಯ ಘನರೂಪಗಳು ; ಅಥವಾ ಶಕ್ತಿಯೆಂಬುದು ದ್ರವ್ಯದ ತೇಜೋರೂಪ. ಐನ್‌ಸ್ಟೈನರು ತಮ್ಮ ಪ್ರಸಿದ್ಧ ಸಾಪೇಕ್ಷತಾ ಸಿದ್ಧಾಂತದಲ್ಲಿ ಶಕ್ತಿಗೂ ದ್ರವ್ಯಕ್ಕೂ ಇರುವ ಸಂಬಂಧವನ್ನು

ಗಣಿತ ಸೂತ್ರದಲ್ಲಿ ಕೊಟ್ಟಿದ್ದಾರೆ. ಅದರ ಪ್ರಕಾರ ಒಂದು ಗ್ರಾಮ್ ತೂಕದ ದ್ರವ್ಯವನ್ನು ಸಂಪೂರ್ಣವಾಗಿ ಶಕ್ತಿರೂಪಕ್ಕೆ ತಿರುಗಿಸಲು ಸಾಧ್ಯವಿದ್ದರೆ ಅದು ೨೫೦ ಲಕ್ಷ ಕಿಲೋವಾಟ್ ತಾಸುಗಳಷ್ಟು ಶಕ್ತಿಯನ್ನು ನೀಡಬಲ್ಲದು. ಅರ್ಥಾತ್ ನಿಮ್ಮ ಕಿರಿಬೆರಳಲ್ಲಿ ಸೆಗವಬಹುದಾದಷ್ಟು ದ್ರವ್ಯದಿಂದ ನೀವು ಭಾಕಡಾ-ನಂಗಲ್ ಜಲವಿದ್ಯುತ್ ಕೇಂದ್ರದಲ್ಲಿ ಇಡೀ ದಿನ ಹುಟ್ಟುವಷ್ಟು ಶಕ್ತಿಯನ್ನು ಉತ್ಪಾದಿಸಬಲ್ಲಿರಿ.

ಸೂಕ್ಷ್ಮ ದರ್ಶಕಕ್ಕೂ ಕಾಣದಂಥ ಈ ಕ್ಷುದ್ರ ಪರಮಾಣು ಇಂದಿನ ಜಗತ್ತಿನ ಭವಿಷ್ಯವನ್ನು ತೆರೆಯಲು ಅಥವಾ ಮುರಿಯಲು ಸಮರ್ಥವಾಗಲು ಪರಮಾಣು ಗರ್ಭದ ರಹಸ್ಯ ಸ್ಫೋಟವಾದುದು ಕಾರಣ. ಪರಮಾಣು ಗರ್ಭದ ಶಕ್ತಿಯನ್ನು "ಸರಪಳಿ ಕ್ರಿಯೆ"ಯಿಂದ ಹೊರಹೊಮ್ಮಿಸಿದಾಗ ಅದು ಪರಮಾಣು ಬಾಂಬೆನಿಸುವುದು. ಈ ಬಾಂಬುಗಳಿಂದ ಆತ್ಮಘಾತ ಮಾಡಿಕೊಳ್ಳಬೇಕೋ ಅಥವಾ ಅಣುಶಕ್ತಿಯ ಶಾಂತಿಯುತ ಉಪಯೋಗದಿಂದ ಉದ್ಧಾರ ಹೊಂದಬೇಕೋ ಎಂಬುದು ಮನುಷ್ಯನ ಕೈಯೊಳಗಿನ ಮಾತು.



ಮಾನವ ಸ್ವಭಾವದ ಒಂದು ವೈಚಿತ್ರ್ಯ—



# ಇರುವೆ ಮತ್ತು ಇಣಚಿ

"ಶ್ರೀಶ"

ಇಸೋಪನು ಹೇಳಿದ ನೀತಿ ಕಥೆಗಳಲ್ಲಿ ಇರುವೆ ಮತ್ತು ಇಣಚಿಯ ಕಥೆಯೂ ಒಂದಾಗಿದೆ. ಈ ಕಥೆಯ ನೀತಿಯೇನೆಂದರೆ, ಸಮೃದ್ಧಿಯಿದ್ದಾಗ ಸಂಗ್ರಹಿಸಿ ಇಡಬೇಕು ಮತ್ತು ಮನುಷ್ಯ ಆಲಸಿಗನಾಗದೇ ಸತತೋದ್ಯೋಗದಲ್ಲಿ ಇರಬೇಕು. ಆಲಸಿಗನಾದರೆ ಅದರ ಕಹಿಫಲವನ್ನು ಅನುಭೋಗಿಸಬೇಕು ಎಂಬುದಾಗಿದೆ.

ಈ ಕಥೆಯನ್ನು ನನ್ನಂತೆ ನೀವೂ ಸಣ್ಣವರಿದ್ದಾಗ ಕಲಿತಿರಬಹುದು. ಆದರೂ ಸ್ವಲ್ಪದರಲ್ಲಿ ಹೇಳುತ್ತೇನೆ: ಇರುವೆಗಳು ಬೇಸಗೆಯಲ್ಲಿ ತುಂಬಾ ಓಡಾಡಿ ಆಹಾರವನ್ನು ಸಂಗ್ರಹಿಸಿದವು. ಇಣಚಿಯು ಟೊಂಗೆಗಳ ಮೇಲೆ ಕುಳಿತು ಬಿಸಿಲ ಕಿರಣಗಳಿಗೆ ತನ್ನ ಬಣ್ಣಬಣ್ಣದ ಮೈಯನ್ನೊಡ್ಡಿ ಚಿವ್, ಚಿವ್ ಎಂದು ಕೇಕೆ ಹಾಕುತ್ತ ಕಾಲ ಕಳೆಯಿತು. ಯಾವಾಗ ಬೇಸಗೆ ಮುಗಿದು, ಮಳೆಗಾಲ ಪ್ರಾರಂಭವಾಯಿತೋ, ಆಗ ಇರುವೆಗಳ ಬಳಿ ತುಂಬಿದ ಕಣಜವಿದ್ದರೆ, ಇಣಚಿಯ ಹೊಟ್ಟೆ ಸಹಿತ ಬರಿದಾಗಿದ್ದಿತು. ಆಗ ಇಣಚಿಯು ಸ್ವಲ್ಪ

ಸೋಮರಸೆಟ್ ಮಾಮನ ಕಥೆಯ ರೂಪಾಂತರ

ಆಹಾರಕ್ಕಾಗಿ ಇರುವೆಗಳನ್ನು ಬಾಯಿ ಬಿಟ್ಟು ಕೇಳಿದರೆ ಇರುವೆಗಳು,

"ಇಡೀ ಬೇಸಗೆಯಲ್ಲೆಲ್ಲ ಏನು ಮಾಡಿದೆ?" ಎಂದು ಕೇಳಿದವು.

"ಇಲ್ಲೇ ಟೊಂಗೆಯ ಮೇಲೆ ಹಾಡುತ್ತ ಕುಳಿತಿದ್ದೆ."

"ಸರಿ ಮತ್ತೆ. ಈಗ ಹೋಗಿ ಜಿಗಿದಾಡು. ನೃತ್ಯಮಾಡು" ಎಂದು ಇರುವೆಗಳು ಉತ್ತರ ಕೊಟ್ಟವು.

ಈ ಕಥೆಯಿಂದ ಹೊರಡುವ ನೀತಿ ಬೋಧೆಯು ಆಗಿನ ನನ್ನ ಚಿಕ್ಕ ವಯಸ್ಸಿನಲ್ಲಿ ತಾಕಲೇ ಇಲ್ಲ. ಬದಲಾಗಿ ಕೂಳಿಲ್ಲದೆ, ಕೂಳು ದೊರೆಯದೆ, ಅದಕ್ಕಾಗಿ ಅವಮಾನವನ್ನೂ ಹೊಂದಿ ಮಳೆಗಾಲ-ಚಳಿಗಾಲಗಳನ್ನು ಕಳೆದ ಇಣಚಿಯ ಬಗ್ಗೆ ಒಂದಿನಿತು ಸಹಾನುಭೂತಿಯೇ ಮೂಡಿದ್ದಿತು. ಆ ಗಳಿಗೆಗೆ ನಾನು ಹಾದಿಯ ಬದಿಯಲ್ಲಿ ಹೊರಟಿದ್ದ ಇರುವೆಗಳ ಸಾಲನ್ನು ಕಾಲಿನಿಂದ ತುಳಿದಿದ್ದರೂ ತುಳಿದಿರಬೇಕು.

ಹೋದ ವರುಷ ನಮ್ಮ ಡಾ. ಕುಲಕರ್ಣಿಯವರ ದವಾಖಾನೆಗೆ ಹೋದಾಗ ಈ ಕಥೆ ನನಗೆ ಥಟ್ಟನೆ ನೆನಪಾಯಿತು. ಆಗ ದವಾಖಾನೆ ಮುಚ್ಚುವ ವೇಳೆಯಾಗಿದ್ದಿತು. ಕಂಪೌಂಡರನನ್ನು ಬಿಟ್ಟರೆ ಇನ್ನಾರೂ ಇರಲಿಲ್ಲ. ಡಾಕ್ಟರರ ಮುಖ ಅತ್ಯಂತ ಚಿಂತಾಕುಲವಾಗಿದ್ದಿತು. ಕಣ್ಣ ನೋಟ ಸಂತಾಪವನ್ನು ವ್ಯಕ್ತಪಡಿಸುತ್ತಿದ್ದಿತು. ಅವರ ಈ ಸ್ಥಿತಿಯನ್ನು ನೋಡಿ ನನಗೆ ಕೆಡುಕೆನಿಸಿತು. ಅವರ ಇಂಥ ಚಿಂತೆಗೆ, ಅವರ ಸುಪ್ರಸಿದ್ಧ ತಮ್ಮನೇ ಕಾರಣನಾಗಿರಬೇಕು ಎಂಬುದನ್ನು ತಿಳಿಯಲು ತಡ ಹಿಡಿಯಲಿಲ್ಲ.

"ಏನು ನಡೆದಿದೆ?" ಎಂಬುದಾಗಿ ಸಹಾನುಭೂತಿಯ ದನಿಯಲ್ಲಿ ಮಾತಿನ ಪೀಠಿಕೆಯನ್ನು ಹಾಕಿದೆ.

"ಹೀಗೇ ನಡೆದಿದೆ, ಆಯ್ತು," ಎಂದು ಅವರು ದನಿಯೆಳೆದರು.

"ಏನನ್ನುತ್ತಾನೆ ವಿಠ್ಠಲರಾಯಾ" ಎಂದು ನಾನಾಗಿ ಅವರ ತಮ್ಮನ ಪ್ರಸ್ತಾಪವನ್ನು ತೆಗೆದೆ.

"ಭಂಡ ಶಿರೋಮಣಿ! ಅವನ ಹೆಸರನ್ನು ಸಹಿತ ಎತ್ತುವುದು ಬೇಡ" ಎಂದು ತಮ್ಮ ಸಿಟ್ಟನ್ನು ವ್ಯಕ್ತಪಡಿಸಿದರು.

"ಅವನ ಸಂಬಂಧವನ್ನು ನೀವು ಸಂಪೂರ್ಣ ಕಡಿದುಕೊಳ್ಳಬಾರದೇಕೆ? ಒಳ್ಳೆಯತನಕ್ಕೆ ಬಿದ್ದು, ನೀವೂ ಅವನ ಭಂಡತನಕ್ಕೆ ಪ್ರೋತ್ಸಾಹವನ್ನು ಕೊಟ್ಟಿದ್ದೀರಿ" ಎಂದೆ.

ಹತ್ತು-ಹನ್ನೆರಡು ವರ್ಷಗಳಿಂದ ವಿಠ್ಠಲರಾಯ ಈ ರೀತಿಯಾಗಿ, ಪಿತೃಸಮಾನನಾದ ತನ್ನ ಹಿರಿಯಣ್ಣನನ್ನು ಗೋಳುಹುಯಿದುಕೊಂಡಿದ್ದ. ಇವರು ದವಾಖಾನೆಯನ್ನು ತೆರೆದು, ತಮ್ಮ ವೃತ್ತಿಯ ಏರಿಕೆಯ ಮೆಟ್ಟಲುಗಳನ್ನು ಏರುತ್ತಿರುವಾಗ, ಅವನೂ ಒಂದು ನೌಕರಿಯಲ್ಲಿದ್ದ. ಮದುವೆಯೂ ಆಗಿತ್ತು. ಒಬ್ಬ ಸದ್ಗೃಹಸ್ಥನಂತೆ ಬಾಳುವೆಯನ್ನು ನಡೆಸುತ್ತಿದ್ದಾಗ, ಅವನ ಹೆಂಡತಿ ತೀರಿಕೊಂಡಳು. ಮುಂದೆ ತಲೆಯಲ್ಲಿ ಏನು ಹೊಕ್ಕಿತೋ ಏನೊ ಇದ್ದ ನೌಕರಿಗೆ ರಾಜೀನಾಮೆಯನ್ನು ಕೊಟ್ಟನು. ಯಾರು ಎಷ್ಟು ಹೇಳಿದರೂ ಕೇಳಲಿಲ್ಲ. ಪಗಾರದಲ್ಲಿ ಉಳಿದ ಹಣವನ್ನು ಬ್ಯಾಂಕಿನಲ್ಲಿ ಇಟ್ಟಿದ್ದ. ಅದು ತೀರಿದ ಮೇಲೆ ತಾನಾಗಿ ಹಾದಿಗೆ ಬರುವನೆಂದು ಡಾಕ್ಟರರೂ ಬಂಧು--ಬಳಗದವರೂ ತಿಳಿದುಕೊಂಡಿದ್ದರು. ಆದರೆ ಹಾಗೇನಾಗಲಿಲ್ಲ. ಮುಂದೆಯೂ ಅವನ ಅಡ್ಡಾಡುಡಿ ಜೀವನ, ಊರೂರು ತಿರುಗಾಟ ಇವು ನಡೆದೇ ಇದ್ದುವು. ಬ್ಯಾಂಕಿನಲ್ಲಿ ಹಣ ತೀರಿದ್ದರೂ, ಗೆಳೆಯರಲ್ಲಿ ಹಣವಿತ್ತಲ್ಲ! ಅವನಿಗೆ ಕೈಗಡ-ಸಾಲಗಳನ್ನು ನಿರಾಕರಿಸುವುದು ಅವನ ಗೆಳೆಯರಿಗೂ ಗುರುತಿನವರಿಗೂ ಕಷ್ಟದ ಮಾತಾಗಿದ್ದಿತು—ಅವನ ಮಾತು. ನಡತೆಗಳು ಅಷ್ಟು ಮೋಹಕವಾಗಿದ್ದವು.

ಮನೆಯಲ್ಲಿ ಆತ ನೇಮದಿಂದ ಇರುತ್ತಿರಲಿಲ್ಲ, ಆಗೊಮ್ಮೆ ಈಗೊಮ್ಮೆ ಬರುತ್ತಿದ್ದ. ಬಂದಾಗೊಮ್ಮೆ 'ಇನ್ನು ಮುಂದೆ ಸುಧಾರಿಸುತ್ತೇನೆ' ಎಂಬ ವಚನ ಕೊಟ್ಟು ಹಣ ಪಡೆಯುತ್ತಿದ್ದ. ಹಲವಾರು ಬಾರಿ ಆ ವಚನ ಡಾಕ್ಟರರ ಕಿವಿಯಲ್ಲೇ ಉಳಿಯಿತು, ಇವನ ಕೃತಿಯಲ್ಲಿ ಒಡಮೂಡಲಿಲ್ಲ. ಆಗ ಡಾಕ್ಟರರು ಚೆನ್ನಾಗಿ ಬೈದರು. ಅವನ ಸುದೀರ್ಘ

ನಿವೇದನೆಯ ಸಾರಾಂಶ- 'ಹಳೆಯ ರಾಡಿಯನ್ನು ತೊಳೆದುಕೊಳ್ಳದೆ ನಾನು ಮನುಷ್ಯನಾಗಲೆಂತು?' ಎಂಬುದಾಗಿತ್ತು. ಡಾಕ್ಟರರು ಅವನ ಸಾಲಗಳ ವಿವರಗಳನ್ನು ಕೇಳಿದರು. ಬುದ್ಧಿ ಹೇಳುತ್ತ ಅಷ್ಟು ಹಣವನ್ನು ಕೊಟ್ಟರು. ಬೇಗ ಮನೆಗೆ ಮರಳಿ ಬಾ ಎಂದು ಕಳುಹಿ ಕೊಟ್ಟರು. ವಿಠ್ಠಲರಾಯ ಬೇಗ ಬರಲಿಲ್ಲ. ಆ ಹಣ ತೀರುವ ತನಕವೂ ಪತ್ತೆ ನಿರಾತಂಕವಾಗಿ ಕಾಲ ಕಳೆದ.

ಆ ಮುಂದೆ, ಅಣ್ಣನ ಹೆಸರಿನ ದುರುಪಯೋಗ ಮಾಡಿಕೊಂಡೂ ಹಣ ಸಂಪಾದಿಸುವುದಕ್ಕೆ ವಿಠ್ಠಲರಾಯ ಹಿಂದುಮುಂದೆ ನೋಡಲಿಲ್ಲ. ಪಾಪ, ಡಾಕ್ಟರರು ತಮ್ಮ ಸ್ವಂತದ, ಮನೆತನದ ಗೌರವಪಾಲನೆಗೆ ಕಟ್ಟುಬಿದ್ದು ಅದಕ್ಕೂ ಹಣವನ್ನು ತೆರಬೇಕಾಯಿತು.

ಒಂದು ಸಲವಂತೂ ವಿಠ್ಠಲರಾಯನ ಮೇಲೆ ಕೋರ್ಟಿನಲ್ಲಿ ದಾವೆಯೇ ನಡೆದು, ಪ್ರಸಂಗ ಮೈಮೇಲೆ ಬಂದಿತ್ತು. ವ್ಯಾಪಾರೀ ಗೆಳೆಯನೊಬ್ಬ ದಾವೆ ಹೂಡಿದ್ದ. ಆದರೆ ಅಷ್ಟು ದೊಡ್ಡ ರಕಮನ್ನು ವಿಠ್ಠಲರಾಯ ಕೊಡಬೇಕೆಲ್ಲಿಂದ? ಇನ್ನು ಅವನು ಜೇಲಿನ ಕಡೆಗೇ ಮುಖ ಮಾಡುವ ಹೊತ್ತು ಬಂದಾಗ ಡಾಕ್ಟರರಿಗೆ ತಡೆಯಲಾಗಲಿಲ್ಲ. ಉಭಯ ಪಕ್ಷದವರನ್ನು ಮನೆಗೆ ಕರೆಸಿಕೊಂಡು, ಇಬ್ಬರನ್ನೂ ಬೈದು, ೫೦೦ ರೂ. ಗಳಿಗೆ ಬಗೆಹರಿಸಿಕೊಳ್ಳಬೇಕು ಎಂದು ಹೇಳಿ ಚೆಕ್ಕನ್ನು ಒಗೆದರು. ಆದರೆ ಆ ಚೆಕ್ಕನ್ನು ಮುರಿಸಿ, ಹಣ ಕೈಗೆ ಬಂದಾಗ ವಿಠ್ಠಲರಾಯನೂ ಆ ಗೆಳೆಯನೂ ಇಬ್ಬರೂ ಸೇರಿ ಆ ಹಣದಲ್ಲಿ ಕಾಶ್ಮೀರ ಯಾತ್ರೆಯನ್ನು ಕೈಕೊಂಡದ್ದು ತಿಳಿದುಬಂದ ಮೇಲೆ, ಡಾಕ್ಟರರ ಮನಃಸ್ಥಿತಿ ಹೇಗಾಗಿರಬೇಕೆಂಬುದನ್ನು ನೀವೇ ಊಹಿಸಬೇಕು.

ಹೀಗೆಯೇ ವಿಠ್ಠಲರಾಯನು, ೮-೧೦ ವರ್ಷಗಳನ್ನು ಕಳೆದಿರಬೇಕು. ಊರಲ್ಲಿ ಎಲ್ಲರೂ ಅವನ ಗುರುತಿನವರೇ. ಅವನೊಬ್ಬ ಭಂಡ, ನಾಚಿಕೆಗೇಡಿ, ನಿಷ್ಪ್ರಯೋಜಕ ಎಂದು ಎಲ್ಲರೂ ಅವನಿಗೆ ಅನ್ನುವವರೇ. ಆದರೂ ಅವನು ಭೆಟ್ಟಿಯಾಗಿ ನಿಮ್ಮ ಸುಖ ದುಃಖ ಕೇಳಿ, ನಿಮ್ಮ ಮನಸ್ಸನ್ನು ಹಾಸ್ಯದ ಮಾತಿನಿಂದ ಪ್ರಸನ್ನಗೊಳಿಸಿ, ನಿಮ್ಮ ಕೆಲಸದ ವಿಚಾರದಲ್ಲಿ ಆಸಕ್ತಿ ತೋರಿಸಿ, ಕೊನೆಗೆ ಒಂದೋ, ಐದೋ, ಐವತ್ತೋ- ನಿಮ್ಮ ಯೋಗ್ಯತೆಯನ್ನು ನೋಡಿಕೊಂಡು ರೂಪಾಯಿಗಳನ್ನು ಕೇಳಿದರೆ ಇಲ್ಲವೆನ್ನುವುದು ಕಠಿಣ ಹೋಗುತ್ತಿತ್ತು.

ಡಾಕ್ಟರರು ಮಾತ್ರ ಪ್ರಾಮಾಣಿಕ ರೀತಿಯಿಂದ ದುಡಿದು ಯಾರ ಹಂಗೂ ಇಲ್ಲದೆ, ಯಾರ ನಿಷ್ಠುರವನ್ನೂ ಕಟ್ಟಿಕೊಳ್ಳದೆ ನಿಷ್ಕಲಂಕ ಜೀವನವನ್ನು ಸಾಗಿಸಿದ್ದರು. ಮನೆಯಲ್ಲಿ ಸಹಿತ ಔಷಧೋಪಚಾರಕ್ಕಾಗಿ ಬಂದವರನ್ನು ಆದರಿಸಿ, ವರುಷಕ್ಕೆ ೮-೧೦ ದಿನಗಳ ವಿಶ್ರಾಂತಿಯನ್ನು ಸಹಿತ ಪಡೆಯದೆ, ಹತ್ತು ಸಾವಿರದಷ್ಟು ದುಡ್ಡನ್ನು ಗಳಿಸಿ ಇಟ್ಟಿದ್ದರು. ಸ್ಥಿರ ಆಸ್ತಿಯನ್ನೂ ಮಾಡಿಕೊಂಡಿದ್ದರು. ಹೆಂಡತಿ ಮಕ್ಕಳನ್ನು ನೆಮ್ಮದಿಯಲ್ಲಿ ಇಟ್ಟಿದ್ದರು. ಮುಪ್ಪು ಅಲ್ಲದಿದ್ದರೂ ಇಳಿಮುಖ ವಯಸ್ಸಿಗೆ ಬಂದು ಮುಟ್ಟಿದ್ದರು. ಆದರೂ 'ದುಡಿದು ಗಳಿಸಿದ್ದೇನೆ' ಎಂಬ ಆತ್ಮತೃಪ್ತಿ ಅವರಿಗಿತ್ತು. ವಿಠ್ಠಲರಾಯ ಅವರನ್ನು ಇಷ್ಟು ಶೋಷಿಸಿ ತಾಪ ಕೊಟ್ಟಿದ್ದರೂ 'ಮುಗಿಯಿತಲ್ಲ. ನಾಲ್ಕು ಜನಕ್ಕೆ ಅವನು ಎಂತಹನೆಂಬುದು ಗೊತ್ತಾಗಿದೆ. ಅವನಿಗೂ ೩೭-೩೮ ವರ್ಷ ವಯಸ್ಸು ಈಗ. ಇನ್ನೆಷ್ಟು ದಿನ ಅವನ ಈ ಹಾರಾಟ ನಡೆದೀತು. ಕೆಲವೇ ವರ್ಷಗಳಲ್ಲಿ ತಾ ಮಾಡಿದ ಕರ್ಮದ, ಉದ್ಯೋಗಹೀನತೆಯ ಬಗ್ಗೆ ಪಶ್ಚಾತ್ತಾಪ ಪಡಲೇಬೇಕು' ಎಂಬ ಮಾತನ್ನು ಇದಕ್ಕೂ ಹಿಂದೆ ಆಡಿ ತೋರಿಸಿದ್ದರು.

ಆದರೆ ಆ ದಿನ ಅವರು ಭೆಟ್ಟಿಯಾದಾಗ ಅತೀವ ತ್ರಸ್ತರಾಗಿ ಕಂಡದ್ದರಿಂದ, ಇನ್ನೇನು ವಿಶೇಷವಾಯಿತೋ ಎಂದು ಯೋಚಿಸುತ್ತಿದ್ದೆ. ಅವರ ತಮ್ಮನ ಬಗ್ಗೆ ನಾನಾಗಿ ಕೇಳಿದಾಗ—

"ಈಗ ವಿಠ್ಠಲನ ಸ್ಥಿತಿ ಏನಾಗಿದೆಯೆಂಬುದನ್ನು ಕೇಳಿಲ್ಲವೆಂದು ತೋರುತ್ತದೆ" ಎಂದರು.

ಏನೆಂದರೇನು ? ಈ ಸಲ ಜೇಲಿಗೇ ಹೋಗಿರಬೇಕು ಎಂದು ಧ್ಯಾನಿಸಿಕೊಂಡು, ಅವರ ಮುಂದಿನ ಮಾತಿಗೆ ಸಿದ್ಧನಾದೆ.

"ನನ್ನ ೧೫-೨೦ ವರ್ಷದ ಧಂದೆಯಲ್ಲಿ ನಿರಂತರವಾಗಿ ದುಡಿದು, ಯಾರಿಗೂ ಕೆಡಕು ಮಾಡದೇ, ಮರ್ಯಾದೆಯ ಜೀವನವನ್ನು ನಡೆಸಿದೆ. ಇನ್ನು ನನ್ನ ಗಳಿಕೆಯ ಹಣದ ಮೇಲೆ ಮುಪ್ಪಿನ ಕಾಲದ ಜೀವನವನ್ನು ಹಕ್ಕಿನಿಂದ ಸುಖವಾಗಿ ಕಳೆಯಬೇಕು ಎಂದು ನನಗನಿಸಿದರೆ ತಪ್ಪೇನು?"

"ಹೌದು. ಖಂಡಿತವಾಗಿ."

"ಅದೇ ಆ ನೀಚನು ನಿರುದ್ಯೋಗಿಯಾಗಿ, ಮಾನಗೇಡಿಯಾಗಿ ಸುಖಲೋಲುಪನಾಗಿ ಕಳೆದದ್ದಕ್ಕಾಗಿ ತನ್ನ ಮುಪ್ಪಿನ ಕಾಲದಲ್ಲಿ ನಿರ್ಗತಿಕನಾಗಬೇಕಾಗುವುದರಲ್ಲಿ ಜಗತ್ತಿನ ನ್ಯಾಯವಿದೆಯೆಂದೂ ನೀವು ಒಪ್ಪುತ್ತೀರಿ."

"ಸಂಶಯವೇನಿದೆ?"

"ಊಂ. ಬೆಳಗಾವಿಯ ಪ್ರಸಿದ್ಧ ಸರಾಫೀ ವ್ಯಾಪಾರಸ್ಥರಾದ ನವಲಗುಂದಕರರ ಹೆಸರು ಕೇಳಿಯೇ ಇದ್ದೀರಿ. ಅವರಿಗೆ ಒಬ್ಬಳೇ ಮಗಳಿದ್ದಾಳೆ."

"ಆ ಹುಡುಗಿ? ಕಾಲು ಎಳೆದು ಹಾಕುತ್ತಿತ್ತೆಂದು ಮದುವೆಯಾಗಿದ್ದಿಲ್ಲ."

"ಈಗ ಆಗಿದೆ. ನಮ್ಮ ವಿಠ್ಠಲನ ಕೂಡ! ಮಾವನಿಗೆ ಅರ್ಧಾಂಗವಾಯು. ಹೀಗಾಗಿ ಈತ ಮನೆಯ ಅಳಿಯನಾಗಿ ಒಂದು ಲಕ್ಷ ರೂಪಾಯಿ ಆಸ್ತಿಯ ವಹಿವಾಟನ್ನೂ ಅಂಗಡಿಯನ್ನೂ ನೋಡಿಕೊಳ್ಳುವವನಾಗಿ, ಜೀವನ ನಡಸಿದ್ದಾನೆ."

ನನಗೆ ಏನು ಹೇಳಬೇಕೆಂದೇ ತೋಚಲಿಲ್ಲ.

"ಶುದ್ಧ ಅನ್ಯಾಯವೇ ಇದು! ಶುದ್ಧ ಅನ್ಯಾಯ! ಜಗತ್ತಿನಲ್ಲಿ ನ್ಯಾಯವೆಂಬುದೇ ಇಲ್ಲ" ಎಂದು ತಮ್ಮ ಸಿಟ್ಟಿನಲ್ಲಿ, ಡಾಕ್ಟರರು ಮೇಜನ್ನು ಗುದ್ದಿದರು.

ನನಗೋ, ಹುಚ್ಚು ನಗೆಯ ಆವೇಶವೊಂದು ಚಿಮ್ಮಿ ಬಂದಿತು. ಜೋರಾಗಿ ನಗತೊಡಗಿದೆ. ಡಾಕ್ಟರರ ಸಿಟ್ಟಿನ ಮುಖ ಕಾಣಿಸಿತು. ಅದನ್ನು ಕಂಡೂ ನನ್ನ ನಗೆ ನಿಲ್ಲಲಿಲ್ಲ. ಇನ್ನು ತರವಲ್ಲೆಂದು ಅಲ್ಲಿಂದ ಎದ್ದು, ರಸ್ತೆಗೆ ಬಂದು ನಿಂತೆ.

ಇದಾದ ಮೇಲೆ, ಬೆಳಗಾಂವಿಗೆ ಮೊನ್ನೆ ಹೋಗಿದ್ದೆ. ವಿಠ್ಠಲರಾಯನನ್ನು ಭೆಟ್ಟಿಯಾಗಿದ್ದೆ. ಅವನ ಮುಂದಿದ್ದ ಐಶ್ವರ್ಯದ ಜೀವನ ನನ್ನನ್ನು ವಿಸ್ಮಿತಗೊಳಿಸಿತು. ಮನೆಗೆ ಊಟಕ್ಕೂ ಕರೆದಿದ್ದ. ಸಂಜೆ ಅವನ ಅಂಗಡಿಗೆ ಬಂದಾಗ, ಸಿಗರೇಟ್ ಪ್ಯಾಕ್ ಇದೆಯೇ? ಎಂದ. ನನ್ನ ಕಡೆ ಇರಲಿಲ್ಲ. ಒಂದು ಪ್ಯಾಕನ್ನು ತರಿಸಿದಾಗ, 'ಚಿಲ್ಲರೆ ಇದ್ದರೆ ಕೊಡಿರಿ' ಎಂದ. 'ನಿನ್ನ ಅಂಗಡಿಗೆ ಬಂದು, ನಾನು ಯಾಕೆ ಕೊಡಬೇಕು?' ಎಂದು ಗದರಿಸಿದೆ.

"ಇರಲಿ ಕೊಡಿರಿ. ಕೈಯೆತ್ತಿ ನಾನಾಗಿ ಖರ್ಚು ಮಾಡುವ ಪ್ರವೃತ್ತಿ ಇನ್ನೂ ಬಂದಿಲ್ಲ. ಹಳೆಯ ಚಟ. ಒಮ್ಮೆಲೇ ಹೇಗೆ ಹೋಗಬೇಕು" ಎಂದು ಉತ್ತರಿಸಿದ.



## ಮಾರ್ಗದರ್ಶನ

**"ಅಮ್ಮಾ, ನಿಮಗೆ ತೀರ ಹೊಸ ಬಗೆಯ, ಅತ್ಯಂತ ಸುಧಾರಿಸಿದ ಹೊಲಿಗೆ ಯಂತ್ರವನ್ನು ತೋರಿಸಲೆ? ಬೆಲೆಯೂ ಕಡಿಮೆಯಿದೆ."**

**"ಬೇಡಪ್ಪಾ, ಆದರೆ ನೆರೆಮನೆಯವರಿಗೆ ತೋರಿಸು. ನನ್ನ ಅರಿವೆಗಳನ್ನೆಲ್ಲ ನಾನು ಅವರ ಯಂತ್ರದಲ್ಲಿಯೆ ಹೊಲಿದುಕೊಂಡು ಬರುತ್ತೇನೆ. ಮೂಲೆಗೆ ಎಸೆದು ಬಿಡುವಷ್ಟು ಹಳೆಯದಾಗಿದೆ ಆ ಯಂತ್ರ."**

೧೨೮ ವರ್ಷಗಳ ಹಿಂದೆ ಭಾರತದಲ್ಲಿ ಜರುಗಿದ
'ಸತಿಯು' ಪ್ರತ್ಯಕ್ಷ ವರ್ಣನೆ

# ನಾನು ಸಹಗಮನವನ್ನು ಕಂಡೆ!

ಮೇಜರ ಜನರಲ್ ಸರ್ ವಿಲಿಯಂ ಸ್ಲೀಮನ್
( ಆಗ ಭಾರತದಲ್ಲಿದ್ದವರು )

ತಮ್ಮ ಗಂಡಂದಿರ ಕಳೇವರಗಳೊಡನೆ ಚಿತೆಯನ್ನೇರಿದ ಸತೀಸಾವಿತ್ರಿಯರ ಸ್ಮರಣೆಗಾಗಿ ಕಟ್ಟಿದ ಹಲವು ಸುಂದರ ದೇವಾಲಯಗಳು ಗೋಪಾಲಪುರದಲ್ಲಿವೆ.

೧೮೨೯ ರಲ್ಲಿ ನನ್ನ ಸನುಕ್ಷಮದಲ್ಲಿ ಸಹಗಮನ ಮಾಡಿ ಒಬ್ಬ ಅಸಾಮಾನ್ಯಳಾದ ವೃದ್ಧೆ ಪತಿಭಕ್ತಿಯನ್ನು ಪ್ರದರ್ಶಿಸಿದಳು. ಅವಳಿಗಾಗಿಯೂ ಇಂದು ಅಲ್ಲಿ ಒಂದು ಗುಡಿ ನಿಂತಿದೆ.

ಅವಳ ಗಂಡನ ಹೆಸರು ಉಮ್ಮೇದ ಸಿಂಗ ಉಪಾಧ್ಯಾಯ. ಅವರದು ಆ ಜಿಲ್ಲೆಯಲ್ಲೇ ಅತ್ಯಂತ ಗೌರವಸ್ಥ ಮತ್ತು ವಿಸ್ತಾರವಾದ ಬ್ರಾಹ್ಮಣ ಕುಲಗಳಲ್ಲೊಂದಾಗಿತ್ತು. ಅವಳಿಗೆ ಸತಿ ಹೋಗಲು ಅನುಮತಿ ನೀಡಬೇಕೆಂದು ಕುಟುಂಬದ ಹಿರಿಯರು ನನಗೆ ಅರ್ಜಿಮಾಡಿಕೊಂಡಿದ್ದರು.

ನಾನು ಈ ನರಮೇಧವನ್ನು ತಪ್ಪಿಸಲೇಬೇ



ಕೆಂದು ನಿರ್ಧರಿಸಿದೆ. ಸಹಗಮನಕ್ಕೆ ಯಾರಾದರೂ ಸಹಾಯ ಮಾಡಿದರೆ ಅವರನ್ನು ಕ್ರೂರವಾಗಿ ದಂಡಿಸಲಾಗುವುದೆಂದು ಬೆದರಿಕೆ ಹಾಕಿದೆ. ಸತಿ ಹೋಗಲು ಅವಳಿಗೆ ಯಾರೂ ನೆರವಾಗದಂತೆ ನೋಡಿಕೊಳ್ಳಲು ಪೋಲೀಸು ಕಾವಲನ್ನೂ ನಿಲ್ಲಿಸಿದೆ.

ಆದರೆ ಆ ಮುದುಕಿ ಪರಾವೃತ್ತಗಳಾಗಲಿಲ್ಲ. ಅವಳು ನದಿಯ ದಂಡೆಯ ಮೇಲೆ ಅನ್ನ ನೀರು ತೊರೆದು ಕುಳಿತುಬಿಟ್ಟಳು. ಮರುದಿನ ಅವಳ ಪತಿಯ ಶರೀರವನ್ನು ಎಂಟಡಿ ಚಚೌಕ ಮತ್ತು ಮೂರು ನಾಲ್ಕಡಿ ಆಳವಾದ ಹೊಂಡದಲ್ಲಿರಿಸಿ, ಸಹಗಮನ ಸಮಾರಂಭವನ್ನು ನೋಡಲೆಂದು ನೆರೆದಿದ್ದ ಸಾವಿರಾರು ಜನ ಪ್ರೇಕ್ಷಕರ ಸಮ್ಮುಖದಲ್ಲಿ ಸುಟ್ಟರು.

ಪರವೂರುಗಳಿಂದ ಬಂದಿದ್ದ ಪ್ರೇಕ್ಷಕರೆಲ್ಲ ಅಂದು ಸಂಜೆ ನಿರಾಶರಾಗಿ ಮರಳಿದರು. ವೃದ್ಧೆಯ ಪ್ರಾರ್ಥನೆಯನ್ನು ನಾನು ಖಂಡಿತ ಮನ್ನಿಸಲಾರೆನೆಂದು ಅವರಿಗೆ ಮನವರಿಕೆಯಾಗಿತ್ತು. ಅತ್ತ ಮೃತನ ಕುಟುಂಬದ ಜನರು ಕೂಡ ಉಪವಾಸ ಉಳಿದರು. ಮುದುಕಿ ಚಿತೆಯನ್ನೇರಿ ಪತಿಯನ್ನು ಅನುಸರಿಸಬೇಕು, ಇಲ್ಲವೆ ಮನೆಗೆ ಮರಳಲು ಒಪ್ಪಬೇಕು— ಇವುಗಳಲ್ಲೊಂದು ನಿಖರವಾಗದೆ ಅವರಿಗೆ ಅನ್ನನೀರು ತೆಗೆದುಕೊಳ್ಳುವುದು ಸಾಧ್ಯವಿರಲಿಲ್ಲ.

ಆಕೆಯ ಮಕ್ಕಳು ಮೊಮ್ಮಕ್ಕಳು ಬಳಗದವರು ಅವಳ ಬಳಿಯಲ್ಲಿ ಉಳಿದು ಅವಳನ್ನು ತನ್ನ ನಿರ್ಧಾರದಿಂದ ಕದಲಿಸುವ ಪ್ರಯತ್ನದಲ್ಲಿ ತೊಡಗಿದರು. ಉಳಿದ ಜನರು ನನ್ನ ಮನೆಯ ಸುತ್ತ ನೆರೆದು ಅವಳಿಗೆ ಗಂಡನನ್ನು ಅನುಸರಿಸಲು ಅಪ್ಪಣೆ ಕೊಡಬೇಕೆಂದು ಒತ್ತಾಯಪಡಿಸಹತ್ತಿದರು.

ಅವಳು ನರ್ಮದೆಯ ತಟದ ಒಂದು ಶಿಲೆಯ ಮೇಲೆ ಕಲ್ಲಿನಂತೆ ಕುಳಿತುಬಿಟ್ಟಿದ್ದಳು. ನಾಲ್ಕು ದಿನ ಕಳೆದರೂ ಒಂದು ತುತ್ತು ಆಹಾರ ಕೂಡ ತೆಗೆದುಕೊಳ್ಳಲಿಲ್ಲ. ಹಗಲೆಲ್ಲ ಉರಿಯುವ ಬಿಸಿಲಿಗೆ, ಇರುಳೆಲ್ಲ ತೀಕ್ಷ್ಣವಾದ ಚಳಿಗೆ ಮೈ-ಯೊಡ್ಡಿದ್ದ ಅವಳ ಹೆಗಲ ಮೇಲೆ ತೆಳ್ಳನ್ನ ಸೆರಗೊಂದು ಮಾತ್ರವೇ ಹೊದ್ದಿತ್ತು.

ಆ ಮೇಲೆ ಅವಳು ತನ್ನ ನಿರ್ಧಾರ ಅಚಲವಾದುದೆಂದು ನಿಸ್ಸಂದಿಗ್ಧವಾಗಿ ತಿಳಿಯಪಡಿಸಲು ತಲೆಗೆ ಕೆಂಪು "ಧ್ವಜ" ವನ್ನು ಸುತ್ತಿಕೊಂಡಳು; ಕೈಬಳೆಗಳನ್ನು ಒಡೆದು ಹಾಕಿದಳು. ಈ ವಿಧಿಯಾದ ಮೇಲೆ ಅವಳು ಮರಣ ಹೊಂದಿದಂತೆಯೇ ಎಂದು ಸಂಪ್ರದಾಯ. ಇಷ್ಟು ಮಾಡಿದ ಮೇಲೆ ಬದುಕಿ ಉಳಿದರೂ ಅವಳು ಜಾತಿಬಹಿಷ್ಕೃತಳಾಗಿ, ಕುಟುಂಬದಿಂದ ಸದಾ ದೂರವಾಗಿ ಬಾಳಬೇಕಾಗುತ್ತಿತ್ತು.

ಅವಳ ಮಕ್ಕಳು ಮೊಮ್ಮಕ್ಕಳೆಲ್ಲ ಇನ್ನೂ ಅವಳ ಬಳಿಯಲ್ಲೇ ಇದ್ದರು. ಆದರೆ ಅವರ ನಯವಿನಯಗಳಾವುವೂ ಫಲಕಾರಿಯಾಗಲಿಲ್ಲ. ಅವಳಿಗೆ ಚಿತಾರೋಹಣ ಮಾಡಲು ಅವಕಾಶ ಕೊಡದಿದ್ದರೆ ಅವಳು ಉಪವಾಸಬಿದ್ದು ಪ್ರಾಣತ್ಯಾಗ ಮಾಡುವುದು ಖಂಡಿತವೆಂದು ನನಗೆ ಮೆಲ್ಲಮೆಲ್ಲನೆ ಪ್ರತೀತವಾಯಿತು. ಹೀಗಾದರೆ ಅವಳ ಕುಟುಂಬಕ್ಕೆ ಅನವಶ್ಯಕ ಅಪಕೀರ್ತಿ, ಅವಳಿಗೆ ನಿರರ್ಥಕ ಕಾಯಕ್ಲೇಶ ಕಟ್ಟಿಟ್ಟ ಮಾತಾಗಿತ್ತು. ಅಧಿಕಾರವನ್ನು ಬುದ್ಧಿಪೂರ್ವಕ ದುರುಪಯೋಗಪಡಿಸಿದೆನೆಂಬ ಆರೋಪವನ್ನು ನಾನೂ ಎದುರಿಸಬೇಕಾದ ಪ್ರಸಂಗವಿತ್ತು. ಯಾಕಂದರೆ, ಆಗ ಇನ್ನೂ ಭಾರತದಲ್ಲಿ ಸತೀ ಪದ್ಧತಿಯನ್ನು ಸರಕಾರ ಪ್ರತಿಬಂಧಿಸಿರಲಿಲ್ಲ.

ಎರಡು ದಿನಗಳ ನಂತರ ನಾನು ಕುದುರೆಯೇರಿ ಅಲ್ಲಿಗೆ ಹೋದೆ. ಬಡ ವಿಧವೆ ಅಲ್ಲಿ ಅದೇ ಸ್ಥಿರಚಿತ್ತದಿಂದ ಕುಳಿತಿದ್ದಳು. ಅವಳ ತಲೆಯ ಸುತ್ತ ಕೆಂಪು ಬಟ್ಟೆ ಹಾಗೇ ಸುತ್ತಿತ್ತು. ಅವಳ ಮುಂದೆ ಹಿತ್ತಾಳೆಯ ಹರಿವಾಣದಲ್ಲಿ ಸ್ವಲ್ಪ ಅಕ್ಕಿ ಮತ್ತು ಹೂಗಳಿದ್ದವು. ಎರಡೂ ಕೈಗಳಲ್ಲಿ ಎರಡು ತೆಂಗಿನ ಕಾಯಿಗಳನ್ನು ಹಿಡಿದಿದ್ದಳಾಕೆ.

ಅವಳು ಶಾಂತ ಸ್ವರದಿಂದ ಮಾತಾಡಿದಳು. "ನಾನು ನನ್ನ ನಶ್ವರ ಶರೀರದ ಭಸ್ಮವನ್ನು ನನ್ನ ಪತಿದೇವನ ಐಹಿಕ ಅವಶೇಷದೊಡನೆ ಬೆರಸಲು ನಿಶ್ಚಯಿಸಿದ್ದೇನೆ. ನೀವು ಅದಕ್ಕೆ ಅನುಮತಿ

ಕೊಡುವ ವರೆಗೂ ಕಾಯುತ್ತೇನೆ. ಪತಿ ಪರಲೋಕ ಸೇರಿದ ಮೇಲೆ ಅನ್ನ ನೀರು ಮುಟ್ಟುವುದು ನನಗೆ ಅಸಾಧ್ಯ. ಆದರೂ ನಿಮ್ಮ ಅಪ್ಪಣೆ ಸಿಗುವ ವರೆಗೆ ಹೇಗಾದರೂ ದೇವರು ನನ್ನನ್ನು ಜೀವದಿಂದಿಡುವನೆಂದು ನಾನು ನಂಬಿಕೊಂಡಿದ್ದೇನೆ."

"ಅವಳು ಕಣ್ಣೆತ್ತಿ ಪೂರ್ವದಿಕ್ಕಿನತ್ತ ನೋಡಿದಳು. ನರ್ಮದೆಯ ಸುಂದರ ದೀರ್ಘ ಪ್ರವಾಹದಲ್ಲಿ ತಳತಳಿಸುತ್ತ ಸೂರ್ಯ ಅದೇ ಮೂಡುತ್ತಿದ್ದ. ಅವಳು ನಿರ್ವಿಕಾರವಾಗಿ ಹೇಳಿದಳು: "ನನ್ನ ಜೀವ ಈಗ್ಗೈದು ದಿನಗಳಿಂದಲೂ ಅದೋ ಆ ಸೂರ್ಯ ಮಂಡಲದಲ್ಲಿರುವ ನನ್ನ ಪತಿದೇವನ ಸನ್ನಿಧಿಯಲ್ಲಿದೆ. ನೀವಿಲ್ಲಿ ಕಾಣುತ್ತಿರುವುದು ನನ್ನ ಭೌತಿಕ ಅವಶೇಷ ಮಾತ್ರ. ಈ ಹಕ್ಕಿ ಹಾರಿದ ಪಂಜರಕ್ಕಾದರೂ ನೀವು ಇಂದಲ್ಲ ನಾಳೆ ಆ ಹೊಂಡದಲ್ಲಿ ನನ್ನ ಪತಿಯ ಭಸ್ಮದ ಸಂಗಡ ಭಸ್ಮವಾಗಿ ಬೆರೆಯಲು ಅನುಮತಿ ಕೊಟ್ಟೇ ಕೊಡುವಿರೆಂದು ನಾನು ಬಲ್ಲೆ. ನನ್ನಂಥ ಬಡ ಮುದುಕಿಯ ಕ್ಲೇಶಗಳನ್ನು ಬುದ್ಧಿಪೂರ್ವಕವಾಗಿ ವಿಲಂಬಿಸುವವರು ನೀವಲ್ಲೆಂದು ನನಗೆ ಗೊತ್ತು."

ನಾನೆಂದೆ: "ಇಲ್ಲ—ಸರ್ವಥಾ ಅಲ್ಲ. ನಿಮ್ಮ ಜೀವ ಉಳಿಸುವುದೇ ನನ್ನ ಧ್ಯೇಯ, ನನ್ನ ಕರ್ತವ್ಯ ಎಂದು ಬಗೆದಿದ್ದೇನೆ. ಈ ನಿರರ್ಥಕ ಉದ್ಯೋಗದಿಂದ ನಿಮ್ಮನ್ನು ಪರಾವರ್ತಿಸಲೆಂದೇ ನಾನಿಲ್ಲಿ ಬಂದಿರುವೆ. ನೀವು ಮರಣ ಹೊಂದಿದರೆ ನಿಮ್ಮ ಕುಟುಂಬಕ್ಕೆ ಅಪಕೀರ್ತಿ ಬರುತ್ತದೆ."

"ಅವರಿಗೆ ಅಪಕೀರ್ತಿ ಬಂದೀತೆಂಬ ಸಂಶಯ ನನಗೆ ಎಳ್ಳಷ್ಟೂ ಇಲ್ಲ. ನನ್ನನ್ನು ಉಳಿಸಿಕೊಳ್ಳಬೇಕೆಂದು ಅವರು ಶತಪ್ರಯತ್ನ ಮಾಡಿ ನೋಡಿದ್ದಾರೆ. ನಾನು ಒಪ್ಪಿದ್ದರೆ ನನ್ನನ್ನು ಸಂತೋಷದಿಂದ ಕರೆದೊಯ್ದು ಪ್ರೀತಿಗೌರವಗಳಿಂದ ಕಾಪಾಡುತ್ತಿದ್ದರು. ಆದರೆ ನನಗೆ ಮಕ್ಕಳುಮರಿಗಳ ಋಣವೀಗ ತೀರಿದೆ. ಅವರನ್ನೆಲ್ಲ ನಿಮ್ಮ ಕೈಯಲ್ಲಿ ಹಾಕುತ್ತೇನೆ. ಈಗ ನನ್ನ ಅಂತಿಮ ಕರ್ತವ್ಯವೊಂದೇ ಉಳಿದಿದೆ. ನನ್ನ ಪತಿದೇವನಾದ ಉಮ್ಮೇದಸಿಂಗ ಉಪಾಧ್ಯಾಯರನ್ನು ಹಿಂಬಾಲಿಸಿ ಅವರ ಪರಿಚರ್ಯೆಯನ್ನು ನಾನು ಕೈಕೊಳ್ಳಬೇಕಾಗಿದೆ. ಈಗಾಗಲೇ ಅವರ ಚಿತಾಭಸ್ಮದಲ್ಲಿ ನನ್ನ ಭಸ್ಮ ಮೂರು-ಮೂರಾವರ್ತಿ ಬೆರೆತಂತೆಯೇ ಆಗಿದೆ."

ಆ ಪತಿಪರಾಯಣೆಯ ಸುದೀರ್ಘ ವಿವಾಹಿತ ಜೀವನದಲ್ಲಿ ಅವಳ ಬಾಯಿಂದ ಗಂಡನ ಹೆಸರು ಹೊರಬಿದ್ದದ್ದು ಅದೇ ಮೊದಲು. ಭಾರತದಲ್ಲಿ ಯಾವಾಕೆಯೂ ಗಂಡನ ಹೆಸರು ಹೇಳಿ ಅವನಲ್ಲಿ ಅಗೌರವ ತೋರಿಸುವಂತಿಲ್ಲ.

ಅವಳು ಮತ್ತೆ ಹೇಳಿದಳು: "ನನ್ನ ಪ್ರಾಣ ಮೊದಲೇ ಉಮ್ಮೇದಸಿಂಗ ಉಪಾಧ್ಯಾಯರ ಬೆಂಬತ್ತಿ ಹೋಗಿದೆ; ಈಗ ನನ್ನ ಶರೀರದ ಭಸ್ಮವನ್ನು ಅವರ ಚಿತಾಭಸ್ಮದಲ್ಲಿ ಬೆರಸುವುದೊಂದೇ ಉಳಿದಿದೆ."

ಪುನಃ ಕಣ್ಣನ್ನು ನಸುವೆ ಸೂರ್ಯಾಭಿಮುಖವಾಗಿ ಎತ್ತಿ ಆಕೆ ಗಂಭೀರವಾಗಿ ನುಡಿದಳು: "ಅಗೋ! ಅಲ್ಲಿ ಅವರಿಬ್ಬರೂ ನನ್ನ ಕಣ್ಣಿಗೆ ಕಾಣಿಸುತ್ತಿದ್ದಾರೆ. ಮದುವೆಯ ಮಂಟಪದಲ್ಲಿ ಅವರು ಅಕ್ಕಪಕ್ಕದಲ್ಲಿ ಕುಳಿತಿದ್ದಾರೆ!" ಅವಳ ಮುಖದಲ್ಲಿಯೂ ಧ್ವನಿಯಲ್ಲಿಯೂ ವ್ಯಕ್ತವಾದ ಭಾವ ನನ್ನ ಮನಸನ್ನೂ ತಟ್ಟಿತು. ಆ ಕ್ಷಣದಲ್ಲಿ ಆ ಪತಿವ್ರತೆಯ ಮನದ ಕಣ್ಣುಗಳಿಗೆ, ತನ್ನ ಪ್ರಾಣವೂ ತನ್ನ ಪತಿಯ ಆತ್ಮವೂ ಜತೆಯಾಗಿ ಸ್ವರ್ಗದ ವಿವಾಹಮಂಟಪದಲ್ಲಿ ಕುಳಿತ ದೃಶ್ಯ ನಿಜವಾಗಿ ಕಾಣುತ್ತಿತ್ತೆಂದು ನನಗೆ ಮನವರಿಕೆಯಾಯಿತು.

ಅವಳ ಮುಖದಲ್ಲಿ ಒಂದು ನಸುನಗೆ ಮಿಂಚಿತು. ಅವಳು ಕೈಯನ್ನು ಮುಂದೆ ಮಾಡಿ ಹೇಳಿದಳು: "ನನ್ನ ನಾಡಿ ಎಂದೋ ನಿಂತು ಹೋಗಿದೆ. ನನ್ನ ಪ್ರಾಣ ಹೊರಟುಹೋಗಿದೆ. ಇಲ್ಲಿ ನನ್ನದಾಗಿ ತೋರುವುದು ಬರಿ ಹಿಡಿಮಣ್ಣು. ಅದನ್ನು ನನ್ನ ಪತಿಯ ಭಸ್ಮದಲ್ಲಿ ಬೆರಸಬೇಕೆಂದಿಷ್ಟೇ ನನ್ನ ಆಸೆ. ಬೆಂಕಿಯಿಂದ ನನಗೇನೂ ಕಷ್ಟವಾಗದು; ಬೇಕಾದರೆ ತೋರಿಸುತ್ತೇನೆ. ಸ್ವಲ್ಪ ಬೆಂಕಿ ತರಿಸಿರಿ. ಈ ಕೈಯನ್ನು ಅದರಲ್ಲಿ

ಇಡುತ್ತೇನೆ. ನನಗೇನಾದರೂ ನೋವಾದರೆ ಹೇಳಿ ಮತ್ತೆ!"

ನನಗೆ ಬೇರೆ ಉಪಾಯವೇ ಉಳಿಯಲಿಲ್ಲ. ನಾನು ಅವಳ ಬಂಧುಬಾಂಧವರಿಗೆ ಹೇಳಿಕಳಿಸಿದೆ. ಅವಳ ಸಹಗಮನಕ್ಕೆ ಅನುಮತಿ ಕೊಡುವೆ—ಆದರೆ ಇನ್ನು ಮುಂದೆ ಈ ಕುಟುಂಬದಿಂದ ಎಂದೂ ಯಾರೂ ಸತಿ ಹೋಗಬಾರದೆಂದು ಬರೆದುಕೊಡಬೇಕು, ಎಂದು ಕರಾರು ಹಾಕಿದೆ.

ಅವರೆಲ್ಲ ಸಂತೋಷದಿಂದ ಒಪ್ಪಿಕೊಂಡರು. ಕ್ರಮವಾಗಿ ಕಾಗದ ಪತ್ರ ಮಾಡಿಸಿಕೊಂಡೆ. ಅಷ್ಟರಲ್ಲಿ ಮಧ್ಯಾಹ್ನವಾಗಿತ್ತು. ಆ ಮೇಲೆ ನಾನು ಆ ವೃದ್ಧೆಗೆ ನನ್ನ ಒಪ್ಪಿಗೆಯನ್ನು ತಿಳಿಸಿದೆ. ಅವಳು ಹಿಗ್ಗಿ ಹೀರೇಕಾಯಿಯಾದಳು.

ಸ್ನಾನಾದಿ ವಿಧಿವಿಧಾನಗಳು ಮೂರು ಗಂಟೆಯೊಳಗೆ ಮುಗಿದವು. ಅತ್ತ ಅದೇ ಚಿತಾಕುಂಡದಲ್ಲಿ ಕಟ್ಟಿಗೆ ಮತ್ತು ಇತರ ಶೀಘ್ರಜ್ವಲನ ಪದಾರ್ಥಗಳನ್ನಿಕ್ಕಿ ಅಣಿ ಮಾಡಿದ್ದರು. ಅವಳು ಸ್ನಾನಾನಂತರ ವೀಳ್ಯವನ್ನು ಬೇಡಿದಳು. ಅದನ್ನು ಹಾಕಿಕೊಂಡ ಬಳಿಕ ನಿಧಾನವಾಗಿ ಎದ್ದು ನಿಂತು, ತನ್ನ ಹಿರಿಮಗನ ಹೆಗಲ ಮೇಲೊಂದು ತೋಳು, ಸೋದರಳಿಯನ ಹೆಗಲ ಮೇಲೊಂದು ತೋಳು ಹಾಕಿ ಮೆಲ್ಲನೆ ಚಿತೆಯ ಕಡೆಗೆ ನಡೆದಳು.

ನಾನು ಸುತ್ತಲೂ ಕಾವಲು ನಿಲ್ಲಿಸಿದ್ದೆ. ಚಿತೆಯ ಐದು ಮಾರಿನೊಳಗೆ ಮತ್ತಾರೂ ಪ್ರವೇಶಿಸತಕ್ಕದ್ದಲ್ಲೆಂದು ಕಟ್ಟಪ್ಪಣೆ ಮಾಡಿದ್ದೆ. ಅವಳು ಎದ್ದೊಡನೆ ಚಿತೆಗೆ ಅಗ್ನಿಪ್ರತಿಷ್ಠೆ ಮಾಡಲಾಯಿತು. ಕ್ಷಣದಲ್ಲಿ ಧಗ್ಗೆಂದು ಉರಿ ಮಸಗಿತು.

ಚಿತೆಗೂ ಅವಳಿಗೂ ಸುಮಾರು ನೂರೈವತ್ತು ಗಜ ದೂರವಿತ್ತು. ಅವಳು ಸಾವಕಾಶವಾಗಿ, ಪ್ರಶಾಂತಮುಖಮುದ್ರೆಯಿಂದ ಆ ಕಡೆ ಸಾಗಿದಳು. ನಡುವೆ ಒಮ್ಮೆ ನಿಂತಳಷ್ಟೇ. "ಪತಿದೇವಾ, ಐದು ದಿನಗಳ ವರೆಗೆ ಇವರೇಕೆ ನನ್ನನ್ನು ನಿನ್ನಿಂದ ಅಗಲಿಸಿಟ್ಟರೋ!" ಎಂದಳು.

ಕಾವಲುಗಾರರು ನಿಂತಲ್ಲಿಗೆ ಬಂದೊಡನೆ ಅವಳನ್ನು ಕರೆತಂದವರು ತಳುವಿದರು. ಅವಳು ತಾನೊಬ್ಬಳೇ ಚಿತೆಗೆ ಪ್ರದಕ್ಷಿಣೆ ಹಾಕಿದಳು. ಒಂದು ಕ್ಷಣ ನಿಂತು, ಏನೋ ಮಂತ್ರವನ್ನುಸುರಿ, ತಂದಿದ್ದ ಹೂಗಳನ್ನು ಚಿತೆಯಲ್ಲಿ ಚೆಲ್ಲಿದಳು. ಅನಂತರ ದೃಢವಾದ ಹೆಜ್ಜೆಗಳಿಂದ ಚಿತೆಯ ಅಂಚಿನ ವರೆಗೂ ನಡೆದು, ಜ್ವಾಲಾಮಧ್ಯವನ್ನು ಪ್ರವೇಶಿಸಿ, ಕುಳಿತು, ಹಾಗೇ ವಿಶ್ರಮಿಸುವವರಂತೆ ಹಿಂದಕ್ಕೆ ಒರಗಿದಳು. ಭುಗಿಲೆಂಬ ಜ್ವಾಲೆ ಅವಳನ್ನು ನೋಡನೋಡುತ್ತ ಸ್ವಾಹಾಕರಿಸಿತು.

ಅವಳು ಒಮ್ಮೆಯಾದರೂ ಅರಚಿದಳೆ? ವೇದನೆಯನ್ನು ಮುಖದಲ್ಲಿ ಪ್ರಕಟಿಸಿದಳೇ? ಇಲ್ಲ. ಪದ್ಧತಿಯಂತೆ ಕೆಲ ವಾದ್ಯಗಳು ಬಾಜಿಸುತ್ತಿದ್ದವೇನೋ ನಿಜ. ಆದರೆ ಕೆಲವರು ಹೇಳುವಂತೆ, ಅದು ಸತಿಹೋಗುವವರ ಕ್ರಂದನವನ್ನು ಅಡಗಿಸಲೆಂದು ಇದ್ದಿಲ್ಲ. ಸತಿ ಹೋಗುತ್ತಿರುವವರ ಬಾಯಿಂದ ಹೊರಟ ಮಾತುಗಳು ಎಂದೂ ಹುಸಿಯಾಗವು; ಅವು ಅಶುಭವನ್ನು ಸೂಚಿಸಿದರೆ, ಅದನ್ನು ಕೇಳಿದ ಬಂಧುಬಾಂಧವರ ಮನಸ್ಸು ತಲ್ಲಣಿಸಬಹುದು; ಆದ್ದರಿಂದ ಸತಿಯ ಚರಮವಾಕ್ಯ ಕೇಳಿಸದಿರಲಿ- ಎಂಬುದೇ ವಾದ್ಯಘೋಷದ ಉದ್ದೇಶವಿತ್ತು.

(ಇಂಗ್ಲಿಷ್ ಡೈಜಸ್ಟಿನಿಂದ)



**ಕಲಿಯುವುದೆಂದರೆ ನದಿಯಲ್ಲಿ ಪ್ರವಾಹಕ್ಕೆದುರಾಗಿ ದೋಣಿ ಸಾಗಿಸಿದಂತೆ: ಮುಂದೆ ಸಾಗದಿದ್ದರೆ ಹಿಂದೆ ಸರಿದಂತೆಯೇ.** —ಚೀನಿ ಗಾದೆ

# ಇದುವೆ ಜೀವ, ಇದು ಜೀವನ

ಅಂದು ನಾನು ಬೈಲಹೊಂಗಲದಿಂದ ಸವದತ್ತಿಗೆ ಹೊರಟಿದ್ದೆ. ನಾವು ಕುಳಿತ ಸೀಟಿನ ಪಕ್ಕದಲ್ಲಿಯೇ ಒಬ್ಬ ಹಳ್ಳಿಯ ಮುದುಕ ಬಂದು ಕುಳಿತ. ನಮ್ಮೂರಿಂದ ಬಸ್ಸ ಚಾರ್ಜು ೧೫ ಆಣೆ ಮಾತ್ರ. ಬಸ್ಸು ಹೊರಡುವ ಸಮಯವಾಯಿತು. ಮಾಮೂಲಿನಂತೆ ಬಸ್ ಕಂಡಕ್ಟರ 'ಟಿಕೆಟ್' 'ಟಿಕೆಟ್' ಎನ್ನುತ್ತ ಎದುರು ಬಂದ. ನಮ್ಮ ಪಕ್ಕದ ಆ ಮುದುಕ ರೈತ ಟಿಕೇಟಿಗಾಗಿ ೧ ರೂ. ಕೊಟ್ಟ. ಕಂಡಕ್ಟರನು ಒಂದು ತಿಕೀಟು ಆತನಿಗೆ ಕೊಟ್ಟು, ತಿರುಗಿ ೧ ಆಣೆ ಆತನ ಕೈಯಲ್ಲಿರಿಸಿದ. ರೈತ ಆಣೆಯನ್ನು ದಿಟ್ಟಿಸಿ ನೋಡಿ ಸುರು ಮಾಡಿದ "ಯಪಾ ಕಂಡಕ್ಟರಸಾಹೇಬರ, ಇದು ಸಂವದಕಿ!*"

ಕಂಡಕ್ಟರ ಆಲಕ್ಷದಿಂದ, "ಹೌದೊ ಮುದುಕಾ, ನಾನೂ ಅಲ್ಲಿಗೇ ತಿಕೀಟು ಕೊಟ್ಟೇನಿ."

"ಅಲ್ರೀ ಯಪಾ, ಇದು ಸಂವದಕಿ" ಮುದುಕ ನುಡಿದ. ಈಗ ಮಾತ್ರ ಕಂಡಕ್ಟರನಿಗೆ ನಿಜವಾಗಿಯೂ ಕೋಪ ಬಂತು. "ಎಲಾ ಇವನ! ನನಗೆ ಗೊತ್ತಿಲ್ಲೇನೋ! ನಾನೂ ಸವದತ್ತಿಗೇ ತಿಕೀಟು ಕೊಟ್ಟೇನಿ."

ಮುದುಕ ಮತ್ತೂ ವಿನಯದಿಂದ ಹೇಳಿದ: "ಅಲ್ರೀ ದೇವರು, ನೀವು ಕೊಟ್ಟ ಈ ಆಣೆ ಸಂವದಕರಿ."

ಕಂಡಕ್ಟರನಿಗೆ ತನ್ನ ತಪ್ಪು ತಿಳಿಯುವದಕ್ಕೂ, ನಾವೆಲ್ಲರೂ ಗೊಳ್ಳೆಂದು ನಗುವದಕ್ಕೂ ಸರಿಹೋಯಿತು.

— ಪಿ. ಜಿ. ಹೊಂಗಲ, ಬೈಲಹೊಂಗಲ

* ಸಂವದಕಿ ಅಂದರೆ ಉತ್ತರ ಕರ್ನಾಟಕದ ಗ್ರಾಮ್ಯಭಾಷೆಯಲ್ಲಿ 'ಸವೆದಿದೆ' ಎಂದರ್ಥ.

ಭಾರತದಲ್ಲಿ ಬ್ರಿಟಿಶರ ಆಡಳಿತವಿದ್ದಾಗ ನಮ್ಮ ಜಿಲ್ಲಾಧಿಪತಿಯೂ ಓರ್ವ ಆಂಗ್ಲನೇ ಆಗಿದ್ದ. ನೌಕರರಿಂದ ರಜೆಯ ಅರ್ಜಿಗಳು ಬಂದಾಗಲೆಲ್ಲ ಅವನ ದರ್ಪ ಪ್ರಕಟವಾಗುತ್ತಿತ್ತು. ರಜೆಗಾಗಿ ತೋರಿಸಿದ ಕಾರಣಗಳೊಂದನ್ನೂ ವಿಚಾರಿಸದೆ ಅರ್ಜಿಯ ಮೇಲೆ ನಕಾರಾತ್ಮಕ ಶರಾ ಬರೆಯುತ್ತಿದ್ದನಾತ. "ಕಾದಿರಬೇಕು" "ಸರತಿಯಂತೆ ರಜೆ ಕೊಡಲಾಗುವದು" ಎಂದಿತ್ಯಾದಿ ಆಜ್ಞೆಗಳು ಹೊರಡುತ್ತಿದ್ದವು.

ನಮ್ಮ ಚಿಕ್ಕಪ್ಪ ಒಮ್ಮೆ ರಜೆಗೆ ಬರೆದುಕೊಳ್ಳಲೇ ಬೇಕಾಯಿತು. ಒಂದು ತಿಂಗಳ ರಜೆಯನ್ನು ಕೇಳಿದ್ದ. ನಿರೀಕ್ಷಿಸಿದಂತೆ 'ಕಾದಿರಬೇಕು' ಅಪ್ಪಣೆಯೂ ಬಂತು.

ನಮ್ಮ ಚಿಕ್ಕಪ್ಪನು ಮಾತ್ರ ಇಷ್ಟಕ್ಕೆ ಬಿಡದೆ "ಸ್ವಾಮಿ, ನನಗೀಗ ಮೂವತ್ತೈದು ವರ್ಷ ಪ್ರಾಯ. ಇನ್ನೆಷ್ಟು ಸಮಯ ಕಾದಿರಬೇಕೋ ಖಾವಂದರ ಹುಕುಮಾಗಬೇಕು" ಎಂದು ಬರೆದು ಅರ್ಜಿಯನ್ನು ಮತ್ತೆ ಕಳಿಸಿದ.

ಅಧಿಕಾರಿಗೆ ಕೋಪ ಮಿತಿಮೀರಿತು. ತುಸು ಸಮಯದ ಮೇಲೆ ಅವನು ಅರ್ಜಿಯ ಮೇಲೆ ಕಣ್ಣಾಡಿಸಿದಾಗ ಅವನಿಗೆ ತನ್ನ ಅವಿವೇಕಕ್ಕಾಗಿ ನಾಚಿಕೆಯಾಗಿರಬೇಕು. "ರಜೆ ಮಂಜೂರು" ಎಂದು ಕೂಡಲೆ ಬರೆದನಾತ.

ಮುಂದೆ ಎರಡೇ ಎರಡು ದಿನಗಳಲ್ಲಿ ನಡೆಯಲಿದ್ದ ತನ್ನ ಮದುವೆಗೆಂದು ಚಿಕ್ಕಪ್ಪ ರಜೆಗೆ ಅರ್ಜಿ ಮಾಡಿಕೊಂಡಿದ್ದ.

— ಶಾಂತಾಕುಮಾರಿ, ಪುತ್ತೂರು

ಗೋವಾದಲ್ಲಿ ಚಳವಳಿ ಪ್ರಾರಂಭವಾಗುವ ಪೂರ್ವದಲ್ಲಿ ಮಂಗಳೂರಿನಿಂದ ಮುಂಬಯಿಗೆ ಹೋಗುವ ಹಡಗವು ಮಾರ್ಮಗೋವಾ ಬಂದರದಲ್ಲಿ ನಾಲ್ಕೈದು ತಾಸು ನಿಲ್ಲುತ್ತಿತ್ತು, ಹಾಗೂ ಪ್ರಯಾಣಿಕರು ಕೆಳಗಿಳಿದು ಬಂದರದಲ್ಲಿ ಊಟ, ಫರಾಳ ವಗೈರೆ ತೀರಿಸಿಕೊಂಡು ಪುನಃ ಹಡಗವನ್ನೇರುತ್ತಿದ್ದರು.

ಒಮ್ಮೆ ನಾವು ಮೂವರು ಮಂಗಳೂರಿನಿಂದ ಮುಂಬಯಿಗೆ ಹಡಗದಲ್ಲಿ ಹೊರಟವರು ಮಾರ್ಮಗೋವಾದಲ್ಲಿ ಇಳಿದು ಒಂದು ಫರಾಳದಂಗಡಿಗೆ ಹೋದೆವು. ಚಪಾತಿಯಲ್ಲದೆ ಬೇರೆ ತಾಜಾ ವಸ್ತು ಏನೂ ಇಲ್ಲದ್ದರಿಂದ, ಎರಡೆರಡ ಚಪಾತಿ ತಗೊಂಡೆವು. ಚಪಾತಿಯೊಡನೆ ಅಂಗಡಿಯವನು ಚಟ್ನಿಯನ್ನು ಕೊಟ್ಟನು.

ಚಟ್ನಿಯು ನಿಜವಾಗಿಯೂ ಚೆನ್ನಾಗಿತ್ತು. “ ನಿಮ್ಮ ಚಟ್ನಿ ಫಸ್ಟ್ ಕ್ಲಾಸ್ ” ಎಂದು ನನ್ನ ಗೆಳೆಯನು ಅಂಗಡಿಯವನಿಗೆ ಹೇಳಿದನು.

ಅಂಗಡಿಯವನು ಚಟ್ನಿಯನ್ನು ಸಾಕೆಂದರೂ ಕೇಳದೆ ಪುನಃ ಪುನಃ ಹಾಕಿ “ ತೆಗೆದುಕೊಳ್ಳಿ ” ಎಂದು ನಮ್ಮನ್ನು ಆಗ್ರಹಪಡಿಸಿದನು. ಚಟ್ನಿಯ ಕುರಿತಾದ ಆಗ್ರಹವು ನಮಗೆ ನಿಜವಾಗಿಯೂ ಚಮತ್ಕಾರಿಕವೆನಿಸಿತು.

ಕೊನೆಗೆ ಹಣ ಎಷ್ಟಾಯಿತೆಂದು ಕೇಳಿದಾಗ “ ಆರು ಚಪಾತಿ ಹನ್ನೆರಡಾಣೆ, ಹನ್ನೆರಡು ಪ್ಲೇಟ ಚಟ್ನಿ ಹನ್ನೆರಡಾಣೆ, ಒಟ್ಟು ೧-೮-೦ ” ಎಂಬ ಉತ್ತರ ದೊರೆತಾಗ ಮಾತ್ರ ನಮ್ಮ ಕಣ್ಣು ತೆರೆಯಿತು.

ನನ್ನ ಗೆಳೆಯನು ಮಂಗಳೂರಿನ ಓರ್ವ ವ್ಯಾಪಾರಸ್ಥನ ಮಗನಿದ್ದು ಅವನ ಹಿರಿಯರು ಗೋವಾದಿಂದ ಬಂದವರಿದ್ದರು. ಚಟ್ನಿಯ ಬಿಲ್ ಹನ್ನೆರಡಾಣೆ ಎಂಬುದನ್ನು ಕೇಳಿ ಅವನು “ ನಾವು ಕನ್ನಡನಾಡಿಗೆ ಬಂದ ಬಳಿಕವೇ ವ್ಯಾಪಾರೀ ಜಾಣತನವನ್ನು ಕಲಿತಿದ್ದಿರಬೇಕು ಎಂದು ನನ್ನ ಭಾವನೆಯಾಗಿತ್ತು. ಆದರೆ ಈಗ ಗೋವೆ ಬಿಡುವಾಗ, ವ್ಯಾಪಾರೀ ಜಾಣತನದ ಒಂದಂಶವನ್ನು ನಾವು ಗೋವೆಯಲ್ಲಿಯೇ ಬಿಟ್ಟೇ ಹೊರಟೆವೆಂದು ನನಗನಿಸುತ್ತದೆ ” ಎಂದು ಉದ್ಗಾರ ತೆಗೆದನು.

ರಂ. ರಾ. ತ., ಬೆಳಗಾವಿ.

ಒಂದು ದಿನ ನಾನು, ನನ್ನ ತಂದೆ-ತಾಯಿ ಮತ್ತು ನನ್ನ ಪುಟ್ಟ ತಂಗಿ-ಐದು ವರ್ಷದವಳು ಪೇಟೆಗೆ ಹೋಗಿದ್ದೆವು. ಮನೆ ಬಿಡುವಾಗ ನನ್ನ ತಂದೆ ತಂಗಿಗೆ “ ಅಂಗಡಿಯಲ್ಲಿ ಅದನ್ನು ಕೊಡಿಸು, ಇದನ್ನು ಕೊಡಿಸು ಎಂದು ಹಟಮಾಡಬಾರದು. ಹಟಮಾಡಿದರೆ ನಿನ್ನನ್ನು ಅಲ್ಲಿಯೇ ಬಿಟ್ಟುಬರುತ್ತೇವೆ ” ಎಂದು ಹೆದರಿಸಿದ್ದರು. ನನ್ನ ತಂಗಿ “ ನಾನು ಏನೂ ಕೇಳುವದಿಲ್ಲ ” ಎಂದು ನಮ್ಮ ಸಂಗಡ ಬಂದಿದ್ದಳು.

ಆದರೆ ನಾವು ಒಂದು ಅಂಗಡಿಯನ್ನು ಹೊಕ್ಕಿದ್ದೇ ತಡ, ನನ್ನ ತಂಗಿ “ ಅಣ್ಣಾ, ನನಗೆ ಚಾಕಲೇಟು, ಪೆಪ್ಪರಮಿಂಟ ಯಾವದೂ ಬೇಡ. ಆಟಗೆಯೂ ಬೇಡ. ಬೇಕು ಎಂದು ನಾನು ಹಟಮಾಡುವದಿಲ್ಲ. ನಾನು ಕೇಳದಿದ್ದರೂ ನೀವೇ ತೆಗೆಸಿಕೊಡುತ್ತೀರಿ, ಇಲ್ಲವಾದರೆ ಅಂಗಡಿಯವರಾದರೂ ಕೊಡುತ್ತಾರೆ, ನನಗೆ ಗೊತ್ತು. ಆದರೆ ನೀವು ಕೊಟ್ಟರೂ ನಾನು ತೆಗೆದುಕೊಳ್ಳುವದಿಲ್ಲ. ಚಾಕಲೇಟು ಬಾಯೊಳಗೆ ಹಾಕಲಿಕ್ಕೆ ಬಂದರೆ ಬಾಯಿಮುಚ್ಚಿಕೊಂಡು ಬಿಡುತ್ತೇನೆ, ” ಎಂದಳು.

ಅದನ್ನು ಕೇಳಿ ಅಂಗಡಿಯಲ್ಲಿದ್ದವರೆಲ್ಲ ನಕ್ಕರು. ನನ್ನ ತಂದೆಯೂ ನಗುತ್ತ ಅವಳಿಗೆ ಎಲ್ಲವನ್ನೂ ಕೊಡಿಸಿದರು. ಅಂಗಡಿಯವನೂ ಒಂದು ಆಟಗೆಯನ್ನು ಕೊಟ್ಟನು. ಎಲ್ಲವನ್ನೂ ತೆಗೆದುಕೊಂಡು ಹಿಗ್ಗಿನಿಂದ ನನ್ನ ತಂಗಿ ಮನೆಗೆ ಬಂದಳು.

—ಶಂಕರ, ಬಾಗಲಕೋಟೆ



# ಹೆಂಡತಿ . . . . . . . . .

ಕೀರ್ತಿ ಕುರ್ತಕೋಟಿ

ದೇವರ ಸರ್ವಾಂತರ್ಯಾಮಿತ್ವದ ಒಂದು ಅಂಶ ಭೂಮಿಯಲ್ಲಿ ಎಲ್ಲಿಯಾದರೂ ಇದ್ದರೆ ಅದು ಹೆಂಡತಿಯಲ್ಲಿ ಎಂದು ನನ್ನ ತಿಳುವಳಿಕೆಯಾಗಿಬಿಟ್ಟಿದೆ. ದೇವರಿಗೆ ಒಂದು ಇರುವೆಯ ಹೆಜ್ಜೆಯ ಸದ್ದೂ ಕೇಳಿಸುತ್ತದಂತೆ. ಹೆಂಡತಿಯ ಕಿವಿ ಅಷ್ಟು ಸೂಕ್ಷ್ಮವಾಗಿರಲಿಕ್ಕಿಲ್ಲ, ಆದರೆ ಮನೆಯ ಹೊರಗಿನಿಂದಲೇ ಗಂಡನ ಕಾಲುಸಪ್ಪಳವನ್ನು ಗುರುತಿಸಿ ಬಾಗಿಲುತೆಗೆಯುವವಳು ಅವಳೇ; ಅಷ್ಟೇಕೆ ಗಂಡನ ಪ್ರತಿಯೊಂದು ಚಲನವಲನವೂ ಅವಳಿಗೆ ಪತ್ತೆಯಾಗಿರುತ್ತದೆ.

ಅವಳಿಗೆ ಇಂಗ್ಲೀಷು ಬರುತ್ತಿರಲಿಕ್ಕಿಲ್ಲ; ಆದರೆ ನಿಮ್ಮ ಪತ್ರಗಳ ರಾಶಿಯಲ್ಲಿ ಒಂದು ಪ್ರೇಮ ಪತ್ರ ತಪ್ಪಿಸಿಕೊಂಡು ಬಂದಿದ್ದರೆ, ತಟ್ಟನೆ ಎತ್ತಿ ತೋರಿಸಬಲ್ಲ ಸಾಮರ್ಥ್ಯ ಮತ್ತಾರಿಗಿದೆ? ನೀವು ಯಾವುದನ್ನೂ ಅವಳಿಂದ ಮುಚ್ಚಿಡಲಾರಿರಿ. ನೀವು ದಿನಕ್ಕಿಂತ ಹೆಚ್ಚು ಚಹ ಕುಡಿದಿದ್ದರೆ, ಕದ್ದು ಕೋಟಿನ ಕಿಸೆಯಲ್ಲಿ ಚಿಲ್ಲರೆ ರೊಕ್ಕ ಹಾಕಿದ್ದರೆ, ಆಫೀಸಿನ ಕೆಲಸವೆಂದು ಹೇಳಿ ಸ್ನೇಹಿತರೊಡನೆ ಸಿನೆಮಾಕ್ಕೆ ಹೋಗುವ ಸಿದ್ಧತೆಯಲ್ಲಿದ್ದರೆ, ಅದಾವ ಮಾಯದಿಂದಲೋ ಗೊತ್ತು ಹಚ್ಚಿ ಬಿಡುತ್ತಾಳೆ. ಹೆಣ್ಣಿನ ಹೊಟ್ಟೆಯಲ್ಲಿ ಗುಟ್ಟು ನಿಲ್ಲುವದಿಲ್ಲ ಎನ್ನುವ ಪಂಡಿತರು ಇನ್ನೊಂದು ಮಾತನ್ನೂ ಲಕ್ಷ್ಯದಲ್ಲಿಡಬೇಕು. ಹೆಣ್ಣಿನ ಎದುರಿಸಲ್ಲಿ ಯಾವ ಗುಟ್ಟೂ ನಿಲ್ಲಲಾರದು ಎನ್ನುವದು. ಇದು ದಾಂಪತ್ಯ ಜೀವನದಲ್ಲಿಯ ಸನಾತನ ಸತ್ಯ ಎಂಬ ಅಭಿಪ್ರಾಯಕ್ಕೆ ನಾನು ಬಂದಿದ್ದೇನೆ.

ರಾಮಚಂದ್ರನ ಉದಾಹರಣೆಯನ್ನೇ ತೆಗೆದುಕೊಳ್ಳೋಣ. ಸೀತೆಗೆ ಗೊತ್ತಿಲ್ಲದಂತೆ ವನವಾಸಕ್ಕೆ ಹೋಗಬೇಕೆಂದ; ಅವಳನ್ನು ಹೆದರಿಸಿದ, ರಮಿಸಿದ. ಆದರೆ ಏನು ಮಾಡಿದರೂ ಸೀತೆ ಅವನ ಬೆನ್ನು ಬಿಡಲಿಲ್ಲ. ರಾಮನ ಮನದಿಂಗಿತವೆಲ್ಲ ಅವಳಿಗೆ ಮೊದಲೇ ಗೊತ್ತಾಗಿಹೋಗಿತ್ತು

ಆದರೆ ರಾಮನಿಗೆ ಸೀತೆಯ ಬಗ್ಗೆ ಏನು ಗೊತ್ತಿತ್ತು? ವನವಾಸಕ್ಕೆ ಹೋಗುವಾಗ ಸೀತೆ ಈ ರೀತಿ ಹಟ ಮಾಡಬಹುದೆಂದು ಅವನು ಕನಸಿನಲ್ಲಿಯೂ ಎಣಿಸಿರಲಿಲ್ಲ. ತಾನು ಸಂಶಯ ತೆಗೆದುಕೊಂಡಾಗ ಸೀತೆ ಬೆಂಕಿಯಲ್ಲಿ ಹಾರಬಹುದೆಂದು ಅವನು ತಿಳಿದಿದ್ದನೇ? ಅದೂ ಹೋಗಲಿ, ಅಶ್ವಮೇಧಯಜ್ಞವಾದ ಮೇಲೆ, ಲವಕುಶರೊಡನೆ ಸೀತೆಯನ್ನು ತಾನು ಪರಿಗ್ರಹಿಸಲೊಪ್ಪಿದಾಗ, ಸೀತೆ ಹಾಗೆ ಭೂಮಿಯ ಒಡಲನ್ನು ಸೇರಬಹುದೆಂದು ಗೊತ್ತಿತ್ತೇ ರಾಮನಿಗೆ? ಎಂದಿಗೂ ಇಲ್ಲ. ಕೊನೆಯ ವರೆಗೂ ರಾಮ ಸೀತೆಯನ್ನು ತಿಳಿದುಕೊಳ್ಳಲಿಲ್ಲ.

ಬೇರೆಯವರ ಮಾತೇಕೆ, ನನ್ನ ಮಟ್ಟಿಗಂತೂ ಈ ಮಾತು ಇನ್ನೂ ನಿಜವಾಗಿದೆ. ಮದುವೆಯಾದಂದಿನಿಂದ, ಅವಳ ವ್ಯಕ್ತಿತ್ವದ ರಹಸ್ಯವೇನು ಎಂದು ನಾನು ಚಿಂತಿಸುತ್ತಲೇ ಇದ್ದೇನೆ. ಆದರೆ ಐನ್‌ಸ್ಟೈನನ ರಿಲೇಟಿವಿಟಿ ಸಿದ್ಧಾಂತದಂತೆ, ಅವಳ ಮನಸ್ಸು ಅಗಮ್ಯವಾಗಿಯೇ ಉಳಿದಿದೆ.

ಮದುವೆಯಾಗಿ ಹತ್ತು ವರ್ಷಗಳಾದರೂ ಅವಳ ಮೆಚ್ಚಿಗೆಯ ವಿಷಯವಾವುದೆಂಬುದು ನನಗೆ ತಿಳಿದಿಲ್ಲ. ಒಮ್ಮೆ ಇದ್ದ ಬೊಕ್ಕಸವನ್ನೆಲ್ಲ ಬರಿದುಮಾಡಿ ಎರಡು ಡಜನ್ ಕಪ್ಪುರದ ಬಳೆಗಳನ್ನುತಂದುಕೊಟ್ಟರೆ, ಅವನ್ನು ಹಾಕಿಕೊಂಡು ಒಲೆಯ ಮುಂದೆ ಕೂಡಲು ಶಕ್ಯವಿಲ್ಲವೆಂದು ನಿರಾಕರಿಸಿಬಿಟ್ಟಳು. ಇದರಿಂದ ತೀರ ನಿರಾಶನಾಗಿ ತನ್ನ ಮನಸ್ಸಿಗೆ ಬಂದದ್ದನ್ನೇ ತೆಗೆದುಕೊಳ್ಳಲಿ ಎಂದು ರೊಕ್ಕ ಕೊಡಹೋದರೆ, ತನಗೆ ಬೇಕಾಗಿದ್ದು ಹಣವಲ್ಲ ಎಂದು ನನ್ನನ್ನೇ ಬೆದರಿಸಿಬಿಟ್ಟಳು. ದಿನಾಲು ತಡವಾಗಿ ಮನೆಗೆ ಬಂದು, ಬೈಸಿಕೊಂಡು ಸಾಕಾಗಿ ಒಂದು ದಿನ ಬೇಗನೆ ಮನೆಗೆ ಹೋದರೆ ಅವಳೇ ಮನೆಯಲ್ಲಿರುವದಿಲ್ಲ. ಇದ್ದರೂ ಅಡಿಗೆಯಾಗಿರುವದಿಲ್ಲ. ಅದಕ್ಕಾಗಿ ನಾನು ಬೈಯ್ಯುವಂತೆಯೂ ಇಲ್ಲ. ಒಂದು ದಿನ ಮಾತ್ರ ಬೇಗ ಮನೆಗೆ ಬಂದ ನನಗೆ ಬೈಯಲು ಅಧಿಕಾರವಿಲ್ಲ. ಅಪರಾಧಿ, ಗಂಡ ಇವೆರಡೂ ಸಮಾನಾರ್ಥವುಳ್ಳ ಶಬ್ದಗಳೆಂದೇ ನಾನು ತಿಳಿದಿದ್ದೇನೆ.

ಹೆಂಡತಿಯ ವ್ಯಕ್ತಿತ್ವಕ್ಕಿರುವ ಅನಂತ ರೂಪಗಳನ್ನು ನೋಡಿಯೇ ನಾನು ವಿಸ್ಮಿತನಾಗಿದ್ದೇನೆ. ಅವಳು ಒಮ್ಮೆ ಸೀತೆಯಾಗುತ್ತಾಳೆ; ಮತ್ತೊಮ್ಮೆ ಮುನಿದರೆ ದ್ರೌಪದಿಯಾಗುತ್ತಾಳೆ; ನೀವು ನಿರಾಶರಾಗಿದ್ದರೆ ಸಾವಿತ್ರಿಯಾಗುತ್ತಾಳೆ. ಕೈಗೆ ರೊಕ್ಕ ಬಂದ ದಿನ, ಇಡೀ ತಿಂಗಳು ಅವಳು ಹಾಡುತ್ತಿದ್ದ ಬಯಕೆಯನ್ನು ಪೂರ್ಣಗೊಳಿಸೋಣವೆಂದು, ಅವಳು ಹೇಳಿದ ಒಡವೆಯನ್ನು ಕೊಂಡು ಮನೆಗೆ ಬಂದರೆ, ಅವಳ ಮೈಮೇಲೆ ಎಲ್ಲಿಲ್ಲದ ಅವತಾರ ಬಂದಿರುತ್ತದೆ. ಹೇಳಿದ ದಿನ ಊರಿಗೆ ಬರದೆ ನಾಲ್ಕು ದಿನ ತಡವಾಗಿ ಬಂದು, ಮನೆಗೆ ಬಂದರೆ ಇನ್ನೇನು ಪ್ರಳಯವಾದೀತೋ ಎಂದು ಭಯಗೊಂಡಿದ್ದರೆ, ಅವಳು ಮುಗುಳುನಗೆಯಿಂದ ಸ್ವಾಗತಿಸಿ ಅಭಯ ನೀಡುತ್ತಾಳೆ.

ಇಷ್ಟೆಲ್ಲ ಹೇಳಿದ್ದರ ಕಾರಣ ಇಷ್ಟೇ. ಯುಗ-ಯುಗಗಳೆಲ್ಲ ಪರಿತಪಿಸಿದರೂ ಗಂಡಿಗೆ ಇನ್ನೂ ತನ್ನ ಹೆಂಡತಿಯ ಪರಿಚಯವಾಗಿಲ್ಲ. 'ಗೃಹಿಣೀ ಸಚಿವಃ ಸಖೀ ಮಿಥಃ ಪ್ರಿಯಶಿಷ್ಯಾ ಲಲಿತೇ ಕಲಾವಿಧೌ' ಎಂದು ಕಾಲಿದಾಸ ಹೇಳಿದ ಹೆಂಡತಿಯ ವ್ಯಾಖ್ಯೆಯನ್ನು ಪರ್ಯಾಲೋಚಿಸಿದರೆ, ಕಾಳಿದಾಸನಿಗೆ ಮದುವೆಯಾಗಿತ್ತೋ ಇಲ್ಲವೋ ಸಂಶಯಬರುವಂತಿದೆ. ಅಥವಾ ಅವನದೇನು ತಪ್ಪು? ಎಷ್ಟು ಜನ ಮದುವೆಯಾದವರಿಗೇ ತಮ್ಮ ಹೆಂಡಂದಿರ ಪೂರ್ಣ ಪರಿಚಯವಾಗಿದೆ? ಒಬ್ಬರಾದ ಮೇಲೊಬ್ಬರಂತೆ ನಾಲ್ಕು ಹೆಂಡಂದಿರನ್ನು ಮದುವೆಯಾದ ನನ್ನ ಒಬ್ಬ ವೃದ್ಧ ಸ್ನೇಹಿತರನ್ನೇ ಈ ವಿಷಯವಾಗಿ ಕೇಳಿದೆ. ಎಷ್ಟು ವಯಸ್ಸಾದರೂ ಏನು, ಅವರೂ ನನ್ನಷ್ಟೇ ಅಜ್ಞಾನಿಗಳಾಗಿದ್ದಾರೆ.

ರೋಮ್ ಸಾಮ್ರಾಜ್ಯದ ಇತಿಹಾಸವನ್ನು ಬರೆದು ಅಮರನಾದ ಗಿಬನ್ ಹೇಳುತ್ತಿದ್ದನಂತೆ: 'ನನಗೆ ಆರು ಜನ ಹೆಂಡಂದಿರಾದರೂ ಬೇಕು: ಅವರಲ್ಲಿ ಒಬ್ಬಳು ಕಾಮಿನಿಯಾಗಿರಬೇಕು; ಒಬ್ಬಳು ಕಲಾಪ್ರವೀಣೆಯಾಗಿರಬೇಕು; ಇನ್ನೊಬ್ಬಳು ಸುಹೃದಯದ ಸ್ನೇಹಿತೆಯಾಗಿರಬೇಕು;

ಮತ್ತೊಬ್ಬಳು ಮನೆತನದ ಗೌರವವನ್ನು ಕಾಯುತ್ತಿರಬೇಕು; ಮನೆವಾಳ್ತೆಯಲ್ಲಿ ಜಾಣಳಾದವಳ ಪಾಲಿಗೆ ಮನೆಯ ಆಡಳಿತವಿರಬೇಕು; ಕೊನೆಯದಾಗಿ ಒಬ್ಬಳು ನನ್ನ ಶುಶ್ರೂಷೆ ಮಾಡುತ್ತಿರಬೇಕು. ಈ ಎಲ್ಲ ಗುಣಗಳೂ ಒಬ್ಬಳಲ್ಲಿಯೇ ಕೂಡಿದ್ದರೆ ಮದುವೆಯಾಗಲು ನನ್ನದೇನೂ ಅಡ್ಡಿಯಿಲ್ಲ.' ಗಿಬನ್ನನ ಈ ಜಂಬವನ್ನು ನೋಡಿ ಸ್ತ್ರೀಜಾತಿಯೇ ನಕ್ಕಿರಬೇಕು. ಈ ರೀತಿ ಹೆಮ್ಮೆ ತೋರಿಸಿದ ಗಂಡಂದಿರೆಲ್ಲ ತಮ್ಮ ಹೆಂಡಂದಿರ ಕೈಯಲ್ಲಿ ಮಣ್ಣು ಮುಕ್ಕಿದ್ದಾರೆ. ಎಷ್ಟೋ ಕಾಮಿನಿಯರನ್ನು ಅಂಗೈಯಲ್ಲಿರಿಸಿಕೊಂಡ ದುಷ್ಯಂತ ಕೊನೆಗೆ ಶಕುಂತಲೆಗೆ ಶರಣಾಗಲಿಲ್ಲವೇ? ಟಾಲ್‌ಸ್ಟಾಯನಂಥ ನಿರ್ಭೀತ ಲೇಖಕನು ಕೂಡ ಹೆಣ್ಣಿನ ಬಗ್ಗೆ ನಿನ್ನ ಅಭಿಪ್ರಾಯವೇನೆಂದು ಕೇಳಿದರೆ, 'ಅದನ್ನು ನಾನು ಈಗ ಹೇಳುವದಿಲ್ಲ. ಗೋರಿಯಲ್ಲಿ ಒಂದು ಕಾಲನ್ನಿಟ್ಟೇ ಹೇಳುತ್ತೇನೆ' ಎಂದು ನುಡಿದನಂತೆ. ಏಡನ್ನಿನ ನಂದನವನದಲ್ಲಿಯ ಆದಾಮ್‌ನಿಂದ ಹಿಡಿದು ಇಲ್ಲಿಯ ವರೆಗೆ ಎಲ್ಲ ಗಂಡಂದಿರೂ ಹೆಂಡತಿಯೆಂಬ ಈ ಮೋಹಕ ಸಮಸ್ಯೆಯನ್ನು ಬಿಡಿಸಲು ಪ್ರಯತ್ನಿಸುತ್ತಿದ್ದಾರೆ. ಇದಕ್ಕೇ ಜೀವನವೆಂದು ಹೆಸರಿರಬಹುದು.

ಇಷ್ಟೆಲ್ಲ ವಿಚಾರ ಮಾಡಿ ನಾನು ಒಂದು ಸಿದ್ಧಾಂತಕ್ಕೆ ಬಂದು ಮುಟ್ಟಿದ್ದೇನೆ. ಸಾಹಿತ್ಯದ ಪರಿಭಾಷೆಯಲ್ಲಿ ಹೇಳುವದಾದರೆ ಗಂಡು ರೋಮ್ಯಾಂಟಿಕ್ ಸಂಪ್ರದಾಯದವ. ಹೆಣ್ಣು ವಾಸ್ತವತೆಯ ಸಂಪ್ರದಾಯದವಳು. ಗಂಡನ ಚಟ, ನಡತೆ, ಅಭಿರುಚಿ, ಮನೆತನ, ಇತಿಹಾಸ, ಅವನ ಮೇಲಿರುವ ದೂರುಗಳು, ಅವನ ಸ್ನೇಹಿತರು ಇದೆಲ್ಲದರ ಮೇಲೆ ಹೆಂಡತಿಯಾದವಳು ತನ್ನ ಕಣ್ಣನ್ನಿಟ್ಟಿರುತ್ತಾಳೆ. ಆದರೆ ಗಂಡನಾದವನು ಹೆಂಡತಿಯ ಬಗ್ಗೆ ಏನೇನು ತಿಳಿದುಕೊಂಡಿರುತ್ತಾನೆ? ಬಹಳವಾದರೆ ಅವಳುಟ್ಟ ಸೀರೆಯ ಬಣ್ಣ, ಅವಳ ಮುಡಿಯಲ್ಲಿಯ ಹೂವು, ಅವಳ ಮುಗುಳು ನಗೆ, ಹುಬ್ಬು-ಗಂಟು, ಕಣ್ಣೀರು ಇಷ್ಟನ್ನು ದಾಟಿ ಅವನ ತಿಳಿವಳಿಕೆ ಹೋಗಲಾರದು. ಬೇಕಾದವರು ತಮ್ಮ ಹೆಂಡತಿಯ ಗೆಳತಿಯರೆಷ್ಟು ಜನರು ಎಂಬುದನ್ನು ಎಣಿಸಿ ಹೇಳಲಿ ಅದು ಹೋಗಲಿ, ತಮ್ಮ ಹೆಂಡತಿಯ ತವರ ಮನೆಯ ಟ್ರಂಕಿನಲ್ಲಿ ಸೀರೆಗಳೆಷ್ಟಿವೆ ಎಂಬುದನ್ನಾದರೂ ಹೇಳಲಿ. ಸಾಧ್ಯವೇ ಇಲ್ಲ. ಗಂಡನ ಕನಸುಗಾರಿಕೆಯನ್ನು ಚೆನ್ನಾಗಿ ಅರಿತ ಹೆಂಡತಿ, ಅವನಿಗೆ ಸೌಂದರ್ಯವನ್ನಷ್ಟೇ ನೀಡಿ ತನ್ನ ವ್ಯಕ್ತಿತ್ವವನ್ನು ಸ್ವತಂತ್ರವಾಗಿ ಕಾಪಾಡಿಕೊಂಡು ಬಂದಿದ್ದಾಳೆ.

ಈ ಸಂದರ್ಭದಲ್ಲಿ ನನಗೆ ರವೀಂದ್ರರ ಒಂದು ಕಥೆ ನೆನಪಾಗುತ್ತದೆ. ಒಬ್ಬ ರಾಜಕುಮಾರನಿಗೆ ಅಪ್ಸರೆಯನ್ನೇ ಮದುವೆಯಾಗುವ ಆಸೆಯಿತ್ತಂತೆ. ಒಂದು ದಿನ ಒಂದು ಕಾಡಿಗೆ ಬೇಟೆಯಾಡಲು ಹೋದ. ಅಲ್ಲಿ ನದಿಯ ದಂಡೆಯ ಮೇಲೆ ನೀರಾಟವಾಡುತ್ತಿದ್ದ ಚೆಲುವೆಯೊಬ್ಬಳನ್ನು ನೋಡಿದ. ಕಣ್ಣಿಗೆ ಬಲೆ ಹಾಕುವ ರೂಪ ಅದು! ನೋಡಿದವನೇ ಆಕರ್ಷಿತನಾಗಿ ಅವಳ ಹತ್ತಿರ ಬಂದು ಕೇಳಿದ. 'ನೀನೇ ಅಪ್ಸರೆಯೇನು ?' ಆಕೆ ಮಾತನಾಡದೆ ನಾಚಿಕೆಯಿಂದ ತಲೆತಗ್ಗಿಸಿದಳು. ಅವಳ ಮೌನಕ್ಕೆ ಅವನು ವಿಪರೀತ ಅರ್ಥ ಮಾಡಿದ. ಅವಳು ವೇಷಾಂತರ ಹೊಂದಿದ ಅಪ್ಸರೆಯಿರಬೇಕೆಂದು ತಿಳಿದುಕೊಂಡ. ಅದೇ ಭ್ರಮೆಯಲ್ಲಿ ಅವಳನ್ನು ತನ್ನ ಜೊತೆಯಲ್ಲಿ ನಗರಕ್ಕೆ ಕರೆದುಕೊಂಡು ಬಂದ. ಜನರೆಲ್ಲ ಈ ಅಪ್ಸರೆಯನ್ನು ನೋಡಬಂದರು. ಆದರೆ ಅವಳಲ್ಲಿ ಅಂಥ ಅಲೌಕಿಕತೆಯನ್ನೇನೂ ಅವರು ಕಾಣಲಿಲ್ಲ. ಅವರಿಗೆಲ್ಲ ಆ ರಾಜಕುಮಾರನದು ಒಂದೇ ಉತ್ತರ. 'ಅವಳಿನ್ನೂ ತನ್ನ ನಿಜರೂಪವನ್ನು ವ್ಯಕ್ತಪಡಿಸಿಲ್ಲ' ಎಂದು. ದಿನವೂ ಆಕೆಯನ್ನು 'ನಿನ್ನ ಅಪ್ಸರ ಸೌಂದರ್ಯವನ್ನು ತೋರು' ಎಂದು ಪೀಡಿಸುತ್ತಿದ್ದ. ಅವಳು ಬೇಸತ್ತು ಕೊನೆಗೆ ಹೇಳಿದಳಂತೆ: 'ಬರುವ ಕಾರ್ತಿಕ ಹುಣ್ಣಿವೆಯ ಮಧ್ಯರಾತ್ರಿ ನನ್ನ ಮಂದಿರಕ್ಕೆ ಬಾ. ಅಪ್ಸರೆಯ ಅಲೌಕಿಕ ದರ್ಶನ ನಿನಗೆ ಕಾದಿದೆ' ಎಂದು. ರಾಜಕುಮಾರ ಆನಂದದಿಂದ ಉಬ್ಬಿಹೋದ. ಹುಣ್ಣಿವೆ ಬಂತು. ಪೂರ್ಣಚಂದ್ರ, ಜಗತ್ತಿನ ಸೌಂದರ್ಯದ ಕನಸು

ಗಳ ಸಫಲತೆಯಂತೆ ನಡುಬಾನಿಗೇರಿದ. ರಾಜಕುಮಾರ ಅಪ್ಸರೆಯನ್ನು ಕಾಣುವ ತವಕದಿಂದ ಆಕೆಯ ಮಂದಿರದ ಕಡೆಗೆ ನಡೆದ. ಆ ಮಂದಿರದ ಉಪ್ಪರಿಗೆಗೆ ಹೋಗಬೇಕಾದರೆ ಏಳು ಬಾಗಿಲುಗಳನ್ನು ದಾಟಿ ಹೋಗಬೇಕಾಗುತ್ತಿತ್ತು. ನಡುಗುತ್ತಿರುವ ಹೃದಯದಿಂದ ರಾಜಕುಮಾರ ಏಳು ಬಾಗಿಲುಗಳನ್ನು ದಾಟಿ ಉಪ್ಪರಿಗೆಗೆ ನಡೆದ. ಅಲ್ಲಿ ಅವನು ಕಂಡದ್ದೇನು ? ಪುಷ್ಪಶಯ್ಯೆ ಶೂನ್ಯವಾಗಿತ್ತು. ಉಳಿದ ಶೃಂಗಾರಸಾಧನಗಳು ಮೂಕವಾಗಿದ್ದವು. ಬಾನಿಗೆ ಮೈತೆರೆದ ಉಪ್ಪರಿಗೆಯ ಮೇಲೆ ಬೆಳುದಿಂಗಳೊಂದೇ ಆಟವಾಡುತ್ತಿತ್ತು. ನಿರಾಶೆಯ ಸಿಡಿಲು ಬಡಿದಿದ್ದರೂ ರಾಜಕುಮಾರ ನೊಂದ ದನಿಯಲ್ಲಿ ನುಡಿದನಂತೆ: 'ಹೌದು ಅಪ್ಸರೆಯರು ಅದೃಶ್ಯರಾಗಿಯೇ ಇರುತ್ತಾರೆ. ಅವರನ್ನು ಕಾಣುವ ಕಣ್ಣನ್ನು ನಾನಿನ್ನೂ ಪಡೆದಿಲ್ಲ'

ಈ ಕತೆಯ ಕೋಮಲತೆಯ ಹಿಂದೆ ಒಂದು ಸೂಕ್ಷ್ಮ ವಿಡಂಬನವಿದೆ. ಅದರ ಹಿಂದೆ ಒಂದು ತೀವ್ರ ವ್ಯಥೆಯಿದೆ. ಗಂಡಿನ ಕಣ್ಣಿಗೆ ಹೆಣ್ಣು ಯಾವುದೋ ದೈವಿಕ ಸೌಂದರ್ಯದ ಕನಸು ನನಸಾದಂತೆ ಕಾಣುತ್ತಾಳೆ. ಆದರೆ ಹತ್ತಿರ ಹೋದರೆ ಕನಸು ಇನ್ನೂ ಕನಸಾಗಿಯೇ ಉಳಿದಿರುತ್ತದೆ. ಕೊನೆಗೆ ಅದೇ ಸತ್ಯವೆಂಬ ಸಿದ್ಧಾಂತಕ್ಕೆ ಬಂದು ಮುಟ್ಟುತ್ತಾನೆ. ಆದರೆ ಇದರಲ್ಲಿಯೂ ಎಂಥ ಆಕರ್ಷಣೆಯಿದೆ! 'ಮಾಯೆ ಮೈವೆತ್ತು ನಟಿಸುವಳೊ ಹೆಣ್ಣಲಿ ನಿಂತು' ಎಂದು ಅಂಬಿಕಾತನಯದತ್ತರು ನುಡಿದಿದ್ದಾರೆ.

ಹೆಣ್ಣಿನ ನೆಲೆಯನ್ನರಿಯಲು ಗಂಡು ಮಾಡಿದ ಪ್ರಯತ್ನಗಳಿಗೆ ಮಿತಿಯೇ ಇಲ್ಲ. ಶಾ ಹೇಳಿದಂತೆ ಗಂಡು ಹುಟ್ಟು ಕಲಾವಿದ. ಕಾವ್ಯದಲ್ಲಿ, ಚಿತ್ರದಲ್ಲಿ, ಶಿಲ್ಪದಲ್ಲಿ ಹೆಣ್ಣಿನ ವ್ಯಕ್ತಿತ್ವವನ್ನು ಅಮರವಾಗಿಸಿದ್ದಾನೆ. ಗಂಡಿನ ಈ ಕಲಾಪ್ರತಿಭೆಗೆ ಹೆಣ್ಣು ಚಿರಂತನ ವಸ್ತುವಾಗಿದ್ದಾಳೆ. ಮತ್ತು ಕಲೆಯ ಎಲ್ಲ ವಸ್ತುಗಳಂತೆಯೇ ಕಲಾವಿದನಿಗೆ ಅಪರಿಚಿತಳಾಗಿದ್ದಾಳೆ, ಅಚಿಂತ್ಯವಾಗಿದ್ದಾಳೆ. ಹಣೆಯ ಮೇಲಿನ ದೈವರೇಷೆಯಂತೆ ಯಾವಾಗಲೂ ಗೂಢವಾಗಿಯೇ ಉಳಿದಿರುವ ಹೆಣ್ಣಿನ ಹೃದಯವನ್ನರಿಯಲು ಗಂಡು ಅನಂತ ಸಾಹಸಕ್ಕೆ ಕೈಹಾಕಿದ್ದಾನೆ; ಅವಳಿಗಾಗಿ ಸಾಮ್ರಾಜ್ಯಗಳನ್ನು ನಿರ್ಮಿಸಿದ್ದಾನೆ, ಹಾಳುಗೆಡವಿದ್ದಾನೆ; ತಾಜಮಹಲನ್ನೂ ಕಟ್ಟಿದ್ದಾನೆ. ಆದರೆ ಏನು ಮಾಡಿದರೂ ಮೇಘದೂತದ ಯಕ್ಷನಿಗೆ ಯಕ್ಷಿ ದೂರವಾಗಿದ್ದಾಳೆ. ಕನಸಿನಂತೆ ಅವಳ ಚೆಲುವು ಕೆಣುಕುತ್ತಿದೆ, ಆದರೂ ದೂರವಾಗಿದೆ. ರವೀಂದ್ರರ ಕಥೆಯಲ್ಲಿಯ ರಾಜಕುಮಾರನಂತೆ ಪ್ರತಿಯೊಬ್ಬ ಮನುಷ್ಯನೂ ಕಾಣದ ಅಪ್ಸರೆಯ ಬೆನ್ನು ಹತ್ತಿ ನಡೆದಿದ್ದಾನೆ. 'Husband is the first animal domesticated by woman' (ಹೆಣ್ಣು ಈಲು ಮಾಡಿದ ಮೊದಲನೆಯ ಪ್ರಾಣಿಯೆಂದರೆ ಗಂಡ) ಎಂದು ಹೇಳುತ್ತಾರೆ. ಅದು ನಿಜವೇ ಇರಬೇಕು. ಅಥವಾ ಹೆಂಡತಿಯ ಹೃದಯ ಗಂಡನಿಗೆ ತಿಳಿದುಬಿಟ್ಟರೆ ಜೀವನದಲ್ಲಿ ಸ್ವಾರಸ್ಯವೇ ಉಳಿಯುವದಿಲ್ಲವೇನೋ! ನಮಗೆ ತಿಳಿಯದ ಭಾಗದಿಂದಲೇ ನಮ್ಮ ಜೀವನಕೆ ರುಚಿ ಹೆಚ್ಚು.



ವ್ಯಕ್ತಿಸ್ವಾತಂತ್ರ್ಯವನ್ನು ಸರಕಾರ ಎಂದಿಗೂ ತರಲಾರದು. ಸರಕಾರಗಳ ಅಂಕೆಗೊಳಗಾದ ಪ್ರಜೆಗಳಿಂದಲೇ ಅದು ಯಾವಾಗಲೂ ತಲೆಯೆತ್ತಿದೆ. ವ್ಯಕ್ತಿಸ್ವಾತಂತ್ರ್ಯದ ಇತಿಹಾಸ ಪ್ರತಿಭಟನೆಯ ಇತಿಹಾಸವೇ. ವ್ಯಕ್ತಿ ಸ್ವಾತಂತ್ರ್ಯದ ಇತಿಹಾಸ ಸರಕಾರದ ಅಧಿಕಾರಗಳಿಗೆ ಹಾಕಿದ ಮಿತಿಗಳ ಇತಿಹಾಸವಲ್ಲದೆ ಅಧಿಕಾರದ ವಿಸ್ತರಣೆಯ ಇತಿಹಾಸವಲ್ಲ.

—ವುಡ್ರೋ ವಿಲ್ಸನ್

ಎಲ್ಲ ದೇಶಗಳಲ್ಲಿಯೂ ಮನುಷ್ಯರು ಸಾಯುವ ಬಗೆ ಒಂದೇ,
ಆದರೆ ಅವರನ್ನು 'ಕಳಿಸುವ' ರೀತಿಗಳು ಬೇರೆ ಬೇರೆ

# ಶವ ಸಂಸ್ಕಾರದ ಬಗೆಬಗೆಯ ರೀತಿಗಳು

**ಬಳ್ಕೂರು ಸುಬ್ರಾಯ ಅಡಿಗ**

"ಸತ್ತ ಹೆಣ ಎತ್ತ ಬಿದ್ದರೇನು?" ಎನ್ನುವ ವಾಡಿಕೆಯಿದ್ದರೂ ನಾಗರಿಕತೆಯ ಪ್ರಾರಂಭದಿಂದ ಶವಸಂಸ್ಕಾರದ ವಿವಿಧ ಸಂಪ್ರದಾಯಗಳನ್ನು ಮನುಷ್ಯ ಆಚರಿಸುತ್ತ ಬಂದಿದ್ದಾನೆ. ಸತ್ತವನು ಪರಲೋಕದಲ್ಲಿ ಇನ್ನೂ ಬದುಕಿದ್ದಾನೆ ಎಂಬ ಭಾವನೆ ಈ ಎಲ್ಲ ಸಂಪ್ರದಾಯಗಳ ಮೂಲವಿದ್ದರೂ ಈ "ವಿಧ್ಯುಕ್ತ" ಸಂಸ್ಕಾರಗಳು ಬಲು ಕೌತುಕದವಾಗಿವೆ.

ಪ್ರಾಚೀನ ಬೆಬಿಲೋನಿಯದಲ್ಲಿ ಶವವನ್ನು ಒಂದು ವಿಶೇಷ ತರದ ಪೆಟ್ಟಿಗೆಯಲ್ಲಿಡುತ್ತಿದ್ದರು. ಸುಲಭವಾಗಿ ಬೆಂಕಿ ತಗಲುವಂಥ ಈ ಪೆಟ್ಟಿಗೆಯ ಮೇಲೆ ಉರಿಯುವ ಕಟ್ಟಿಗೆಗಳನ್ನು ಒಟ್ಟುತ್ತಿದ್ದರು. ಶವವು ಹೀಗೆ ಸುಟ್ಟು ಹೋಗುತ್ತಿತ್ತು. ನೇರವಾದ ದಹನ ಕ್ರಿಯೆಯು ಅಲ್ಲಿ ಪ್ರಚಾರದಲ್ಲಿದ್ದಿಲ್ಲವೆಂದಲ್ಲ; ಶವದ ಪೆಟ್ಟಿಗೆಯ ಪದ್ಧತಿ ಹೆಚ್ಚು ಬಳಕೆಯಲ್ಲಿತ್ತು ಅಷ್ಟೆ.

ಪ್ರಾಚೀನ ಈಜಿಪ್ತದ ಸಮಾಧಿಗಳ ಮಾದರಿಯು ವೈಭವಪೂರ್ಣವಾಗಿದ್ದಷ್ಟೇ ಶ್ರೇಷ್ಠವೂ ಆಗಿತ್ತು. ಶರೀರ ಆತ್ಮಗಳ ಸಂಯೋಗದಿಂದ ಮನುಷ್ಯನು ಉಂಟಾಗುತ್ತಾನೆ. ಸತ್ತವನ ಶರೀರವನ್ನು ಸುರಕ್ಷಿತವಾಗಿರಿಸಿ ಅದಕ್ಕೆ ಜೀವಂತ ವ್ಯಕ್ತಿಗೆ [illegible]ವಾಗಿದ್ದ ವಸ್ತುಗಳನ್ನು ಒದಗಿಸಿದರೆ ಪರಲೋಕದಲ್ಲಿರುವ ವ್ಯಕ್ತಿಯ ಆತ್ಮ ಚಿರಂಜೀವಿಯಾಗುತ್ತದೆ, ಎಂದು ಅವರ ವಿಶ್ವಾಸ. ಈ ವಿಶ್ವಾಸವನ್ನು ಅನುಸರಿಸಿ ಅವರು ಮೃತನ ಐಹಿಕ ಅಂತಸ್ತಿಗನುಸರಿಸಿ ತರತರದ ಸಮಾಧಿಗಳನ್ನು ರಚಿಸಿದರು. ಶವಗಳನ್ನು ಕೊಳೆಯದಂತೆ ಕಾಯ್ದಿಡುವ ಒಂದು ಕಲೆಯನ್ನು ರೂಪಿಸಿದರು. ಇದರ ಗೂಢ ಈಜಿಪ್ತದ ಸಂಸ್ಕೃತಿಯೊಡನೆ ನಷ್ಟವಾಗಿ ಇಂದಿಗೂ ವಿಜ್ಞಾನಿಗಳಿಗೆ ಸಮಸ್ಯೆಯಾಗಿದೆ. ಈ ಕಲ್ಪನೆಯಿಂದಲೇ ಇದಿನವರನ್ನು ಕೂಡ ಅಚ್ಚರಿಗೊಳಿಸುವ ಪಿರಾಮಿಡ್ಡುಗಳನ್ನು ಪ್ರಾಚೀನ ಇಜಿಪ್ಶನ್ನರು ನಿರ್ಮಿಸಿದರು. ಅವುಗಳಲ್ಲಿ ತಮ್ಮ ರಾಜರ, ರಾಣಿಯರ, ಶ್ರೀಮಂತರ ಹೆಣಗಳನ್ನಿಟ್ಟು ಅವರು ಶಾಂತಿಯಿಂದ ಅಲ್ಲಿ ಉಳಿಯುವಂತೆ ಏರ್ಪಡಿಸಿದರು. ಅವುಗಳಲ್ಲಿ ಅವರವರ ಪ್ರೀತಿಯ ವಸ್ತುಗಳಾದ ಧನುರ್ಬಾಣ, ರಥ, ಅನ್ನ, ಮದ್ಯ ಮೊದಲಾದವನ್ನೂ ಪದ್ಧತಿಯಂತೆ ಇರಿಸುತ್ತಿದ್ದರು.

"ಸತ್ತ ಮೇಲೆ ರಾಜನು ಪೂರ್ವಕ್ಕೆ ಹೋಗುತ್ತಾನೆ. ದಿಗಂತದುದ್ದಕ್ಕೂ ಚಾಚಿದ [illegible] ಸರೋವರವನ್ನು ಅವನು ದಾಟಬೇಕಾಗುತ್ತದೆ. [illegible] 'ಇಲ್ಲಿಗೆ [illegible]' [illegible] [illegible]. [illegible] [illegible] [illegible] ನಕ್ಷತ್ರದಂತೆ ಇರುವರು." ಈ ವಿಶ್ವಾಸವು ಪಿರಾಮಿಡ್ಡುಗಳಲ್ಲಿಯ ಬರಹಗಳಿಂದ ವ್ಯಕ್ತವಾಗುತ್ತದೆ.

ಹಿಂದೀ 'ಗುಲದಸ್ತಾ' ಆಧಾರದಿಂದ

ಪುರಾತನ ಯಹೂದ್ಯರಲ್ಲಿ ಇಂದಿನಂತೆಯೇ ಶವಗಳನ್ನು ಹೂಗಿವ ಪದ್ಧತಿಯು ಬಳಕೆಯಲ್ಲಿತ್ತು. ಹಿಂದಿನ ಕಾಲದ ಕ್ರೈಸ್ತರು ಸಿಂಹಳೀಯರಂತೆ ಹೆಣಗಳನ್ನು ಕಾಡಿನಲ್ಲಿ ಮಲಗಿಸಿಬಿಡುತ್ತಿದ್ದರು.

ಚೀನಿಯರು ಶವದೆದುರು ಸೆರೆ, ಮೇಣದಬತ್ತಿ ಆಹಾರ ಸಾಮಗ್ರಿಗಳನ್ನಿಟ್ಟು ಬರುತ್ತಾರೆ. ಅವರು ಮೆರವಣಿಗೆಯಿಂದ ಮನೆಯೆದುರು ಶವವನ್ನು ತಂದು ಬಾಗಿಲಲ್ಲಿ ಹಾಸಿಗೆಯ ಮೇಲೆ ಮಲಗಿಸಿ ಅದರ ಬಾಯಲ್ಲಿ ಬಿಳಿಯ ಕಾಗದದ ಚೂರನ್ನು ಇರಿಸುತ್ತಾರೆ. ಹಾಸಿಗೆಯ ತುದಿಯಲ್ಲಿ ತಾವರೆಯ ಹೂವಿನ ಆಕೃತಿಯನ್ನು ಚಿತ್ರಿಸಲಾಗುವುದು. ಅನಂತರ ಹೆಣದ ಕಾಲುಗಳನ್ನು ಮಡಚಿ ಪದ್ಮಾಸನ ಹಾಕಿದಂತೆ ಮಾಡುತ್ತಿದ್ದರು. ಮೃತನು ಬುದ್ಧನಾಗಿ ಕಮಲದ ಮೇಲೆ ಕುಳಿತಿ-ರಲೆಂಬ ಅಪೇಕ್ಷೆಯೇ ಇದಕ್ಕೆ ಕಾರಣ.

ಜಪಾನಿನಲ್ಲಿ ೮ನೇ ಶತಮಾನದಲ್ಲಿ ದಹನ ಪದ್ಧತಿ ಆರಂಭವಾಯಿತು. ಅಲ್ಲಿನ ಬೌದ್ಧರು ವಿಜೃಂಭಣೆಯಿಂದ ಶವದ ಮೆರವಣಿಗೆ ಮಾಡುತ್ತಾರೆ.

ಟಿಬೇಟಿನಲ್ಲಿ ದಹನದ ಸೌಭಾಗ್ಯ ಉಚ್ಚ ವರ್ಗದ ಲಾಮಾ ಗುರುಗಳ ಶವಗಳಿಗಷ್ಟೇ ದೊರೆಯುತ್ತದೆ. ಅವನ್ನು ಸುಡುವಾಗ ಧ್ಯಾನಮಗ್ನ ಬುದ್ಧನಂತೆ ಚಿತೆಯ ಮೇಲೆ ಕುಳ್ಳಿರಿಸುತ್ತಾರೆ. ಅಲ್ಲಿ ಪ್ರಚಲಿತವಿರುವ ಐದು ಕ್ರಮಗಳಲ್ಲಿ ಶವ ಸಂಸ್ಕಾರದ ಒಂದು ಪದ್ಧತಿಯು ಸ್ವಾರಸ್ಯವಾಗಿದೆ. ಶವಕ್ಕೆ ಹಿಂದುಮುಂದಾಗಿ ಬಟ್ಟೆ ತೊಡಿಸಿ ಕಾಲು ಮಡಚಿ ಎದೆಯ ಮೇಲೆ ಒತ್ತಿಟ್ಟು ಮೂಟೆಯಂತೆ ಮಾಡಿ ಒಂದು ಕಡಾಯಿಯಲ್ಲಿಡುತ್ತಾರೆ. ಈ ಸ್ಥಿತಿಯಲ್ಲಿ ಒಂದು ವಾರ ಅವನ ಶ್ರಾದ್ಧವಿಧಿ ಜರಗಿದ ನಂತರ ಆ ಕಡಾಯಿಯನ್ನು ತೊಳೆದು ಅದರಲ್ಲಿ ಚಹಾ ತಯಾರಿಸಿ ಶ್ರಾದ್ಧಕ್ಕೆ ಬಂದ ಜನರಿಗೆ ಕೊಡುವರು

"(೧) ದೇಹವನ್ನು ಎತ್ತರವಾದ ಬೆಟ್ಟದ ಮೇಲೊಯ್ದು ಕೈಕಾಲುಗಳನ್ನು ಕತ್ತರಿಸಬೇಕು. ಹೃದಯ ಶ್ವಾಸಕೋಶಗಳನ್ನು ನರಿ ನಾಯಿಗಳು ಸುಲಭವಾಗಿ ಪಡೆಯಲು ಸಾಧ್ಯವಾಗುವಂತೆ ಚೆಲ್ಲಿಬಿಡಬೇಕು. (೨) ಶರೀರವನ್ನು ಯಾವುದಾದರೂ ಪವಿತ್ರ ನದಿಗೆಸೆಯಬೇಕು. ದೇಹದ ಮಾಂಸವನ್ನು ಮೀನುಗಳು ತಿನ್ನುವಂತಿರಲಿ. (೩) ಶರೀರವನ್ನು ನೆಲದಲ್ಲಿ ಹುಗಿದರೆ ನೆಲದೊಳಗಿನ ಹುಳುಗಳಿಗೆ ಆಹಾರ ದೊರೆತಂತಾಗುವದು." ಇವು ಟಿಬೇಟಿನ ಒಂದು ಪ್ರಾಚೀನ ಪುಸ್ತಕದಲ್ಲಿರುವ ಶವಸಂಸ್ಕಾರ ವಿಧಿಗಳು.

ಮುಸ್ಲಿಮರು ಹೆಣಗಳನ್ನು ಹುಗಿಯುತ್ತಾರೆ. ಅವರು, ಹೆಣದ ಆಕಾರಕ್ಕೆ ತಕ್ಕಂತೆ ವಿಸ್ತಾರವಾದ ಹೊಂಡವನ್ನು ತಯಾರಿಸುವರು. ಈ ಸಮಾಧಿಯಲ್ಲಿ ಆರಾಮವಾಗಿ ಕುಳಿತು ಮೃತನು ದೇವದೂತರ ಪ್ರಶ್ನೆಗಳಿಗೆ ಉತ್ತರ ಕೊಡುವ-ನೆಂದು ಅವರ ವಿಶ್ವಾಸ. ಪಾರಸಿಕರು ಶವದ ಎಲ್ಲ ಬಟ್ಟೆಬರೆಗಳನ್ನು ಕಳಚಿ ಅದನ್ನು ನಗ್ನಾ-ವಸ್ಥೆಯಲ್ಲಿ ಕಲ್ಲು, ಮಣ್ಣು ಇಟ್ಟಿಗೆಗಾರೆಗಳ ಅಟ್ಟಳಿಗೆಯ ಮೇಲೆ ಇಟ್ಟುಬಿಡುವರು. ಗಿಡು-ಗಗಳಿಗೆ ಅವನ್ನು ತಿನ್ನಲು ಅನುಕೂಲವಾಗಲೆಂದು ಅವರು ಹೀಗೆ ಮಾಡುತ್ತಾರೆ. ಹೆಣ ತಿನ್ನುವ ಹಕ್ಕಿಗಳನ್ನು ನಿಸರ್ಗದ ಹೊಲೆಯ-ರೆಂದು ಅವರು ನಂಬುತ್ತಾರೆ.

ಆಸ್ಟ್ರೇಲಿಯದ ಕೆಲ ಜನಾಂಗಗಳಲ್ಲಿ ಹೆಣದ ಚರ್ಮವನ್ನು ಸುಲಿದುಬಿಡುವ ರೂಢಿಯಿದೆ. ಪ್ರಸವದ ವೇಳೆ ಸಾವಿಗೀಡಾಗುವ ಹೆಂಗಸರ ಹೆಣಗಳನ್ನು ಹುಗಿವ ಪದ್ಧತಿ ಪಶ್ಚಿಮ ಆಫ್ರಿಕದಲ್ಲಿದೆ. ಇಂತಹ ಹೆಂಗಸರು ದೈವಶಾಪದಿಂದ ಸತ್ತಿರುವರೆಂದು ಅಲ್ಲಿನ ಜನರ ನಂಬಿಕೆ. ಪಶ್ಚಿಮ ಆಫ್ರಿಕದ ಕೆಲ ಜಾತಿಗಳಲ್ಲಿ ಹೆಣವನ್ನು ನೀರಲ್ಲಿ ಹುಗಿಯುವುದು ಗೌರವದ ಪದ್ಧತಿಯೆಂದು ಪರಿಗಣಿಸುವವರೂ ಇದ್ದಾರೆ.

ಭಾರತದಲ್ಲಿ ವೇದಕಾಲಕ್ಕಿಂತ ಮೊದಲೂ ದಹನ ಕ್ರಿಯೆಯೇ ಸರ್ವಸಾಧಾರಣವಾಗಿತ್ತು. ಪುರಾತನ ಕಾಲದ ಬೂದಿಯಾದ ಎಲುಬುಗಳಿಂದಲೂ ಶವದ ಬೂದಿ ತುಂಬಿ ಹುಗಿದಿಟ್ಟ ಪಾತ್ರೆಗಳಿಂದಲೂ ಈ ವಿಷಯ ಗೊತ್ತಾಗುತ್ತದೆ. ಹಾಗೇ ಹೆಣವನ್ನು ಕಾಡು ಪ್ರಾಣಿಗಳಿಗೆ ಆಹಾರವಾಗಿ ಕೊಟ್ಟ ಉದಾಹರಣೆಗಳೂ ಇಲ್ಲದಿಲ್ಲ. ಉಳಿದ ಎಲುಬುಗಳನ್ನು ಹೂಳುತ್ತಿದ್ದರು.

ವೈದಿಕ ಕಾಲದಲ್ಲಿ ಹೆಣವನ್ನು ಹುಗಿಯು

ವುದು, ಸುಡುವುದು, ಮತ್ತು ಒಣಗಿಸುವುದು ಆರ್ಯರ ಸಂಪ್ರದಾಯಗಳಾಗಿದ್ದುವು. ಶವಗಳನ್ನು ಸುಟ್ಟ ಹಾಗೂ ಸುಡದೇ ಬಿಟ್ಟ ಉಲ್ಲೇಖಗಳು ವೇದದಲ್ಲಿ ದೊರೆಯುತ್ತವೆ. ಸುಡದ ಹೆಣವನ್ನು ಹುಗಿಯುತ್ತಿದ್ದರು ಇಲ್ಲವೆ ಒಗೆದುಬಿಡುತ್ತಿದ್ದರು.

ವೀರ ಯೋಧರ ಶವದೊಟ್ಟಿಗೆ ಅವರ ಪತ್ನಿಯೂ ಬಂಧು ಬಾಂಧವರೂ ಸುಸಜ್ಜಿತ ಪೋಷಾಕು ಧರಿಸಿ ಮಸಣಕ್ಕೆ ಹೋಗುತ್ತಿದ್ದರು. ಅಲ್ಲೊಂದು ಸಮಾಧಿಯಲ್ಲಿ ಅದನ್ನು ಮಲಗಿಸಿ ಮುಚ್ಚುತ್ತಿದ್ದರು.

ದಹನಕ್ರಿಯಾ ಪದ್ಧತಿಯಲ್ಲಿಯೂ ಮೆರವಣಿಗೆಯ ಈ ಕ್ರಮವು ಅನುಸರಿಸಲ್ಪಡುತ್ತಿತ್ತು. ಮೃತನ ಮಗನು ಸ್ನಾನ ಮಾಡಿಸಿ ಚಿತೆಯ ಮೇಲಿಟ್ಟ ಶವದ ಬಲಗಡೆ ಕುಳಿತು 'ಬಲಿ' ಯ ಪ್ರಸ್ತಾಪವೆತ್ತುವನು. ಶವದೊಟ್ಟಿಗೆ ನೆಂಟರಿಷ್ಟರೆಲ್ಲ ಸ್ಮಶಾನಕ್ಕೆ ಹೋಗುವ ಪದ್ಧತಿ ಬಳಕೆಗೆ ಬಂತು. ಹಿರಿಯರು ತಮ್ಮ ಭುಜದ ಮೇಲೆ ಚಟ್ಟವನ್ನು ಹೊತ್ತು ನಡೆಯುತ್ತಿದ್ದರು. ಕೆಲವೊಮ್ಮೆ ಎತ್ತಿನ ಗಾಡಿಯಲ್ಲೂ ಒಯ್ಯುತ್ತಿದ್ದರು. ಶವದ ಹಿಂದೆ ಒಂದು ಕಪ್ಪು ದನವನ್ನಾಗಲಿ ಆಡನ್ನಾಗಲಿ ನಡೆಸುವ ಪದ್ಧತಿಯಿತ್ತು.

ಒಂದು ಪೆಟ್ಟಿಗೆಯಲ್ಲಿ ಶವವನ್ನಿಟ್ಟು ಅದರಲ್ಲಿ ಬೆಲೆಯುಳ್ಳ ಆಭರಣಗಳನ್ನೂ ಬಟ್ಟೆಬರೆಯನ್ನೂ ಪರಲೋಕದಲ್ಲಿ ಆತನ ಉಪಯೋಗಕ್ಕಾಗಿ ಇಡುತ್ತಿದ್ದರೆಂದು ಅಥರ್ವ ವೇದದಿಂದ ತಿಳಿಯುತ್ತದೆ. ಚಿತಾಭಸ್ಮವನ್ನು ಸುರಕ್ಷಿತವಾಗಿಡುವ ಪದ್ಧತಿಯೂ ಇತ್ತು.

ಮೌರ್ಯರ ಕಾಲಕ್ಕೂ ಮೊದಲು ಸಾಮಾನ್ಯರ ಹೆಣವನ್ನು ಸಾರ್ವಜನಿಕ ಸ್ಥಳದಲ್ಲಿ ಬಿಸುಡುತ್ತಿದ್ದರು. ಆದರೆ ಪ್ರತಿಷ್ಠಿತರ ಉತ್ತರಕ್ರಿಯೆಯು ದಹನದ ಮೂಲಕವೇ ನಡೆಯುತ್ತಿತ್ತು. ಅವರನ್ನು ದಹನ ಮಾಡಿದಲ್ಲಿ 'ದಗೋಬಾ' ಸ್ಥಾಪಿಸುತ್ತಿದ್ದರು.

"ಮಹಾಗುರು ಕೇಶವನ ಶವವನ್ನು ಸುಂದರವಾಗಿ ಅಲಂಕರಿಸಿದ್ದರು. ಅನಂತರ ಅದನ್ನು ಒಂದು ಕಬ್ಬಿಣದ ಪಾತ್ರೆಯಲ್ಲಿ ಮುಚ್ಚಿ ಅದನ್ನು ಉರಿಯುವ ಒಲೆಯ ಮೇಲೆ ಇಟ್ಟರು. ಶವವು ಸುಟ್ಟು ಕರಕಾದಾಗ ಎಲುಬನ್ನು ದಗೋಬಾ ಸ್ಥಾಪಿಸುವ ಜನರಿಗೆ ಹಂಚಿದರು . . . . ." ಈ ವರ್ಣನೆಯು ಹಿಂದಿನ ಕಾಲದ ಒಂದು ಬೌದ್ಧ ಗ್ರಂಥದಲ್ಲಿದೆ. ಕೊಳೆಯದಂತೆ ಶವಗಳನ್ನು ಎಣ್ಣೆ ತುಂಬಿದ ಪಾತ್ರೆಗಳಲ್ಲಿಡುತ್ತಿದ್ದರೆಂದೂ ತಿಳಿಯುತ್ತದೆ. ದಶರಥನ ಶವವನ್ನು ಹೀಗೆ ಮಾಡಲಾಗಿತ್ತೆಂದು ರಾಮಾಯಣದಲ್ಲಿದೆ.

ದಕ್ಷಿಣಭಾರತದಲ್ಲಿ ಹೆಣಗಳನ್ನು ಮದ್ಯದಿಂದ ತೊಳೆಯುತ್ತಿದ್ದರೆಂದು ಕೆಲವು ಬೌದ್ಧ ಗ್ರಂಥಗಳಲ್ಲಿದೆ. ಶವಗಳನ್ನು ಸ್ಮಶಾನಗಳಲ್ಲಿ ಎಸೆದು ಬರುವ ಪಂಗಡದವರೂ ಇದ್ದರು. ಇವರೇ ಅಸ್ಪೃಶ್ಯರಂತೆ.

ಕ್ರಿ. ಪೂ. ಆರನೆ ಶತಮಾನದ ಸುಮಾರಿಗೆ ಜೈನರು ಶವಗಳನ್ನು ಸುಡುತ್ತಿದ್ದರು. ದಗೋಬಾಗಳನ್ನು, ಸಮಾಧಿಗಳನ್ನು ಮಾಡಿಸುತ್ತಿದ್ದರು. ಪ್ರಾಚೀನ ಜೈನರು ಶವಗಳನ್ನು ಕಾಡು ಪ್ರಾಣಿಗಳಿಗೆ ಕೊಡುತ್ತಿದ್ದರು. ಅಪರಾಧಿ ಹಾಗೂ ದರಿದ್ರರ ಹೆಣಗಳು ನರಿ, ಹದ್ದುಗಳಿಗೆ ಆಹಾರವಾಗುತ್ತಿದ್ದವು.

ಆದರೆ ಸಾಧುವೊಬ್ಬ ಸತ್ತರೆ ಧಾರ್ಮಿಕ ಸಂಸ್ಥೆಗೆ ಸೇರಿದವನೊಬ್ಬ ಚಟ್ಟದ ವ್ಯವಸ್ಥೆ ಮಾಡಬೇಕಿತ್ತು. ಶವವನ್ನು ವಸ್ತ್ರದಿಂದ ಮುಚ್ಚಿ ಅಸ್ಪೃಶ್ಯರ ಸಹಾಯದಿಂದ ಸ್ಮಶಾನಕ್ಕೊಯ್ಯುತ್ತಿದ್ದರು.



**ಉತ್ಸಾಹ ಕಳೆದುಕೊಂಡವನಷ್ಟು ದಿವಾಳಿಯೆದ್ದ ಮನುಷ್ಯ ಪ್ರಪಂಚದಲ್ಲಿ ಬೇರೊಬ್ಬನಿಲ್ಲ. ಉತ್ಸಾಹವೊಂದುಳಿದು ಮತ್ತೆಲ್ಲ ಹೋದರೂ ಮನುಷ್ಯ ತಿರುಗಿ ಏಳಿಗೆ ಹೊಂದಬಲ್ಲ.**

— ಅರ್ನಾಲ್ಡ್

**ಮಾನವದೇಹದ ಅನೇಕ ಭಾಗಗಳಿಗೆ ಇಂದು ಬದಲಿ ಭಾಗಗಳನ್ನು ಜೋಡಿಸಲು ಸಾಧ್ಯವಿದೆ**

# ಹಳೆಯದಕ್ಕೆ ಹೊಸ ಅಂಗಗಳು

**ಎಂ. ವಿ. ನಾಗರಾಜ**

ಆಧುನಿಕ ವಿಜ್ಞಾನ, ವೈದ್ಯಶಾಸ್ತ್ರದ ಶಸ್ತ್ರಚಿಕಿತ್ಸಾಕ್ರಮಗಳಿಗೆ ಬಹಳ ಉತ್ತೇಜನವಿತ್ತು ತೀವ್ರ ಪ್ರಗತಿಯನ್ನು ಸಾಧಿಸಿದೆ. ಶಸ್ತ್ರಚಿಕಿತ್ಸಾಕ್ರಮದಲ್ಲಿ ಸುಧಾರಣೆಯಾಗಿ ಪವಾಡಗಳನ್ನು ಪ್ರದರ್ಶಿಸುತ್ತಿದೆ. ಜೀವಂತ ಭಾಗಗಳನ್ನು ಒಬ್ಬ ವ್ಯಕ್ತಿಯ ಶರೀರದಿಂದ ತೆಗೆದು ಮತ್ತೊಬ್ಬನ ಶರೀರದಲ್ಲಿ ಜೋಡಿಸುವುದು ಪವಾಡವಲ್ಲವೆ?— ಇದನ್ನು ಉನ್ನತ ವೈದ್ಯಕೀಯ ತಜ್ಞರು ಸಾಧಿಸಿದ್ದಾರೆ. ಈ ರೀತಿಯ ಶಸ್ತ್ರಚಿಕಿತ್ಸಾ ಪ್ರಗತಿ ಮನುಷ್ಯ ದೇಹದ ಜೀವಂತ ಭಾಗಗಳನ್ನು ತೆಗೆದು ಶೇಖರಿಸುವುದಕ್ಕೆ ಉತ್ತೇಜನವಿತ್ತಿದೆ.

ಮನುಷ್ಯನ "ಕಣ್ಣುಗೊಂಬೆ" (pupil), ನಾರಿನ ರೂಪದ ಕೆಲವು ಪೊರೆಗಳಿಂದ ಜೋಡಿಸಲ್ಪಟ್ಟಿದೆ. ಇದರಲ್ಲಿ ಅಣುವಿನಷ್ಟು ವ್ಯತ್ಯಾಸವಾದರೂ ಮನುಷ್ಯಕುರುಡನಾಗುತ್ತಾನೆ ಇಂತಹ ವ್ಯತ್ಯಾಸದಿಂದ ಉಂಟಾಗುವ ಕಣ್ಣಿನ ರೋಗವನ್ನು ಶಸ್ತ್ರಚಿಕಿತ್ಸೆಯ ಮೂಲಕ ಗುಣಪಡಿಸಲಾಗುವುದಿಲ್ಲವೆಂಬ ಭಾವನೆ ಹಿಂದಿತ್ತು. ಆದರೆ ಆಧುನಿಕ ಶಸ್ತ್ರಚಿಕಿತ್ಸಕರು ಸೂಕ್ಷ್ಮವಾದ ಕಣ್ಣಿನ ಚಿಕಿತ್ಸೆಯನ್ನು ಯಶಸ್ವಿಯಾಗಿ ಮಾಡುತ್ತಾರೆ. ಇದರಿಂದ ಅನೇಕರು ಮತ್ತೆ ದೃಷ್ಟಿಲಾಭವನು ಪಡೆದಿದ್ದಾರೆ. "ಕಣ್ಣಿನ ಬ್ಯಾಂಕು"ಗಳೇ ಈಗ ತಲೆಯೆತ್ತಿಬಿಟ್ಟಿವೆ. ಸತ್ತ ಮನುಷ್ಯನ ಕಣ್ಣುಗೊಂಬೆಗಳನ್ನು ತತ್‌ಕ್ಷಣ ತೆಗೆದು ಯೋಗ್ಯ ರೀತಿಯಲ್ಲಿ ಈ "ಬ್ಯಾಂಕು"ಗಳಲ್ಲಿ ಕಾದಿರಿಸುತ್ತಾರೆ. ಅವು ಕಣ್ಣು ಕಳೆದುಕೊಂಡ ಮತ್ತಾವನೊಬ್ಬ ದುರ್ದೈವಿಗ ಬೆಳಕು ನೀಡಲು ಉಪಯೋಗ ಬೀಳುತ್ತವೆ.

ಇದೇ ರೀತಿಯಲ್ಲಿ ಶಸ್ತ್ರಚಿಕಿತ್ಸೆಯನ್ನು ಶರೀರದ ಎಲ್ಲ ಅಂಗಗಳಿಗೂ ಅಳವಡಿಸಿಕೊಂಡಿದ್ದಾರೆ. ಇತ್ತೀಚೆಗೆ ಚಿಕಾಗೋದಲ್ಲಿ ಎದೆಗೂಡಿಲ್ಲದೆ ಒಂದು ಶಿಶು ಹುಟ್ಟಿತು. ಅದೇ ಸಮಯದಲ್ಲಿ ಜನಿಸಿದ ಮತ್ತೊಂದು ಶಿಶುವಿನ ಎದೆಯ ಗೂಡನ್ನು (ಈ ಮಗು ಜನನವಾದಾಗಲೇ ಮರಣಹೊಂದಿತ್ತು) ವೈದ್ಯರು ತೆಗೆದು ಎದೆಗೂಡಿಲ್ಲದ ಶಿಶುವಿಗ ಜೋಡಿಸಿದರು!

ನ್ಯೂಯಾರ್ಕಿನಲ್ಲಿ ಒಬ್ಬ ಮಹಿಳೆಗೆ ಶಸ್ತ್ರಚಿಕಿತ್ಸೆ ಮಾಡತ್ತಿದ್ದಾಗಲೇ ಮರಣ ಸಂಭವಿಸಿತು. ಸತ್ತ ಮಹಿಳೆಯ ರಕ್ತನಾಳದ ಒಳ್ಳೆಯ ಭಾಗವನ್ನು ದೇಹದಿಂದ ತೆಗೆದುಕೊಳ್ಳಲು ವೈದ್ಯರು ಆಕೆಯ ತಂದೆ ತಾಯಿಗಳ ಅನುಮತಿ ಕೇಳಿದರು. ಒಪ್ಪಿಗೆ ದೊರೆತ ಮೇಲೆ, ರಕ್ತನಾಳದ ಭಾಗವನ್ನು ದೇಹದಿಂದ ತೆಗೆದು, ಅದೇ ರೀತಿಯ ರೋಗದಿಂದ ನರಳುತ್ತಿದ್ದ ಮತ್ತೊಬ್ಬ

ರೀಡರ್ಸ್ ಡೈಜೆಸ್ಟ್ ಆಧಾರದಿಂದ

ಮಹಿಳೆಗೆ ಜೋಡಿಸಿ, ಜೀವದಾನ ನೀಡಿದರಂತೆ! ಸಾವು-ಬದುಕುಗಳ ಕಣ್ಣುಮುಚ್ಚಾಲೆ ಆಟದಲ್ಲಿ ಸಿಲುಕಿದ್ದ ಆ ಮಹಿಳೆಯನ್ನು ವೈದ್ಯರು ರಕ್ಷಿಸಿದರು.

೧೮೭೮ ನೆಯ ಇಸವಿಯಲ್ಲಿ ಗ್ಲಾಸ್ಗೋನಗರದ ಬ್ರಿಟಿಷ್ ಸರ್ ವಿಲಿಯಂ ಮೆಕ್ವಿನ್ ಎಂಬ ವೈದ್ಯರು ಅತ್ಯದ್ಭುತ ಶಸ್ತ್ರಚಿಕಿತ್ಸೆಯನ್ನು ಮಾಡಿದರು. ಒಬ್ಬ ಹುಡುಗನ ತೋಳಿನ ಎಲುಬಿಗೆ ರೋಗ ತಗುಲಿತ್ತು. ರೋಗ ತಗಲಿದ್ದ ಎಲುಬಿನ ಭಾಗವನ್ನು ಕತ್ತರಿಸಿ ತೆಗೆದರು; ತೋಳು ತೂಗಾಡುತ್ತಿತ್ತು. ಮೆಕ್ವಿನ್ ಅದ್ಭುತ ಶಸ್ತ್ರಚಿಕಿತ್ಸೆಗೆ ಮುನ್ನುಗ್ಗಿದರು. ಮತ್ತೊಬ್ಬನ ತೋಳಿನ ಎಲುಬನ್ನು, ಎಲುಬಿಲ್ಲದ ಹುಡುಗನ ತೋಳಿಗೆ ಜೋಡಿಸಿದರು. ಹೊಸ ಎಲುಬು ದೇಹದ ನೈಜ ಭಾಗದಂತೆ ಪರಿಣಮಿಸಿ, ಹುಡುಗನ ತೋಳು ಹಿಂದಿನ ಸ್ಥಿತಿಗೇ ಬಂದು ಸರಾಗವಾಗಿ ಚಲಿಸಿ, ಯಾವ ಕೆಲಸವನ್ನಾದರೂ ಮಾಡುವಂತಾಯಿತು.

ಸೂಕ್ಷ್ಮಾಣುಜೀವಿಗಳು ಶಸ್ತ್ರಚಿಕಿತ್ಸೆಗೆ ವೈರಿಗಳಾಗಿವೆ. ಅವು ರಕ್ತನಾಳಗಳ ಶಸ್ತ್ರಚಿಕಿತ್ಸೆಯಲ್ಲಿ ಕಾವನ್ನುಂಟುಮಾಡುತ್ತಿದ್ದುವು; ವ್ರಣ ಹರಡುತ್ತಿದ್ದುವು. ದೇಹದ ಅಂಗಾಂಗಗಳಿಗೆ ಬರುತ್ತಿದ್ದ ಇಂಥ ಜಾಡ್ಯವನ್ನು ದೂರೀಕರಿಸುವುದು ವೈದ್ಯರಿಗೆ ಬೃಹತ್ ಸಮಸ್ಯೆಯಾಗಿತ್ತು. ಆದರೆ ಈಗ ಈ ಸಮಸ್ಯೆಯನ್ನು ನಿವಾರಿಸಲಾಗಿದೆ. ಈಗಿನ "ಆಂಟಿಬಯೋಟಿಕ್" (ಪೆನಿಸಿಲಿನ್ ಇತ್ಯಾದಿ ಸೂಕ್ಷ್ಮಾಣುವಿರೋಧಕ) ಮದ್ದುಗಳು ಈ ಬಗೆಯ ಜಾಡ್ಯವನ್ನು ದೂರಮಾಡಲು ಸಹಾಯಕವಾಗಿವೆ. ದೇಹದ ಭಾಗಗಳು ಕೊಳೆಯುವುದನ್ನು ಅವು ತಡೆಯುತ್ತವೆ. ಇತರ ಆಧುನಿಕ ಔಷಧಿಗಳೂ ವ್ರಣಗಳನ್ನು ಬೇಗನೆ ಗುಣಪಡಿಸುತ್ತವೆ. ದೇಹದ ಜೀವಂತ ಕೋಶಗಳನ್ನು ದೀರ್ಘಕಾಲ ಕೆಡದಂತೆ ಕಾಯ್ದಿಡುವ ಕ್ರಮವನ್ನು ವೈಜ್ಞಾನಿಕರು ಶೋಧಿಸಿದ್ದಾರೆ. ಹೀಗೆ ಶೇಖರಿಸಿದ ಸಜೀವ ಭಾಗಗಳನ್ನು ಶಸ್ತ್ರಚಿಕಿತ್ಸೆಯಲ್ಲಿ ಇತರರಿಗೆ ಜೋಡಿಸಲು ಉಪಯೋಗಿಸುತ್ತಾರೆ.

ಅಪಘಾತಗಳಿಂದ ಮುರಿದಿರುವ ದೇಹದ ಎಲುಬುಗಳನ್ನು ಸರಿಪಡಿಸಲು, ಬೇರೆ ಎಲುಬುಗಳ ಅಗತ್ಯ ಬಹಳವಾಗಿದೆ. ಎಲುಬುರೋಗದಿಂದ ನರಳುತ್ತಿರುವ ರೋಗಿಗಳ ಕಾಲುಮೂಳೆಗಳನ್ನು ಕತ್ತರಿಸಬೇಕಾಗುತ್ತದೆ. ಅಂತಹವರಿಗೆ ಸರಿಹೊಂದುವ ಉದ್ದವಾದ ಕಾಲುಮೂಳೆ ಜೋಡಿಸಲಿಕ್ಕೂ ಎಲುಬುಗಳ ಸಂಗ್ರಹ ಬೇಕು. ಇದು ವೈದ್ಯರಿಗೆ ಜಟಿಲ ಸಮಸ್ಯೆಯಾಗಿತ್ತು. ಆದರೆ ಈಚೆಗೆ "ಮೂಳೆಗಳ ಬ್ಯಾಂಕು"ಗಳು ಈ ಸಮಸ್ಯೆಗೆ ಪರಿಹಾರ ನೀಡಿವೆ.

ಎಲುಬುಗಳ ಶೇಖರಣೆಗೆ ಸಾಕಷ್ಟು ಮಾರ್ಗಗಳಿವೆ. ಶಸ್ತ್ರ ಚಿಕಿತ್ಸೆಗಳ ಕಾಲದಲ್ಲಿಯೂ ಮೃತ ಶರೀರಗಳಿಂದಲೂ ತಮಗೆ ಅವಶ್ಯಕ ತೋರುವ ಮೂಳೆಗಳನ್ನು ವೈದ್ಯರು ತೆಗೆದಿಡುತ್ತಾರೆ. ಈ ರೀತಿ ಶೇಖರಿಸಿದ ಎಲುಬುಗಳನ್ನು ಜಗತ್ತಿನ ಅನೇಕ ಚಿಕಿತ್ಸಾಲಯಗಳು ಪಡೆಯುತ್ತಿವೆ. ಯುದ್ಧದಲ್ಲಿ ಅಪಘಾತಕ್ಕೀಡಾಗಿರುವ ಯೋಧರು ಮತ್ತು ಇತರರು ಈ ಎಲುಬುಗಳಿಂದ ಪರಮ ಪ್ರಯೋಜನ ಪಡೆದಿದ್ದಾರೆ. ವಯಸ್ಸಾದಂತಹ ಮುದುಕರಿಗೆ ಎಲುಬುಗಳು ಭಂಗಗೊಂಡರೆ ಮತ್ತೆ ಕೂಡಿಸಲು ಆಗುತ್ತಿರಲಿಲ್ಲ. ಆದರೆ ಈಗ ಮುದುಕರೂ ಹೆದರಬೇಕಾಗಿಲ್ಲ; ಅವರಿಗೂ ಬೇರೆಯವರ ಎಲುಬುಗಳನ್ನು ಜೋಡಿಸಬಹುದು.

ರೋಗಿಗೆ ಜೋಡಿಸಿದ ಹೊಸ ಮೂಳೆ ಆತನ ದೇಹದಲ್ಲಿ ಬೆಳೆಯುವುದಿಲ್ಲ. ಮಾನವ ಶರೀರ ಅನ್ಯ ವಸ್ತುವನ್ನು ಸ್ವಾಗತಿಸುವುದಿಲ್ಲ. ಜೋಡಿಸಿರುವ ಹೊಸ ಎಲುಬು ಊರೆಗೋಲಿನಂತೆ ಇರುತ್ತದೆ. ಎಲುಬಿನ ಜೀವಂತಕೋಶಗಳು ಹೊಸದಾಗಿ ಜೋಡಿಸಲ್ಪಟ್ಟ ಮೂಳೆಯ ಮೇಲೆ ಬೆಳೆಯುತ್ತವೆ. ಅನಂತರ, ಶರೀರವು ಹೊಸ ಮೂಳೆಯನ್ನು ಸ್ವಂತ ಅಂಗದೊಂದಿಗೆ ಒಂದು ಮಾಡಿಕೊಳ್ಳುತ್ತದೆ.

ಎಲುಬು ಮುರಿದವರಿಗೆ ಜೋಡಿಸಲು "ಮೂಳೆಗಳ ಬ್ಯಾಂಕು"ಗಳಿದ್ದಂತೆ ರಕ್ತನಾಳದ ಬ್ಯಾಂಕುಗಳೂ ನೂತನ ಶಸ್ತ್ರಚಿಕಿತ್ಸೆಗೆ ನೆರವಾಗುತ್ತಿವೆ. ಕೆಲವು ವೇಳೆ ರಕ್ತನಾಳಗಳಲ್ಲಿ ವ್ರಣಗಳಾಗು

ತ್ತವೆ ಮತ್ತು ನಾಳದ ಹೊರ ಪದರದ ಜೀವಕೋಶಗಳು ಶಕ್ತಿಹೀನವಾಗಿ ಊದಿಕೊಳ್ಳುತ್ತವೆ. ಈ ರೀತಿಯ ಉಲ್ಬಣ ಅಥವಾ ಊದುವಿಕೆ, ಶರೀರದ ಮುಖ್ಯ ಭಾಗಗಳನ್ನು ಸ್ಥಳಪಲ್ಲಟಗೊಳಿಸಿ ನೋವುಂಟುಮಾಡುತ್ತದೆ. ಫಲಿತಾಂಶವಾಗಿ ವಾತರೋಗ ಉದ್ಭವಿಸುತ್ತದೆ. ಶರೀರದ ಪ್ರಮುಖ "ಅಯೋರ್ಟ" ರಕ್ತನಾಳವು ಅನೇಕ ಸಲ ಉಬ್ಬಿ ಇಲ್ಲವೆ ಕುಗ್ಗಿ ರಕ್ತ ಸಂಚಾರಕ್ಕೆ ಅಡ್ಡಿ ಮಾಡುತ್ತದೆ. ಇದರಿಂದ ರೋಗಿಗೆ ತೀವ್ರವಾದ ನೋವಿನ ಸಂಕಟವಾಗುತ್ತದೆ.

ಇಲ್ಲಿಯ ವರೆಗೆ ಶಸ್ತ್ರ ಚಿಕಿತ್ಸಕರು ಇಂಥ ರೋಗಿಯ ರಕ್ತನಾಳದ ಕೊಳೆತ ಇಲ್ಲವೆ ನಿರುಪಯುಕ್ತವಾದ ಭಾಗಗಳನ್ನು ತೆಗೆದುಹಾಕಿ ಮಿಕ್ಕೆರಡು ತುದಿಯನ್ನು ಜೋಡಿಸಿ ಹೊಲಿಯುತ್ತಿದ್ದರು. ಈ ಚಿಕಿತ್ಸಾಕ್ರಮ ಸಮರ್ಪಕವಾಗಿರಲಿಲ್ಲ. ಈಗ ರಕ್ತನಾಳದ ಬ್ಯಾಂಕುಗಳು ರೋಗಿಗಳಿಗೆ ಜೀವದಾನ ನೀಡಿವೆ.

ಇಂತಹ ಬ್ಯಾಂಕುಗಳಿಗೆ ಇರುವ ಏಕೈಕ ಸಂಗ್ರಹ ಮಾರ್ಗ-ಮೃತಶರೀರಗಳು. ರಕ್ತನಾಳಗಳನ್ನು, ಮರಣ ಹೊಂದಿದ ವ್ಯಕ್ತಿಯ ಶರೀರದಿಂದ ಮೃತ ಹೊಂದಿದ ಆರು ಘಂಟೆಗಳ ಅವಧಿಯೊಳಗೆ ತೆಗೆಯಬೇಕು. ಇದಕ್ಕೆ ಮೃತಜೀವಿಗಳ ವಾರಸುದಾರರ ಅನುಮತಿ ಬೇಕು. ಮೃತಜೀವಿ ೪೫ ವರ್ಷ ವಯಸ್ಸಿನೊಳಗಿದ್ದು ಅಂಟುಜಾಡ್ಯ ರಹಿತನಾಗಿರಬೇಕು. "ಒಬ್ಬ ಮೃತನು ನಮ್ಮಲ್ಲಿದ್ದಾನೆ. ಆತನ ಒಂದೇ ಒಂದು 'ಅಯೋರ್ಟ' ರಕ್ತನಾಳ ಸಿಗುತ್ತದೆ" ಎಂದು ಬರುವ-ಟೆಲಿಫೋನ್ ಕರೆಗಳನ್ನು ಎಡೆಬಿಡದೆ ಕಾಯುತ್ತಿರುವ ಶಸ್ತ್ರಚಿಕಿತ್ಸಕರಿದ್ದಾರೆ!

ಈ ವಿಧದ ಶಸ್ತ್ರಚಿಕಿತ್ಸೆ ಚರ್ಮರೋಗಗಳಲ್ಲಿ ಹೆಚ್ಚು ಪ್ರಯೋಜನಕಾರಿಯಾಗಿದ್ದು ಪ್ರಗತಿ ಸಾಧಿಸಿದೆ. ಅಂಟುಜಾಡ್ಯಕ್ಕೆ ಸಿಲುಕಿದ ಚರ್ಮಭಾಗವನ್ನು ದೇಹದಿಂದ ತೆಗೆದು ಹೊಸ ಚರ್ಮವನ್ನು ಶಸ್ತ್ರಚಿಕಿತ್ಸೆಯ ಮೂಲಕ ಜೋಡಿಸುತ್ತಾರೆ!

ಎಲುಬು, ರಕ್ತನಾಳ, ಚರ್ಮ—ಮತ್ತಿತರ ದೇಹದ ಅಂಗಾಂಗಗಳ "ಬ್ಯಾಂಕು"ಗಳು ವೈದ್ಯವಿಜ್ಞಾನದ ಶಸ್ತ್ರಚಿಕಿತ್ಸಾವಿಭಾಗದಲ್ಲಿ ನವಯುಗದ ನವೋದಯದ ಹರಿಕಾರರಂತಿವೆ.



**ಜಾಗತಿಕ ಸಹಕಾರದ ಅತ್ಯದ್ಭುತ ಪ್ರಯೋಗವೊಂದು ಇಲ್ಲಿ ಸಾಗಿದೆ.**

# ೧೮ ಎಕರೆಗಳಲ್ಲಿ ೭೦ ರಾಷ್ಟ್ರಗಳು

ಜಗತ್ತಿನಲ್ಲಿಯೇ ಅತಿ ವಿಲಕ್ಷಣವಾದ ಸ್ವತಂತ್ರ ಪ್ರದೇಶವೊಂದು ನ್ಯೂಯಾರ್ಕ ನಗರದ ನಟ್ಟನಡುವೆ ಇದೆ. ಕೇವಲ ೧೮ ಎಕರೆ ವಿಸ್ತೀರ್ಣವಾಗಿರುವ ಈ ಪ್ರದೇಶದಲ್ಲಿ ೩,೫೦೦ ಜನರು ಇರುತ್ತಾರೆ.

ಪ್ರತಿನಿತ್ಯ ಸಂಜೆ ಈ ಜನರೆಲ್ಲ ಈ ಪ್ರದೇಶದಿಂದ ಹೊರಬಿದ್ದು ರಾತ್ರಿಯನ್ನು ಬೇರೆ ಸ್ಥಳದಲ್ಲಿ ಕಳೆಯುತ್ತಾರೆ. ಈ ಸ್ವತಂತ್ರ ನಾಡನ್ನು ಕಾಯುವ ಕೆಲಸವನ್ನು ಕೆಲವೇ ಕಾವಲುಗಾರರು ನೋಡಿಕೊಳ್ಳುತ್ತಾರೆ.

ಈ ರಾಜ್ಯದಲ್ಲಿ ನಾಣ್ಯಗಳನ್ನು ಮುದ್ರಿಸುವದಿಲ್ಲ. ಆದರೆ ಅಧಿಕಾರಿಗಳು ತಮ್ಮದೇ ಆದ ಪ್ರತ್ಯೇಕ ಅಂಚೆ ತಿಕೀಟುಗಳನ್ನು ಉಪಯೋಗಿಸುತ್ತಾರೆ. ಅವರ ಆಕಾಶವಾಣಿ ಕೇಂದ್ರವು ಇಪ್ಪತ್ತೈದು ಭಾಷೆಗಳಲ್ಲಿ ಕಾರ್ಯಕ್ರಮಗಳನ್ನು ಬಿತ್ತರಿಸುತ್ತದೆ.

ಇಲ್ಲಿ ಐದು ಅಧಿಕೃತ ಭಾಷೆಗಳಿವೆ. ಈ ಪ್ರದೇಶವನ್ನು ಉಳಿದ ಪ್ರದೇಶದಿಂದ ಬೇರ್ಪಡಿಸುವ ಬೇಲಿಯ ಬದಿಗೆ ಎಪ್ಪತ್ತು ರಾಷ್ಟ್ರಗಳ ಧ್ವಜಗಳು ಒಂದರ ಪಕ್ಕದಲ್ಲಿ [illegible] ಹಾರುತ್ತವೆ. ಆದರೆ ಇದಕ್ಕೆ ಸ್ವತಃ [illegible] ದ ಧ್ವಜವೂ ಇದೆ. [illegible] ನೀಲಿಬಣ್ಣದ ಹಿನ್ನೆಲೆಯುಳ್ಳ, ಆಚೆ ಈಚೆ ಶಾಂತಿಸೂಚಕವಾದ ಓಲಿವ್ ಗಿಡದ ಟೊಂಗೆಗಳಿರುವ ಜಗತ್ತಿನ ನಕಾಶೆಯುಳ್ಳ ಚಿತ್ರವೇ ಈ ಧ್ವಜದ ಚಿಹ್ನವಾಗಿದೆ.

ನ್ಯೂಯಾರ್ಕ ನಗರದ ನಡುವೆ ಇರುವ ಮನಹಟನ್ ನಡುಗಡ್ಡೆಯೇ ಈ ಪ್ರದೇಶ. ಇಲ್ಲಿಯೇ



ಸಂಯುಕ್ತ ರಾಷ್ಟ್ರ ಸಂಘದ ಶಾಶ್ವತ ಕೇಂದ್ರ ಕಚೇರಿ [illegible].

ಯುನೆಸ್ಕೊ ಕೊರಿಯರಿನಿಂದ

೧೯೪೬ ರ ಡಿಸೆಂಬರ ತಿಂಗಳಲ್ಲಿ ಈ ಪ್ರದೇಶವು ಮದ್ಯ ತಯಾರಿಸುವ ಅಂಗಡಿಗಳ, ಮಾಂಸ ಕೂಡಿಡುವ ಮನೆಗಳ ಹೊಲಸು ಕೇರಿಯಾಗಿತ್ತು.

ಮುಂದೆ ಒಂಬತ್ತೇ ತಿಂಗಳಲ್ಲಿ ಈ ಕಟ್ಟಡಗಳೆಲ್ಲ ನೆಲಸಮವಾದವು; ನಾಲ್ಕು ವರ್ಷಗಳ ನಂತರ ಅಲ್ಲಿ ಕಟ್ಟಲ್ಪಟ್ಟ ೩೯ ಅಂತಸ್ತುಗಳುಳ್ಳ ಕಟ್ಟಡವಲ್ಲಿ ಸಂಯುಕ್ತರಾಷ್ಟ್ರ ಸಂಘದ ಕಚೇರಿ ಕಾರ್ಯಾರಂಭ ಮಾಡಿತು.

ಅಮೇರಿಕೆಯ ಕೋಟ್ಯಧೀಶ ದಾನಿ ಜೆ. ಡಿ. ರಾಕಫೆಲರರು ಈ ಪ್ರದೇಶವನ್ನು ಸಂ. ರಾ. ಸಂಘಕ್ಕಾಗಿ ಕೊಂಡು ಕೊಡಲು ಮುಂದೆ ಬಂದರು. ೧೪–೧೨–೪೬ರಂದು ಸಂ.ರಾ.ಸಂಘದ ಸಾಮಾನ್ಯ ಸಭೆ ಈ ಕೊಡುಗೆಯನ್ನು ಒಪ್ಪಿತು. ಕಟ್ಟಡದ ಸುತ್ತಲೂ ಇರುವ ಕಂಪೌಂಡಿನ ಸ್ಥಳವನ್ನು ನ್ಯೂಯಾರ್ಕ ನಗರವು ಸಂ. ರಾ. ಸಂಘಕ್ಕೆ ಕೊಂಡುಕೊಟ್ಟಿತು.

ಸಂ.ರಾ. ಸಂಘದ ಸೆಕ್ರೆಟರಿಯೆಟ್ ಕಟ್ಟಡಕ್ಕೆ ೩೯ ಮಾಳಿಗೆಗಳಿವೆ. ಮೂರು ನೆಲ ಮಾಳಿಗೆಗಳೂ ಇವೆ.

ಸಂ. ರಾ. ಸಂಘದ ಈ ಸ್ಥಳದಲ್ಲಿ ಎರಡನೆಯ ದೊಡ್ಡ ಕಟ್ಟಡವೆಂದರೆ ಸಂಘದ ಸಾಮಾನ್ಯ ಸಭೆ ಸೇರುವ ಕಟ್ಟಡ. ಸಭಾಸ್ಥಳದಲ್ಲಿ ೭೫೦ ಪ್ರತಿನಿಧಿಗಳು, ೨೭೦ ನಿರೀಕ್ಷಕರು, ೨೩೪ ಪತ್ರಿಕಾ ಪ್ರತಿನಿಧಿಗಳು ಮತ್ತು ೮೦೦ ಪ್ರೇಕ್ಷಕರು ಕೂಡ್ರಲು ಸಾಧ್ಯವಿದೆ.

ಪ್ರತಿನಿತ್ಯವೂ ನೂರಾರು ಸಂಖ್ಯೆಯಲ್ಲಿ ಸಂ. ರಾ. ಸಂಘದ ಕಚೇರಿಯನ್ನು ನೋಡಲು ಬರುವ ಜನರಿಗೆ ಮಾರ್ಗದರ್ಶನ ಮಾಡಲು ಇಲ್ಲಿ ೬೫ ಸುಶಿಕ್ಷಿತ ತರುಣಿಯರಿದ್ದಾರೆ.

ಸಂ. ರಾ. ಸಂಘದ ಈ ನಗರನಿರ್ಮಾಣಕ್ಕೆ ೨೫೦ ಲಕ್ಷ ಪೌಂಡುಗಳ ವೆಚ್ಚ ಬಂದಿದೆ. ಅಮೇರಿಕೆ ಈ ಹಣ ಪೂರೈಸಿ ಈಗ ಕಂತಿನಿಂದ ಮರಳಿ ಪಡೆಯುತ್ತಿದೆ. ಇಲ್ಲಿ ಅಂಚೇ ಕಚೇರಿ, ಹೋಟೆಲುಗಳು, ಅಂಗಡಿಗಳು,-ಒಂದು ಆಸ್ಪತ್ರೆ ಕೂಡ ಇವೆ.

ಕಟ್ಟಡಗಳನ್ನು ಉಡುಗಿ ಸ್ವಚ್ಛವಾಗಿಡುವ ನೌಕರರಿಗಾಗಿ ಪ್ರತಿವರ್ಷ ೧,೦೭ ೦೦೦ ಪೌಂಡುಗಳು; 'ಲಿಫ್ಟ್'ಗಳಿಗಾಗಿ ೬೭,೦೦೦ ಪೌಂಡುಗಳು; ದೀಪ, ವಿದ್ಯುಚ್ಛಕ್ತಿಗಳಿಗಾಗಿ ೧,೩೫,೦೦೦ ಪೌಂಡುಗಳು; ಕಾಗದ ಮುಂತಾದವುಗಳಿಗಾಗಿ ೪೩,೪೦೦ ಪೌಂಡುಗಳು ಮತ್ತು ತಂತಿ ಹಾಗು ಟೆಲಿಫೋನಗಳಿಗಾಗಿ ೧,೦೦,೫೦೦ ಪೌಂಡುಗಳ ವೆಚ್ಚ ಬರುತ್ತದೆ.

೫ ಜನ ಕೆಲಸಗಾರರು ದಿನಾಲು ೧೦ ತಾಸಿನಂತೆ ಕೆಲಸ ಮಾಡಿ ಒಂದು ತಿಂಗಳಲ್ಲಿ ಈ ಕಟ್ಟಡಗಳ ಕಿಡಕಿಗಳ ಕಾಜುಗಳನ್ನು ಉಜ್ಜಿ ಸ್ವಚ್ಛ ಮಾಡುತ್ತಾರೆ. ಕೊನೆಯ ಕಿಡಕಿಯು ಸ್ವಚ್ಛವಾದೊಡನೆ ಮತ್ತೆ ಮೊದಲನೆಯ ಕಿಡಕಿಯಿಂದ ಪ್ರಾರಂಭಿಸಬೇಕಾಗುತ್ತದೆ.

ಜಗತ್ತಿನಲ್ಲಿ ಯುದ್ಧಗಳಾಗದಂತೆ ನೋಡಿಕೊಂಡು ಜಗಳಗಳನ್ನು ಶಾಂತ ರೀತಿಯಲ್ಲಿ ಬಗೆಹರಿಸಿ ಶಾಂತಿಸ್ಥಾಪನೆ ಮಾಡಲೆಂದು ಸಂ. ರಾ. ಸಂಘ ಜನ್ಮತಾಳಿದೆ. ಆದರೆ "ಬಲಿಷ್ಠರ ರಾಜಕಾರಣ"ದ ಕೈವಾಡ ಇಲ್ಲಿಯೂ ನಡೆಯುತ್ತಿರುವದರಿಂದ ಇದೇ ಜಾಗತಿಕ ಶಾಂತಿಯ ಗೋರಿಯ ಸ್ಥಳವಾಗಬಹುದು ಎಂದು ಹೇಳುವವರೂ ಇದ್ದಾರೆ.



ದೇಹಕ್ಕಿಂತಲೂ ಮನಸ್ಸಿಗೆ ಪ್ರಾಯ ತುಂಬುವುದು ಹೆಚ್ಚು ಕ್ಷಿಪ್ರದಲ್ಲಿ. ದೇಹದ ಮುಪ್ಪಿಗೆ ಒಂದು ವರ್ಷ ಬೇಕಾದರೆ ಮನಸ್ಸಿನ ಮುಪ್ಪಿಗೆ ಒಂದು ನಿಮಿಷ ಸಾಕು.

—ಸೇವ ನಮಿರಾಜ ಮಲ್ಲ, "ಭ್ರಮಾಧೀನ"ದಲ್ಲಿ

# ಪ್ರಾಣಿಗಳೂ ಸಹಕಾರ ಬಲ್ಲವು

ಗಂಗಾಧರ ರಾವ್

ಬದುಕಿನ ಹೋರಾಟದಲ್ಲಿ ಒಬ್ಬಂಟಿಗನಾಗಿ ಕಾರ್ಯ ಮಾಡುವದಕ್ಕಿಂತಲೂ ಗುಂಪು ಕಟ್ಟಿಕೊಂಡು ಸಹಕಾರದಿಂದ ಕಾರ್ಯ ಮಾಡುವದರಲ್ಲಿ ಹೆಚ್ಚಿನ ಹಿತ, ಯಶಸ್ಸಿನ ಸಂಭವವಿದೆ ಎಂದು ಮಾನವನು ಅನುಭವದಿಂದ ಕಂಡುಕೊಂಡ ಬಳಿಕ ಆ ರೀತಿಯ ಜೀವನ ಕ್ರಮವನ್ನು ಹಾಕಿಕೊಂಡನು.

ಪಶು-ಪಕ್ಷಿಗಳಿಗೆ ಮಾನವನ ಬುದ್ಧಿಸಾಮರ್ಥ್ಯವಿಲ್ಲ. ಅನುಭವದಿಂದ ಮನುಷ್ಯ ಪಾಠ ಕಲಿಯುವಂತೆ ಅವೂ ಕಲಿಯುತ್ತವೆ ಎನ್ನಲು ಹಲಕೆಲವು ಉದಾಹರಣೆಗಳು ಸಿಗಬಹುದಾದರೂ ಒಟ್ಟಿನಲ್ಲಿ ಮಾನವನ ಬುದ್ಧಿಶಕ್ತಿ ಮತ್ತು ಅವುಗಳ ಬುದ್ಧಿಶಕ್ತಿಯಲ್ಲಿ ಮಹದಂತರವಿದೆ. ಸಹಕಾರ ಜೀವನದಲ್ಲಿ ಹೆಚ್ಚು ಪ್ರಯೋಜನವಿದೆ ಎಂದು ಮಾನವ ಅರಿತುಕೊಂಡಷ್ಟು ಸ್ಪಷ್ಟವಾಗಿ ಅವು ತಿಳಿದುಕೊಂಡಿರುವದು ಸಾಧ್ಯವಿಲ್ಲ.

ಪಶು-ಪಕ್ಷಿಗಳ ಜಾಣ್ಮೆಯ ವಿಚಾರವಾಗಿ ಎಷ್ಟೋ ಕಥೆಗಳನ್ನು ಕೇಳುತ್ತೇವೆ. ಈ ಕಥೆಗಳಲ್ಲಿ ಉತ್ಪ್ರೇಕ್ಷೆಯೇ ಅಧಿಕವಾಗಿರುವ ಸಂಭವ ಹೆಚ್ಚು. ಹಾಗಿದ್ದರೂ ಪ್ರಾಣಿಜೀವನದ ನಿರೀಕ್ಷಣೆ ಮಾಡಿದ ಎಷ್ಟೋ ಜನರ ಹೇಳಿಕೆಯಿಂದ ಹಲವಾರು ಪ್ರಾಣಿಗಳು ಉದ್ದೇಶಸಾಧನೆಗಾಗಿ ಗುಂಪುಕಟ್ಟಿಕೊಂಡು ಸಹಕಾರದಿಂದ ಕಾರ್ಯ ಮಾಡುತ್ತಿರುವದು ಸತ್ಯವೆಂದು ಕಂಡುಬಂದಿದೆ. ಈ ಹೇಳಿಕೆಗಳಲ್ಲಿ ಉತ್ಪ್ರೇಕ್ಷೆಯ ಅಂಶವೂ ಇಲ್ಲ. ತರ್ಕಬುದ್ಧಿ, ವಿವೇಚನಾ ಶಕ್ತಿ ಕಡಿಮೆಯಾಗಿರುವ ಪಶು-ಪಕ್ಷಿಗಳಲ್ಲಿರುವ ಸಹಕಾರ ಪ್ರವೃತ್ತಿ



ನಿಜವಾಗಿಯೂ ಸೋಜಿಗದ್ದಾಗಿದೆ.

ಬೇಟೆಯಾಡುವಾಗ ತೋಳಗಳು ಎಂದೂ ಒಂಟಿಯಾಗಿ ಬೇಟೆಯಾಡುವದಿಲ್ಲ. ಗುಂಪು ಕಟ್ಟಿಕೊಂಡೇ ತಮ್ಮ ಬೇಟೆಯನ್ನು ಹಿಡಿಯುತ್ತವೆ. ತಮ್ಮ ಬೇಟೆಯನ್ನು ಸುತ್ತುವರಿದು ಬೆನ್ನಟ್ಟಿ ಹೋಗಿ ಅದು ತಪ್ಪಿಸಿಕೊಳ್ಳಲಾರದಂಥ ಸ್ಥಳಕ್ಕೆ ಅದನ್ನು ದಬ್ಬುತ್ತವೆ. ನಂತರ ಅದರ ಮೇಲೆರಗಿ ಕೊಂದು ತಿನ್ನುತ್ತವೆ.

ಹುಳಹುಪ್ಪಡಿಗಳಲ್ಲೂ ಸಂಯೋಜಿತ ಸಹಕಾರ ಪ್ರವೃತ್ತಿ ಕಂಡುಬರುತ್ತದೆ. ಹಲ್ಲಿಗಳನ್ನು ನೋಡಿದ್ದೀರಲ್ಲ. ಆ ಪ್ರಾಣಿಯ ಬುದ್ಧಿಶಕ್ತಿ ಅದೆಷ್ಟು ಸಮರ್ಥವಾಗಿದ್ದೀತು! ಆದರೂ ಈ ಮುಂದಿನ ಘಟನೆಯನ್ನು ಓದಿದಾಗ "ಅಬ್ಬಾ!" ಎನ್ನುವಂತಾಗುತ್ತದೆ.

ಮರದ ಬೊಡ್ಡೆಯೊಂದರ ಮೇಲೆ ಹಾರಾಡುತ್ತಿದ್ದ ಪಾತರಗಿತ್ತಿಗಳನ್ನು ಹಿಡಿಯಲು ಒಂದು ಹಲ್ಲಿ ಹೊಂಚುಹಾಕಿತ್ತು. ಎಷ್ಟೇ ಜಾಗರೂಕತೆಯಿಂದ ಸಮೀಪಿಸಿದರೂ ಪಾತರಗಿತ್ತಿಗಳಿಗೆ ಸುಳಿವು ಹತ್ತಿ ಅವು ಹಾರಿ ಹೋಗುತ್ತಿದ್ದವು.

ಅನೇಕ ಸಲ ಪ್ರಯತ್ನಿಸಿ ವಿಫಲವಾದ ಬಳಿಕ ಹಲ್ಲಿ ಸರಸರನೆ ಸಮೀಪದ ಕಲ್ಲಿನ ಗೋಡೆಯ ಮೇಲೆ ಹರಿದುಹೋಯಿತು. ಮತ್ತೊಂದು ಹಲ್ಲಿ ಕಣ್ಣಿಗೆ ಬಿದ್ದೊಡನೆ ನಿಂತು ತಲೆಯನ್ನೆತ್ತಿ ಅತ್ತಇತ್ತ ಅಲ್ಲಾಡಿಸಿತು. ಗಂಟಲಿನ ಹಳದಿ ಚೀಲವನ್ನು ಹಿಗ್ಗಿಸಿತು. ನಂತರ ತಿರುಗಿ ಹೊರಟಿತು. ಆ ಮತ್ತೊಂದು ಹಲ್ಲಿ ಅದರ ಬೆನ್ನ ಹಿಂದೆ ನಡೆಯಿತು. ಮರದ ಬೊಡ್ಡೆಯ ಒಂದು ಬದಿಗೆ ಒಂದು, ಇನ್ನೊಂದು ಬದಿಗೆ ಇನ್ನೊಂದು ಹಲ್ಲಿ ನಿಂತುಕೊಂಡು ಪಾತರಗಿತ್ತಿಗಳ ಮೇಲೆ ದಾಳಿಯನ್ನಾರಂಭಿಸಿದವು.

ಮೊದಲನೆಯ ಹಲ್ಲಿ ಮೊದಲಿನಂತೆಯೆ ತನ್ನ ಆಕ್ರಮಣದ ಹೆಜ್ಜೆಯನ್ನಿಟ್ಟು ಮುಂದೆ ಬರತೊಡಗಿತು. ಇನ್ನೊಂದು ಹಲ್ಲಿ ಸುತ್ತುವರಿದು ಬಂದು ಪಾತರಗಿತ್ತಿಗಳು ಕುಳಿತ ಸ್ಥಳದ ಕೆಳಗಡೆ ನಿಂತಿತು. ಮೊದಲನೆಯ ಹಲ್ಲಿಯ ಸುಳಿವು ಹತ್ತಿದ ಪಾತರಗಿತ್ತಿಯೊಂದು ಅದರಿಂದ ದೂರ ಹಾರಿತು. ಆದರೆ ಈ ಸಲ ಅದು ಬಾಯಿ ತೆರೆದು ನಿಂತಿದ್ದ ಕೆಳಗಿನ ಹಲ್ಲಿಯ ಬಾಯಿಯಲ್ಲೆ ಬಂದು ಬಿದ್ದಿತು.

ಎರಡೂ ಹಲ್ಲಿಗಳು ಇದೇ ಬಗೆಯಾಗಿ ತೃಪ್ತಿಯಾಗುವ ವರೆಗೂ ಬೇಟೆಯನ್ನು ಮುಂದುವರಿಸಿದವು.

ಸ್ಥಳಾಂತರಿಸುವಾಗ ಇಲಿಗಳು ಹೊಳೆ-ಹಳ್ಳಗಳನ್ನು ದಾಟುವ ರೀತಿಯನ್ನು ಡಾ. ಹೆಂಡರಸನ್ನರೆಂಬವರು ವಿವರಿಸಿದ್ದಾರೆ. ಹಾದಿಯಲ್ಲಿ ಹೊಳೆ ಅಡ್ಡ ಬಂದಾಗ ಇಲಿಗಳು ಒಣಗಿದ ಕಟ್ಟಿಗೆಗಳ ತುಂಡುಗಳನ್ನು ನೀರಿಗೆಳೆದು ಅವನ್ನು ತೆಪ್ಪದಂತೆ ಉಪಯೋಗಿಸುತ್ತವೆ. ಕಟ್ಟಿಗೆಯ ತುಂಡಿನ ಮೇಲೆ ಅನೇಕ ಇಲಿಗಳು ಏರಿದ ಬಳಿಕ ಅವೆಲ್ಲವೂ ತುಂಡಿನ ಮಧ್ಯಬಿಂದುವಿನತ್ತ ಮೋರೆ ಮಾಡಿ ಬಾಲಗಳನ್ನು ನೀರಿನಲ್ಲಿ ಇಳಿಬಿಟ್ಟು ಕುಳಿತುಕೊಳ್ಳುತ್ತವೆ. ಬಾಲಗಳನ್ನು ಹುಟ್ಟುಗಳಂತೆಯೂ ಚುಕ್ಕಾಣಿಯಂತೆಯೂ ಉಪಯೋಗಿಸಿಕೊಂಡು ಹೊಳೆ ದಾಟುತ್ತವೆ.

ಮಂಗಗಳು ಕೂಡ ಇದೇ ರೀತಿಯಲ್ಲಿ ಹೊಳೆ-ಹಳ್ಳಗಳನ್ನು ದಾಟುವಾಗ ಬುದ್ಧಿವಂತಿಕೆ ತೋರಿಸುತ್ತವೆ. ನೀರಿನ ಮೇಲೆ ಅತಿ ಮುಂದಕ್ಕೆ ಚಾಚಿರುವ ಗಿಡದ ಟೊಂಗೆಯೊಂದಕ್ಕೆ ಮುಂದಾಳು ಮಂಗ ತಲೆ ಕೆಳಗಾಗಿ ಅಡ್ಡ ಜೋತುಬೀಳುತ್ತದೆ. ಉಳಿದ ಮಂಗಗಳು ಅದರ ದೇಹದ ಮೇಲಿಂದ ಕೆಳಗಿಳಿದು ಒಂದರ ಬಾಲವನ್ನು ಇನ್ನೊಂದು ಹಿಡಿದುಕೊಂಡು ಸರಪಳಿ ತಯಾರಿಸುತ್ತವೆ. ನೀರಿನ ಪಾತಳಿಗೆ ತೀರ ಸಮೀಪವಾಗುವ ವರೆಗೆ ಈ ಸರಪಳಿ ತಯಾರಾದ ಬಳಿಕ ಏಕಕಾಲಕ್ಕೆ ಈ ಸರಪಳಿ ಹಿಂದೆ-ಮುಂದೆ ತೂಗಾಡತೊಡಗುತ್ತದೆ. ತೀರ ಕೆಳಗಡೆ ಇರುವ ಮಂಗನಿಗೆ ಎದುರು ದಂಡೆಯ ಗಿಡದ ಟೊಂಗೆಯನ್ನು ಹಿಡಿಯಲು ಸಾಧ್ಯವಾಗುವ ವರೆಗೂ ತೂಗಾಟ ಜೋರಾಗುತ್ತ ಹೋಗುತ್ತದೆ.

ಆ ಮಂಗ ಎದುರು ದಂಡೆಯ ಗಿಡದ ಟೊಂಗೆಯನ್ನು ಹಿಡಿದುಕೊಂಡೊಡನೆ ಈ ಜೀವಂತ ಸೇತುವೆಯ ಮೇಲಿಂದ ಉಳಿದ ಮಂಗಗಳು

ಸರಸರ ನಡೆದು ಎದುರು ದಂಡೆಯನ್ನು ಸೇರುತ್ತವೆ ಕಡೆಯ ಮಂಗ ಆಚೆ ದಡ ಸೇರಿದೊಡನೆ ಮುಂದಾಳು ಮಂಗ ತನ್ನ ಹಿಡಿತವನ್ನು ಬಿಟ್ಟು ತೂಗಿ ಎದುರು ದಂಡೆಗೆ ಬರುತ್ತದೆ. ಅದು ಎದುರು ದಂಡೆ ಮುಟ್ಟಿದೊಡನೆ ಸರಪಳಿ ಮುರಿದು ಮಂಗಗಳೆಲ್ಲ ಕೆಲೆಯುತ್ತ ಎದುರು ದಂಡೆಯ ಗಿಡಗಳನ್ನೇರಿ ಹಾರಾಡತೊಡಗುತ್ತವೆ. ನುರಿತ ದೊಂಬರಾಟದವರ ಕೃತಿಯಂತೆ ಮಂಗಗಳ ಈ ಚಮತ್ಕಾರ ಕಾಣಿಸುತ್ತದೆ.

ಪಶು-ಪಕ್ಷಿಗಳು ತಮ್ಮ ಗುಂಪಿನಲ್ಲಿ ಯಾವದಾದರೂ ಗಾಯಗೊಂಡು ಅಸಹಾಯಕವಾದಾಗ ಅದರ ಬಗ್ಗೆ ತುಂಬ ಕಾಳಜಿ ವಹಿಸಿ ಅವರ ಆರೈಕೆ ಮಾಡುವ ದೃಷ್ಟಾಂತಗಳೂ ಕಂಡು ಬಂದಿವೆ.

ನರಿ, ಕಾಗೆ ಮೊದಲಾದವುಗಳೂ ಸಹಕಾರದಿಂದ ಕಾರ್ಯಮಾಡುವದುಂಟು.

ಪ್ರಾಣಿಗಳು ಈ ರೀತಿ ಸಹಕರಿಸಿ ಕಾರ್ಯ ಮಾಡುವದನ್ನು ಹೇಗೆ ಕಲಿತವು ಎಂದರೆ ಹೇಳಲು ಬಾರದು. ಅದು ನಿಸರ್ಗದತ್ತವಾಗಿ ಅವುಗಳಿಗೆ ಬಂದದ್ದು ಎಂದಷ್ಟೇ ಹೇಳಬಹುದಾಗಿದೆ.



## ನಮ್ಮ ರೂಪಾಯಿಗೆ ಬೇರೆ ಬೇರೆ ದೇಶಗಳಲ್ಲಿ ಏನು ಬೆಲೆ ಇರುತ್ತದೆ?

೧ ರೂಪಾಯಿ = ೨೧ ಸೆಂಟ್ಸ-ಸಂಯುಕ್ತ ಸಂಸ್ಥಾನ (ಅಮೇರಿಕೆ)
,, = ೧ ಶಿ. ೮ ಪೆನ್ಸ ಯುನಾಯಟೆಡ್ ಕಿಂಗ್ಡಮ (ಇಂಗ್ಲಂಡ)
,, = ·೮೮ ಮಾರ್ಕ್ಸ (ಪಶ್ಚಿಮ ಜರ್ಮನಿ)
,, = ·೮೪ ರೂಬೆಲ್ಸ-ಯು. ಎಸ್. ಎಸ್. ಆರ್. (ರಶಿಯಾ)
,, = ೭೨·೪೯ ಫ್ರಾಂಕ್ಸ (ಫ್ರಾನ್ಸ)
,, = ೧೩೧ ಲಾಯರ್ಸ (ಇಟಲೀ)
,, = ೧·೦೯ ಸ್ಕೀರ (ಸ್ವೀಡನ)
,, = ೭೫·೬ ಯೆನ್ (ಜಪಾನ)
,, = ೨·೪ ರುಪಾಯ್ಯ (ಇಂಡೊನೇಸಿಯಾ)

ಬರ್ಮ, ಸಿಲೋನ, ಪಾಕಿಸ್ಥಾನಗಳಲ್ಲಿ ನಮ್ಮ ರೂಪಾಯಿಗೆ ಅಲ್ಲಿಯ ರೂಪಾಯಿಯಷ್ಟೆ ಬೆಲೆ ಬರುತ್ತದೆ.

ಇದರಿಂದ ನಮ್ಮ ವ್ಯಾಪಾರಸ್ಥರಿಗೆ, ಆಯಾ ದೇಶಗಳಲ್ಲಿ ವ್ಯಾಪಾರ ವ್ಯವಹಾರದ ಬಗ್ಗೆ ಕೊಡಬೇಕಾದ ಹಣ ಮತ್ತು ಇತರ ಆಯಾ ದೇಶಗಳ ವ್ಯಾಪಾರಸ್ಥರ ಕಡೆಯಿಂದ ಬರತಕ್ಕ ಹಣದ ಬಗ್ಗೆ ನಿಶ್ಚಿತವಾದ ಜ್ಞಾನವು ಉಂಟಾಗುತ್ತದೆ.

(೧೯೫೬ ಇಂಡಿಯಾ ಪುಸ್ತಕದ ಆಧಾರದಿಂದ ಕೇಂದ್ರ ಸರಕಾರದ ಪ್ರಕಟನೆ)

— ಗೋವಿಂದರಾಮಾಚಾರ್ಯ

ಇಂಗ್ಲಂಡಿನಲ್ಲಿ ಕಳೆದ ನೂರು ವರ್ಷಗಳಲ್ಲಿ ವಿವಾಹವಿಚ್ಛೇದದಿಂದಾದ ಅನರ್ಥಗಳನ್ನು ನೋಡಿ, ವಿವಾಹ ವಿಚ್ಛೇದ ಕಾಯದೆಗಳನ್ನು ಭರದಿಂದ ಪಾಸು ಮಾಡುತ್ತಿರುವ ನಾವು ಪಾಠ ಕಲಿಯಬಹುದು




# ಇಂಗ್ಲಂಡಿನಲ್ಲಿ ವಿವಾಹವಿಚ್ಛೇದ

—ಎಸ್. ವಿ. ಪಾಟೀಲ

ಒಂದು ನೂರು ವರ್ಷಗಳ ಹಿಂದೆ, ಆ ಚಿರಸ್ಮರಣೀಯವಾದ ೧೮೫೭ ರಲ್ಲಿ, ಇಂಗ್ಲಂಡಿನಲ್ಲಿ ಮೊಟ್ಟಮೊದಲು ವಿವಾಹ ವಿಚ್ಛೇದನ ನ್ಯಾಯಾಲಯ ಸ್ಥಾಪಿಸಲ್ಪಟ್ಟಿತು. ಅದಾದ ಒಂದು ಶತಮಾನದಲ್ಲಿ ಇಂಗ್ಲಂಡಿನಲ್ಲಿ ಕೌಟುಂಬಿಕ ಜೀವನದಲ್ಲಿ ಆದ ಕ್ರಾಂತಿಯನ್ನು ನೋಡಲು ಬದುಕಿದ್ದರೆ ವಿವಾಹ ವಿಚ್ಛೇದನ ಕಾಯದೆಯ ಮೂಲ ಪ್ರವರ್ತಕರು ಖಂಡಿತ ಬೆರಳು ಕಚ್ಚುತ್ತಿದ್ದರು.

ವಿವಾಹ ವಿಚ್ಛೇದನಕ್ಕೆ ಆಸ್ಪದ ಸಿಕ್ಕಿದ್ದರಿಂದ ಕುಟುಂಬ ಬಂಧನವು ಹರಿದು, ವಿವಾಹಗಳು ಗಾಳಿಗಿಟ್ಟ ದೀಪಗಳಂತಾದವೆಂದು ಲಂಡನ್ನಿನ ಕಿಂಗ್ಸ್ ಕಾಲೇಜಿನ ನ್ಯಾಯಪಂಡಿತರಾದ ಆರ್. ಎಚ್. ಗ್ರೇವ್‌ಸನ್ ಮತ್ತು ಎಫ್. ಆರ್. ಕ್ರೇನರು ತಮ್ಮ ಪುಸ್ತಕದಲ್ಲಿ ಬರೆದಿದ್ದಾರೆ. ಅವರು ಕೊಡುವ ಅಂಕೆಗಳು ಇದರಲ್ಲಿ ಯಾವ ಸಂಶಯವನ್ನೂ ಉಳಿಸುವುದಿಲ್ಲ: ಮೊದಲನೇ ಮಹಾಯುದ್ಧದ ನಂತರ ವಿವಾಹ ವಿಚ್ಛೇದನಗಳ ಸಂಖ್ಯೆ ನಾಲ್ಕುಪಟ್ಟು ಹೆಚ್ಚಾಯಿತು. ಎರಡನೇ ಮಹಾಯುದ್ಧವು ಈ ಸಂಖ್ಯೆಯನ್ನು ಮತ್ತೆ ಐದು

ಷಟ್ಟು ಹೆಚ್ಚಿಸಿತು. ೧೮೭೧ ರಲ್ಲಿ ಪ್ರತಿ ೧,೧೫೦ ಮದುವೆಗಳಿಗೆ ೧ ವಿವಾಹವಿಚ್ಛೇದನವಾಗುತ್ತಿತ್ತು. ೧೯೫೨ ರಷ್ಟು ಹೊತ್ತಿಗೆ ಪ್ರತಿ ೧೦ ಮದುವೆಗಳಲ್ಲಿ ಒಂದು ಘಟಸ್ಫೋಟದಲ್ಲಿ ಪರ್ಯವಸಾನ ಹೊಂದಿತು. ಈಗ ಪ್ರತಿ ವರ್ಷ ಘಟಸ್ಫೋಟಗಳ ಫಲವಾಗಿ ೨೦,೦೦೦ ಮಕ್ಕಳ ಬಾಳು ಹದಗೆಡುತ್ತಿದೆ.

ಇಂಗ್ಲಂಡಿನ ಪರಂಪರಾಗತ ಕಾಯದೆಯಲ್ಲಿ ಕುಟುಂಬದ ಒಗ್ಗಟ್ಟು ಮುಖ್ಯ ತತ್ವವಾಗಿತ್ತು. ಕುಟುಂಬದ ಯಜಮಾನ ತಂದೆ ಎಂಬುದೇ ಅದರ ಆಧಾರವಾಗಿತ್ತು. ಗಂಡನ ಅಧಿಕಾರ ಸರ್ವಾಧಿಕಾರವಾಗಿತ್ತು. ಜೀವನದಲ್ಲಿ ಹೆಂಡತಿಯ ವ್ಯಕ್ತಿತ್ವ ಗಂಡನ ವ್ಯಕ್ತಿತ್ವದಲ್ಲಿ ವಿಲೀನವಾಗಿ ಕಾಯದೆಯ ಕ್ರಮಗಳಲ್ಲೆಲ್ಲ ಗಂಡನೇ ಹೆಂಡತಿಯ ಪ್ರತಿನಿಧಿಯಾಗಿರುತ್ತಿದ್ದನು. ಹೆಂಡತಿಯ ಆಸ್ತಿ, ಅವಳ ಅಪರಾಧ, ಹೊಣೆ, ಬಾಧ್ಯತೆ ಮೊದಲಾದವುಗಳು ಗಂಡನ ಆಸ್ತಿ, ಅವನ ಅಪರಾಧ, ಹೊಣೆ, ಬಾಧ್ಯತೆಯೆಂದೇ ಬಗೆಯಲ್ಪಡುತ್ತಿದ್ದವು. ಮಕ್ಕಳ ಮೇಲಿನ ಅಧಿಕಾರವನ್ನು ಸಂಪೂರ್ಣವಾಗಿ ತಂದೆಯೊಬ್ಬನಿಗೇ ಕಾಯದೆಯು ಒಪ್ಪಿಸಿಕೊಟ್ಟಿತ್ತು. ಗಂಡನನ್ನು ಯೋಗ್ಯ ಕಾರಣದಿಂದಲೇ ಆಗಲಿ, ಅನ್ಯಥಾ ಆಗಲಿ ಬಿಟ್ಟ ಹೆಂಡತಿಯ ಅವಸ್ಥೆ ಕಾಯದೆಯಂತೆ ಶೋಚನೀಯವಾಗಿತ್ತು. ಯಾರೊಡನೆಯೂ ಯಾವ ಬಗೆಯ ಒಪ್ಪಂದ-ಕರಾರುಗಳನ್ನು ಮಾಡಿಕೊಳ್ಳಲೂ ಅವಳಿಗೆ ಬರುತ್ತಿರಲಿಲ್ಲ. ಅತ್ತ ಹೆಂಡತಿಯನ್ನು ಬಿಟ್ಟ ಗಂಡನಿಗೆ ಕಾಯದೆಬದ್ಧವಾದ ಕುಟುಂಬ ಜೀವನಕ್ಕೆ ಆಸ್ಪದವಿರಲಿಲ್ಲ. ಆದರೆ ಅನಿರ್ಬಂಧ ಯಜಮಾನಿಕೆ ಮತ್ತು ವ್ಯಭಿಚಾರಸ್ವಾತಂತ್ರ್ಯ ಅವನಿಗಿದ್ದುದರಿಂದ ಹೆಂಡತಿಯನ್ನು ಬಿಟ್ಟುಬಿಡಬೇಕಾದ ಅಗತ್ಯವೇ ಕಂಡು ಬರುತ್ತಿರಲಿಲ್ಲ. ಅವನ ಹೊಣೆಗಾರಿಕೆಗೆ ಅನುಗುಣವಾಗಿ ಅವನ ಅಧಿಕಾರವಿತ್ತು.

೧೮೫೭ ರಲ್ಲಿ ವಿವಾಹವಿಚ್ಛೇದನಕ್ಕೆ ಕಾಯದೆಯು ಅವಕಾಶ ಮಾಡಿಕೊಟ್ಟರೂ ಮೇಲಿನಂತೆ ಕುಟುಂಬದ ಐಕ್ಯಕ್ಕೆ ರಕ್ಷಣೆಗಳಿದ್ದವು. ಆದ್ದರಿಂದ ಈ ವಿಚ್ಛೇದನದ ಹಕ್ಕನ್ನು ಉಪಯೋಗಿಸಿಕೊಳ್ಳಲು ಕೈಬೆರಳಲ್ಲೆಣಿಸುವಷ್ಟು ಜನರು ಮಾತ್ರ ಮುಂದೆ ಬಂದರು. ಆದರೆ ಸ್ತ್ರೀವಿಮೋಚನೆಯ ಅಧ್ವರ್ಯುಗಳಾದ ಉದಾರ ಮತವಾದಿಗಳಿಗೆ ಇದರಿಂದ ಸಮಾಧಾನವಾಗಲಿಲ್ಲ. ಉದಾರ ಮತವಾದಿ ತತ್ವಜ್ಞಾನಿಯಾದ ಜಾನ್ ಸ್ಟುವರ್ಟ ಮಿಲ್ಲನು, "ಇಂದು ನಮ್ಮ ದೇಶದಲ್ಲಿ ಉಳಿದಿರುವ ಕಾಯದೆಬದ್ಧ ಗುಲಾಮರೆಂದರೆ ಪ್ರತಿ ಮನೆಯ ಗೃಹಲಕ್ಷ್ಮಿಯರು ಮಾತ್ರ" ಎಂದು ಟೀಕಿಸಿದನು.

ಉದಾರ ಮತವಾದಿಗಳ ಬಲವಾದ ಒತ್ತಾಯವು ಸ್ತ್ರೀಸ್ವಾತಂತ್ರ್ಯವನ್ನು ವಿಸ್ತಾರಗೊಳಿಸುತ್ತ ಹೋದಂತೆ ವಿವಾಹ ಬಂಧನವು ಜಾರುಬಂಡೆಯಲ್ಲಿ ಭರದಿಂದ ಜಾರುತ್ತ ಹೋಯಿತು.

೧೮೫೭ ರಿಂದ ೧೯೫೭ ರ ವರೆಗಿನ ಶತಮಾನದಲ್ಲಿ ಹೆಂಡತಿಯು ಗಂಡನಿಗಧೀನವಾದ ವಸ್ತು ಎನ್ನುವದು ಹೋಗಿ ಅವನಿಗೆ ಸಮಾನಳಾದವಳು ಎಂದಾದುದು ಮಾತ್ರವಲ್ಲದೆ, ಅವಳಿಗೆ ಕಾಯಿದೆಯಿಂದ ವಿಶೇಷ ರಕ್ಷಣೆಯು ದೊರೆತಿರುವದೇ ಕುಟುಂಬಜೀವನದಲ್ಲಿ ಸಂಭವಿಸಿರುವ ಅತ್ಯಂತ ಮಹತ್ವದ ಬದಲಾವಣೆಯಾಗಿದೆ.

೧೮೭೦ ರಲ್ಲಿ ಇಂಗ್ಲಂಡಿನಲ್ಲಿ ಆದ ವಿವಾಹಿತ ಸ್ತ್ರೀಯ ಆಸ್ತಿ ಕಾಯದೆಯು ಹೆಂಡತಿಗೆ ಅವಳು ದುಡಿದದ್ದನ್ನು ತನ್ನ ಉಪಯೋಗಕ್ಕಾಗಿಯೇ ಇಟ್ಟುಕೊಳ್ಳುವ ಅಧಿಕಾರವನ್ನು ಕೊಟ್ಟಿತು. ೧೮೮೨ ರ ಕಾಯದೆಯು ಎಲ್ಲ ಬಗೆಯ ಆಸ್ತಿಯಲ್ಲಿ ಅವಳಿಗೆ ಅಧಿಕಾರವನ್ನು ಪ್ರಾಪ್ತಮಾಡಿಕೊಟ್ಟಿತು. ೧೮೯೧ ರಲ್ಲಿ ಹೆಂಡತಿಯನ್ನು ಮನೆಯಲ್ಲಿ ನಿರ್ಬಂಧಿಸಿಡುವ ಗಂಡನ ಅಧಿಕಾರ ಸಂಪೂರ್ಣ ಲುಪ್ತವಾಗಿ ಹೋಯಿತು.

ಈ ಕಾಯದೆಯ ವಿಷಯವನ್ನು ಎತ್ತಿಕೊಂಡು "ನಾಯಂಟೀನ್ಥ ಸೆಂಚುರಿ ಮ್ಯಾಗಝಿನ್" ಎಂಬ ಪತ್ರಿಕೆಯು "ಕಳೆದ ತಿಂಗಳಲ್ಲಿ ಒಂದು ದಿನ ಬೆಳಗಾಗುವದರೊಳಗಾಗಿ ಇಂಗ್ಲಂಡಿನಲ್ಲಿ ವಿವಾಹ ಸಂಸ್ಥೆಯನ್ನೇ ತೊಡೆದುಹಾಕಲಾಗಿದೆ" ಎಂದು ಬರೆದಿತ್ತು!

೧೮೮೬ ರಲ್ಲಿಯೇ ಹೆಂಡತಿಗೆ ಗಂಡನ ಮರಣಾನಂತರ ತನ್ನ ಮಕ್ಕಳ ಪಾಲಕಳಾಗುವ ಅಧಿಕಾರ

ಪ್ರಾಪ್ತವಾಗಿತ್ತು. ಅವನ ಜೀವಮಾನದಲ್ಲಿಯೆ ಅವರನ್ನು ತನ್ನ ಹತ್ತರ ಇಟ್ಟುಕೊಳ್ಳುವದಕ್ಕೆ ಅಪ್ಪಣೆಯನ್ನು ಅವಳು ನ್ಯಾಯಾಲಯದಿಂದ ಪಡೆಯಬಹುದಾಗಿತ್ತು.

ಸಂಗಡಲೇ ಹೆಂಡತಿಯ ಕೃತಿಗಳಿಗೆ ಗಂಡನು ಹೊಣೆಗಾರನೆಂಬ ತತ್ವವೂ ಸಡಿಲಿಸಲ್ಪಟ್ಟಿತು. ಗಂಡನ ಸಮಕ್ಷಮದಲ್ಲಿ ಹೆಂಡತಿಯಿಂದ ಗಂಭೀರ ಅಪರಾಧವಾಗಿದ್ದರೆ ಗಂಡನ ಒತ್ತಾಯದಿಂದ ಅವಳು ಹಾಗೆ ಮಾಡಿದ್ದಾಳೆಂಬುದು ಮೊದಲಿನ ಕಾಯದೆಯ ಗ್ರಹಿಕೆಯಾಗಿತ್ತು. ೧೯೨೫ ರ ಕಾಯದೆಯು ಇದನ್ನು ರದ್ದುಪಡಿಸಿತು.

೧೯೩೫ ರಲ್ಲಿ ಹೆಂಡತಿಗೆ ಕೊನೆಯದಾಗಿ, ಸ್ವತಂತ್ರವಾಗಿ ಕರಾರುಗಳನ್ನು ಮಾಡಿಕೊಳ್ಳುವ ಅಧಿಕಾರ ಸಿಕ್ಕಿತು; ಮತ್ತು ವಿವಾಹಪೂರ್ವದಲ್ಲಿ ಹೆಂಡತಿ ಮಾಡಿದ ಸಾಲಕ್ಕೆ ಗಂಡನೇ ಹೊಣೆ ಯೆಂಬ ತತ್ವವೂ ರದ್ದಾಯಿತು. ಹೀಗೆ ಗಂಡನ ಹಕ್ಕಿನಂತೆ ಹೊಣೆಯೂ ಸಡಿಲಾಯಿತು.

ಇದೇ ಅವಧಿಯಲ್ಲಿ ಸ್ತ್ರೀಗೆ ಮತಾಧಿಕಾರ ಮೊದಲಾದ ರಾಜಕೀಯ ಮತ್ತು ಆರ್ಥಿಕ ಸ್ವಾತಂತ್ರ್ಯಗಳು ಸಿಕ್ಕಿದ ವಿಷಯ ಎಲ್ಲರಿಗೂ ಗೊತ್ತಿದೆ.

ಕರಗಳ ವಿಚಾರದಲ್ಲಿ ಮಾತ್ರ ಗಂಡ-ಹೆಂಡಿರ ಏಕಜೀವನದ ಹಳೆಯ ಕಾಯದೆ ಜೀವಂತವಿದೆ. ಕರದ ಮಟ್ಟಿಗೆ ಹೆಂಡತಿಯ ಗಳಿಕೆ ಗಂಡನ ಉತ್ಪನ್ನದ ಅಂಶವೆಂದೇ ಪರಿಗಣಿಸಲ್ಪಡುತ್ತಿದೆ. ಕೌಟುಂಬಿಕ ಒಕ್ಕಟ್ಟನ್ನು ಶಿಥಿಲಗೊಳಿಸುವ ಈ ಒಂದು ವಿಚಾರದಲ್ಲಿ ಮಾತ್ರ ಹಳೆಯ ಕಾಯದೆಗೆ ಜೀವದಾನ ಸಿಕ್ಕಿದೆ. ಇದರಿಂದ ಅನೈತಿಕ ಜೀವನವೇ ಅಗ್ಗ ಎಂಬಂತಾಗಿಬಿಟ್ಟಿದೆ.

ಈ ಶತಮಾನದಲ್ಲಿ ವಿವಾಹಿತೆಯರಿಗೆ ನ್ಯಾಯವು ಮಿತಿಮೀರಿದ ಪ್ರಮಾಣದಲ್ಲಿ ದೊರೆತಿದೆ. ಸ್ತ್ರೀಪುರುಷರಿಗೆ ಎಲ್ಲ ವಿಷಯಗಳಲ್ಲೂ ಸಮಾನಾಧಿಕಾರವಿರುವದು ನ್ಯಾಯ ಎನ್ನುವ ಭರದಲ್ಲಿ ಅದರ ಸಾಧನೆಯಿಂದ ಆಗಬಹುದಾದ ಸಾಮಾಜಿಕ ಅನಾಹುತಗಳ ವಿಚಾರವು ಮೂಲೆಪಾಲಾಗಿ ಹೋಯಿತು.

ಸ್ತ್ರೀ ಸ್ವಾತಂತ್ರ್ಯದ ಮೂಲಕವೇ ಇಂದಿನ ಕುಟುಂಬ ಜೀವನದಲ್ಲಿ ಶಿಥಿಲತೆ ಕಂಡುಬರುತ್ತಿದೆ ಎನ್ನುವದು ಸಾಹಸದ್ದಾಗಬಹುದಾದರೂ ಅವೆರಡಕ್ಕೂ ನಿಕಟ ಸಂಬಂಧವಿದೆಯೆನ್ನುವದು ಸುಳ್ಳಲ್ಲ.

ಮೊದಲಿಗೆ ವಿವಾಹ ವಿಚ್ಛೇದನಗಳು ಅಪರೂಪವಾಗಿದ್ದವು. ಮುಂದೆ ಅವು ತೀರ ಸಾಮಾನ್ಯ ಘಟನೆಗಳಾಗಿ ವಿವಾಹವೆಂದರೆ ಕಾಯದೆಬದ್ಧ ವ್ಯಭಿಚಾರಜೀವನ ಎನ್ನುವ ಮಟ್ಟಕ್ಕೆ ಬಂದಿತು.

ಪುರಾತನ ರೋಮನ್ನರು ಕ್ರಿ. ಶ. ೧-೨ ನೇ ಶತಮಾನಗಳಲ್ಲಿ ಗಂಡನ ಅಧಿಕಾರವನ್ನು ಕಡಿಮೆ ಮಾಡಿದಾಗಲೂ ಇದೇ ಬಗೆಯ ಪರಿಣಾಮವಾಗಿತ್ತೆಂದು ನೆನೆದುಕೊಳ್ಳಬಹುದು.

ಇತ್ತೀಚಿನ ಜಾಗತಿಕ ಯುದ್ಧಗಳ ಅನಾಹುತವು ಇದಕ್ಕೆ ಕಾರಣವೆನ್ನಲು ಬರುವಂತಿಲ್ಲ. ಏಕೆಂದರೆ ಕುಟುಂಬಜೀವನದ ಶೈಥಿಲ್ಯ ಕಂಡು ಬಂದಿದ್ದು ಸಮೃದ್ಧ ಸ್ಥಿತಿಯಿರುವಾಗಲೇ. ಮೊದಲು ಗಂಡನ ಅಧಿಕಾರಕ್ಕೆ ಒಳಪಟ್ಟಿದ್ದ ಹೆಂಡತಿ ಈಗ ಅವನಿಗೆ ಸರಿಸಮಾನಳಾದಳು. ಇಬ್ಬರದೂ ಆಗಿದ್ದ ಆಸ್ತಿ ಪ್ರತ್ಯೇಕವಾಯಿತು. ಸಂತಾನ ವೃದ್ಧಿಯಲ್ಲಿ ಹೆಮ್ಮೆಪಡುತ್ತಿದ್ದ ಸ್ತ್ರೀ ಸಂತಾನಕ್ಕೆ ಹೆದರುವಂತಾಯಿತು. ಮೊದಲು ಪತಿವ್ರತೆಯಾಗಿದ್ದವಳು ಸುಲಭದಲ್ಲಿ ವ್ಯಭಿಚಾರಕ್ಕಿಳಿಯುವಂತಾಯಿತು. ಇಷ್ಟೆಲ್ಲ ಸೌಲಭ್ಯ ನ್ಯಾಯದ ಹೆಸರಲ್ಲಿಯೇ ದೊರಕಿತು.

ವಿವಾಹವಿಚ್ಛೇದದಿಂದ ಎಲ್ಲರಿಗಿಂತ ಹೆಚ್ಚು ಹಾನಿಯಾಗುವದು ಮಕ್ಕಳಿಗೆ. ಮಕ್ಕಳಿಗಾಗಿ ಕಾಯದೆ ವಿಶೇಷವೇನನ್ನೂ ಮಾಡಲಿಲ್ಲ. ವಿಚ್ಛೇದದ ಜಗಳ ತೀರ್ಮಾನಿಸುವಾಗ ಮಗುವಿನ ಹಿತಕ್ಕೇ ಪ್ರಾಧಾನ್ಯವಿರಬೇಕೆಂಬುದು ಹಳೆಯ ಸಿದ್ಧಾಂತ. ೧೯೨೫ ರಲ್ಲಿ ಈ ಸಿದ್ಧಾಂತವನ್ನು ಸಾಧಾರಣವಾಗಿ ಮಾಡಲಾಯಿತು. ವ್ಯಭಿಚಾರದಿಂದ ಹುಟ್ಟಿದ ಮಗುವು ಅನಂತರ ಆದ ಮದುವೆಯ ಗಂಡನ ಕಾಯದೇಬದ್ಧ ಮಗುವೆಂದು ಹಿಡಿಯಲು ೧೯೨೬ ರಲ್ಲಿ ಕಾಯದೆಯು ಅವಕಾಶ ಕೊಟ್ಟಿತು. ಆದರೆ ವ್ಯಭಿಚಾರ ಜಾತ ಮಗುವಿನ ತಂದೆ ತಾಯಿಗಳಲ್ಲೊಬ್ಬರಿಗೆ ಮದುವೆಯಾಗಿದ್ದರೆ, ಆ ಮಗು ಸದಾಕಾಲವೂ ಕುಲಗೆಟ್ಟ

ಮಗುವೇ ಆಗಿ ಉಳಿಯಬೇಕಾಗಿದೆ.

ವಿವಾಹ ವಿಚ್ಛೇದನ ನ್ಯಾಯಾಲಯಗಳ ಅಧಿಕಾರವ್ಯಾಪ್ತಿ ಹೆಚ್ಚಾದದ್ದೂ ವಿವಾಹವಿಚ್ಛೇದನ ಪ್ರಕರಣಗಳು ಹೆಚ್ಚಲು ಒಂದು ಕಾರಣವಾಗಿದೆ. ಪುರುಷರಿಗಿಂತ ಸ್ತ್ರೀಯರ ವ್ಯಭಿಚಾರವು ಹೆಚ್ಚಿನ ಅಪರಾಧವೆಂದು ಹಿಂದೆ ಪರಿಗಣಿಸಲ್ಪಡುತ್ತಿತ್ತು. ಆದರೆ ೧೯೨೩ ರಲ್ಲಿ ಗಂಡ ವ್ಯಭಿಚಾರಿ ಎಂಬ ಒಂದೇ ಕಾರಣಕ್ಕಾಗಿ ಸ್ತ್ರೀಗೆ ಅವನಿಂದ ವಿಚ್ಛೇದನ ಪಡೆಯುವ ಅಧಿಕಾರ ಕೊಡಲ್ಪಟ್ಟಿತು. ಇದರ ಪರಿಣಾಮ ಸೋಜಿಗದ್ದಾಗಿದೆ. ವಿವಾಹ ವಿಚ್ಛೇದನ ಬೇಕಾದವರು ಯಾವದಾದರೂ ಹೋಟೆಲಿನಲ್ಲಿ ಒಂದೇ ಒಂದು ರಾತ್ರಿಯನ್ನು ಒಬ್ಬ ವೇಶ್ಯೆಯ ಸಂಗಡ ಕಳೆದು, ಪರಿಚಾರಿಕೆಯ ಕೈಬೆಚ್ಚಗೆ ಮಾಡಿ ನ್ಯಾಯಾಲಯದಲ್ಲಿ ತಮ್ಮ ಕೃತ್ಯದ ಸಾಕ್ಷೆ ಹೇಳಿಸಿ, ವಿಚ್ಛೇದನ ಪಡೆಯತೊಡಗಿದರು !

ಕಳೆದೊಂದು ಶತಮಾನದಿಂದ ವಿವಾಹ ವಿಚ್ಛೇದ ಸುಲಭವಾಗುತ್ತ ಬಂದಿದೆಯೆಂಬುದಕ್ಕಾಗಿ ಸ್ತ್ರೀಪಕ್ಷಪಾತಿಗಳು ಹಿಗ್ಗಬಹುದಾಗಿದೆ. ಆದರೆ ಇತರರು ಇದಕ್ಕಾಗಿ ಅಷ್ಟು ಸಂತೋಷಪಡುತ್ತಿಲ್ಲ.

ಕಳೆದ ವರ್ಷ ಇಂಗ್ಲಂಡಿನ ವಿವಾಹ ಕಾಯದೆಗಳನ್ನು ಪರಿಶೀಲಿಸಿ ಸುಧಾರಣೆಗಳನ್ನು ಸೂಚಿಸಿದ ಆಯೋಗದ ವರದಿಯು ಸ್ತ್ರೀಯರ ಅನಿರ್ಬಂಧ ಸ್ವಾತಂತ್ರ್ಯಕ್ಕಿರುವ ಅಲ್ಪಸ್ವಲ್ಪಅಡ್ಡಿಗಳನ್ನೂ ತೊಡೆದುಹಾಕಲು ಅಪೇಕ್ಷಿಸಿದೆ. "ವಿವಾಹವು ಪಾಲುಗಾರಿಕೆ" ಯಾಗಬೇಕು ಎಂಬುದೇ ಅದರ ಪಲ್ಲವಿ. ರಶಿಯದಲ್ಲಿ ಸ್ತ್ರೀಪುರುಷರ ಸಮಾನತೆಯನ್ನು ಸಂಪೂರ್ಣ ಒಪ್ಪಿಕೊಂಡಿರುವದರಿಂದ ಗಂಡ ಹೆಂಡಿರು ಪ್ರತ್ಯೇಕ ಸಾಮಾಜಿಕ ಜೀವನ ನಡೆಸುವ ಪ್ರವೃತ್ತಿ ಬೆಳೆದಿದೆ. ಇದನ್ನು ನೆನೆದು, ಲಾರ್ಡ್ ಈಶರ್‌ವುಡ್ಡರಂಥ ವಿಚಾರಿಗಳು ಹೀಗನ್ನುತ್ತಾರೆ: "ಈತತ್ವವನ್ನು ಸಂಪೂರ್ಣವಾಗಿ ಜಾರಿಗೆ ತಂದರೆ ವಿವಾಹವೆಂಬುದೊಂದು ಕಂಪನಿ, ಅದರಲ್ಲಿ ಗಂಡ ಹೆಂಡಿರು ಪಾಲುಗಾರರು ಎಂದಾದೀತು. ಇಷ್ಟಾಗಿಬಿಟ್ಟರೆ ಕುಟುಂಬವು ಸಮಾಜದ ಘಟಕವಾಗಿ ಉಳಿಯುವ ಆಶೆಯೇ ಇಲ್ಲ."

ವಿಚ್ಛೇದ ಕಾಯದೆಗಳು ಉದಾರವಾಗಿದ್ದ ದೇಶಗಳಲ್ಲೆಲ್ಲ ಇಂದು ಮದುವೆಯೆಂಬುದೊಂದು "ಮುಕ್ಕಾಲೋಟ" ವಾಗಿಬಿಟ್ಟಿದೆ. ಮದುವೆಯ ಓಟ ಏಳುತ್ತ ಬೀಳುತ್ತ ಸಾಗಿದೆ. ವಿಚ್ಛೇದವು ಅನಿವಾರ್ಯವರವೂ ಆಗಿರಬಹುದು; ಆದರೆ ಇಂಗ್ಲಂಡಿನಲ್ಲಿ ವಿವಾಹವಿಚ್ಛೇದದ ಶತಮಾನೋತ್ಸವವನ್ನಾಚರಿಸುವಾಗ ಅದು ವರವೋ ಶಾಪವೋ ಎಂದು ಯೋಚಿಸಬೇಕಾದ ಪರಿಸ್ಥಿತಿಯಿದೆ.



**ತನ್ನ ಅರಸನನ್ನು ಮಿತ್ರನಂತೆ ಪ್ರೀತಿಸಲು ಇಂಗ್ಲೀಷು ಮನುಷ್ಯ ಕಲಿತಿರುತ್ತಾನೆ. ಆದರೆ ಆತ ತನ್ನ ದೇಶದಲ್ಲಿ ಪ್ರಚಲಿತವಾದ ಕಾಯದೆಗಳ ಹೊರತು ಬೇರಾವ ಪ್ರಭುವಿಗೂ ತಲೆವಾಗಲು ಕಲಿತಿರುವುದಿಲ್ಲ. ಒಬ್ಬನಿಗೆ ಸರ್ವತಂತ್ರ ಸ್ವತಂತ್ರನಾಗಲೆಡೆಗೊಟ್ಟು ತಾವೆಲ್ಲ ಅವನ ಗುಲಾಮರಂತಿರಲು ಒಪ್ಪುವ ಜನಾಂಗಗಳನ್ನು, ಮೊದಲು ಒಬ್ಬನನ್ನು ಪ್ರಜಾಪೀಡಕನಾಗುವಷ್ಟು ಮೇಲೆತ್ತಿ, ಅನಂತರ ಅವನ ಅಧಿಕಾರ ದೈವದತ್ತವೆಂಬಂತೆ ಬಗ್ಗಿ ನಡೆಯುವ ದೇಶಗಳನ್ನು ಇಂಗ್ಲೀಷು ಮನುಷ್ಯ ತಿರಸ್ಕಾರದಿಂದ ಕಾಣುತ್ತಾನೆ.**

—ಒಲಿವರ್ ಗೋಲ್ಡ್‌ಸ್ಮಿತ್

# ಸವಿಯಿದ್ದೂ ಔಷಧ: ಜೇನು

ಮೊದಲನೆಯ ಮಹಾಯುದ್ಧದಲ್ಲಿ ಜರ್ಮನರ ದಾಳಿಯಿಂದ ಬ್ರಿಟಿಶರ ಲುಸಿಟಾನಿಯಾ ಹಡಗು ಮುಳುಗಿಹೋಗಿತ್ತು. ಈ ಹಡಗನ್ನು ಮೇಲಕ್ಕೆತ್ತುವ ಸಿದ್ಧತೆ ೧೯೫೨ರಲ್ಲಿ ಆರಂಭವಾಯಿತು. ಈ ಕೆಲಸದಲ್ಲಿ ಭಾಗವಹಿಸಲಿರುವ ಸಾಹಸಿಗಳಿಗೆ ಕೆಲಸವನ್ನು ಆರಂಭಿಸುವ ಮೂರು ತಿಂಗಳ ಮೊದಲೇ ದಿನಕ್ಕೆ ೧½ ಪೌಂಡಿನಂತೆ ಜೇನನ್ನು ಆಹಾರದೊಂದಿಗೆ ಕೊಡತೊಡಗಿದರು. ಸಮುದ್ರದಾಳಕ್ಕೆ ಇಳಿದು ಮುಳುಗಿದ ಹಡಗನ್ನು ಮೇಲಕ್ಕೆತ್ತುವ ದೇಹದಾರ್ಢ್ಯ ಮತ್ತು ಶೈತ್ಯನಿವಾರಣೆ ಜೇನಿನ ಮೂಲಕ ಆ ಸಾಹಸಿಗಳಿಗೆ ದೊರೆಯಿತು.




ಎರಡನೆಯ ಮಹಾಯುದ್ಧದಲ್ಲಿಯೂ ಜೇನಿನ ಅಮೃತವೇ ವೈಮಾನಿಕ ವೀರರ ಸಂಜೀವಿನಿಯಾಯಿತು. ವಾತಾವರಣದ ಉಷ್ಣತೆ ಶೂನ್ಯಾಂಶಕ್ಕಿಂತ ೧೫ ಡಿಗ್ರಿ ಕಡಮೆ ಇರುವ ೫ ಮೈಲಿಗಿಂತಲೂ ಎತ್ತರದ ಪ್ರದೇಶಗಳಲ್ಲಿ ಹಾರಾಡಲು ಬ್ರಿಟಿಶ ವಿಮಾನ ಬಲದ ವೀರರು ಜೇನಿನ ಸೇವನೆಯಿಂದಲೇ ಶಕ್ತರಾದರು.

ಸರಳವಾದ, ರುಚಿಯಾದ ಜೇನು ಶತಸಹಸ್ರ

ಭವನ ಜರ್ನಲ್ ಆಧಾರದಿಂದ

ಮಾನಗಳ ಹಿಂದಿನಿಂದಲೂ ಮಾನವನ ಆಹಾರವಾಗಿದೆ. ಅದು ಸೋಮರಸವಲ್ಲದಿದ್ದರೂ ಎರಡನೆಯ ಅಮೃತವೆಂದು ಆಧುನಿಕ ಯುಗದ ವಿಜ್ಞಾನಿಗಳೂ ಕಂಡುಕೊಂಡಿದ್ದಾರೆ.

ಸುಪುಷ್ಟ ದೇಹರಚನೆಗೆಂದು ಜಟ್ಟಿಗಳು ಜೇನು ತಿನ್ನುತ್ತಾರೆ. ರೋಗಿಗಳು ಪಥ್ಯವೆಂದು ಜೇನು ಸೇವಿಸುತ್ತಾರೆ. ಮಕ್ಕಳು ಜೇನಿನ ಅನಂತ ಮಧುರತೆಗೆ ಮಾರುಹೋಗುತ್ತಾರೆ. ವೃದ್ಧರು ದೇಹದ ಶಕ್ತಿಯನ್ನು ಉಳಿಸಿಕೊಳ್ಳಲು ಜೇನಿನ ಆಸರೆ ಪಡೆಯುತ್ತಾರೆ. ಎಲ್ಲಕ್ಕಿಂತಲೂ ಹೆಚ್ಚಿನದೆಂದರೆ ಅದು ಮಹೌಷಧವಾದರೂ ಕಹಿಯಲ್ಲ!

ಜೇನಿನ ವೈಶಿಷ್ಟ್ಯ ಇಲ್ಲಿಗೇ ಮುಗಿಯಲಿಲ್ಲ. ಅಗತ್ಯವಿರುವ ಎಲ್ಲ ಘಟಕಾಂಗಗಳನ್ನು ಕೂಡಿಸಿ ರಸಾಯನಶಾಸ್ತ್ರಜ್ಞನೊಬ್ಬನು ಹಾಲನ್ನು ಹೇಗೆ ತಯಾರಿಸಲಾರನೋ ಹಾಗೆ ಜೇನನ್ನೂ ತಯಾರಿಸಲಾರನು. ಜೇನಿನಲ್ಲಿ ಇರುವ ವಿವಿಧ ರಾಸಾಯನಿಕ ಅಂಗಗಳನ್ನೆಲ್ಲ ಅವನು ವಿಶ್ಲೇಷಿಸಿ ತಿಳಿದಿದ್ದಾನಾದರೂ ಸ್ವತಂತ್ರವಾಗಿ ಕೃತಕ ಜೇನನ್ನು ತಯಾರಿಸುವ ರಹಸ್ಯ ಅವನಿಗಿನ್ನೂ ಗೋಚರವಾಗಿಲ್ಲ.

೧ ಜೇನು ವಿರೇಚಕ.

೨ ಅದು ಸುಲಭವಾಗಿ ಪಚನವಾಗುತ್ತದೆ.

೩ ಪಚನೇಂದ್ರಿಯಗಳ ಒಳಚರ್ಮಗಳನ್ನು ಉದ್ರೇಕಗೊಳಿಸುವುದಿಲ್ಲ.

೪ ಮೂತ್ರಪಿಂಡ ನರಗಳಿಗೆ ತೊಂದರೆಯುಂಟುಮಾಡುವುದಿಲ್ಲ.

೫ ದಣಿವನ್ನು ತಡೆಯುವ ಮತ್ತು ಪರಿಹರಿಸುವ ಶಕ್ತಿ ಅದಕ್ಕಿದೆ.

೬ ಅದು ಕ್ರಿಮಿನಾಶಕವೂ ಹೌದು.

ಹೂವಿನ ಮಕರಂದವೇ ಜೇನಿನ ಮೂಲ ಸಾಮಗ್ರಿ. ಜೇನುನೊಣ ಅದನ್ನು ತನ್ನ ಗೂಡಿಗೆ ಸಾಗಿಸಿ ಪಾಕಗೊಳಿಸಿ ಜೇನಾಗಿಸುವುದು. ಜೇನು ನೊಣದ ಈ ಉದ್ಯಮವನ್ನು ಜಗತ್ತಿನಲ್ಲಿ ಅತ್ಯಂತ ಮುಂದುವರಿದ ಮಾನವ ಕೂಡ ಮೀರಲಾರದವನಾಗಿದ್ದಾನೆ. ಜೇನು ನೊಣಗಳ ಕೆಲಸ ಎಷ್ಟು ಶ್ರಮದಾಯಕವೆಂದರೆ ಜೇನಿನ ಪ್ರಮಾಣಕ್ಕಿಂತ ಮೂರು ಪಟ್ಟು ಹೆಚ್ಚು ಮಕರಂದವನ್ನು ಅವು ಸಂಗ್ರಹಿಸಬೇಕಾಗುತ್ತದೆ. ಸುಮಾರು ಎರಡು ಸಾವಿರ ಹೂಗಳಿಂದ ಅವು ಕೇವಲ ಒಂದು ಚಮಚೆ ಜೇನು ತಯಾರಿಸಬಲ್ಲವು. ಒಂದು ಪೌಂಡು ಜೇನು ತಯಾರಿಸಬೇಕಾದರೆ ಅವು ೩೭ ಸಾವಿರ ಬಾರಿ ಹೂಗಳಿಂದ ಗೂಡಿಗೆ ಅಡ್ಡಾಡ ಬೇಕಾಗುತ್ತದೆ. ಒಂದು ಮೋಸಮಿನಲ್ಲಿ ಸುಮಾರು ೧೦೦ ಪೌಂಡು ಜೇನು ತಯಾರಿಸುವ ಜೇನು ಹುಳಗಳ ಒಂದು ಪಂಗಡವು ೫೦,೦೦೦ ಮೈಲುಗಳಷ್ಟು, ಅಂದರೆ ಭೂಮಂಡಲವನ್ನು ಎರಡು ಸಾರಿ ಪ್ರದಕ್ಷಿಣೆ ಮಾಡಿದಷ್ಟು ಓಡಾಡಬೇಕಾಗುವುದು.

ಹೀಗೆ ಅವು ತಯಾರಿಸಿದ ಜೇನು ಮಾತ್ರ ಅಮೃತಸಮವಾದುದು. ಪ್ರೋಟೀನುಗಳು, ವಿಟಾಮಿನ್‌ಗಳು ಮತ್ತು ವಿವಿಧ ಖನಿಜಾಂಶಗಳು ಜೇನಿನಲ್ಲಿ ಧಾರಾಳವಾಗಿರುತ್ತವೆ. ಅತ್ಯಲ್ಪ ಪ್ರಮಾಣದಲ್ಲಿ ನೀರು, ಸ್ವಲ್ಪ ಅಲ್ಬುಮಿನ್, ಗ್ಲೂಕೋಸ್ ಮತ್ತು ಹಣ್ಣಿನಸಕ್ಕರೆಗಳು, ಅಂಟು, ಎಣ್ಣೆ, ಪಾಕಗೊಂಡ ಕೊಬ್ಬು ಮತ್ತು ಹೂವಿನ ಪರಾಗ ಕಣಗಳು ಜೇನಿನಲ್ಲಿರುತ್ತವೆ. ಕಬ್ಬಿಣ, ಸಿಲಿಕಾ, ತಾಮ್ರ, ಪೋಟೇಸಿಯಂ, ಸೋಡಿಯಂ, ಸಲ್ಫರ್, ಅಲ್ಯುಮಿನಿಯಂ, ಕ್ಲೋರಿನ್, ಕಾಲ್ಸಿಯಂ, ಫೋಸ್ಫರಸ್ ಮತ್ತು ಮೆಗ್ನೆಸಿಯಂ ಮೊದಲಾದ ಖನಿಜಗಳೂ ಜೇನಿನಲ್ಲಿ ಸೇರಿರುತ್ತವೆ.

ಜೇನಿನಲ್ಲಿ ಅನ್ನಾಂಗ (ವಿಟಾಮಿನ್) ಇಲ್ಲವೆಂದು ಈ ವರೆಗೆ ಭಾವಿಸಲಾಗಿತ್ತು. ಈಗ

ಪ್ರಯೋಗಗಳು ಅದನ್ನು ಅಲ್ಲಗಳೆದಿವೆ. ಹೂಗಳ ಪರಾಗವು ಎಷ್ಟೋ ಹಣ್ಣುಗಳಲ್ಲಿರುವುದಕ್ಕಿಂತ ಹೆಚ್ಚು ಈ ಅನ್ನಾಂಗದಿಂದ ಕೂಡಿದೆ. ತೀರ ಕೆಳ ದರ್ಜೆಯ ಜೇನಿನಲ್ಲಿ ಹೊರತು ಅನ್ನಾಂಗಗಳ ಅಂಶ ಧಾರಾಳವಾಗಿರುವುದು ಕಂಡುಬಂದಿದೆ.

ಸಾಮಾನ್ಯ ಸಕ್ಕರೆಗಿಂತ ಇಮ್ಮಡಿ ಸಿಹಿಯಾಗಿರುವ ಗ್ಲೂಕೋಸ್ ಮತ್ತು ಹಣ್ಣು-ಸಕ್ಕರೆಗಳು ಜೇನಿನಲ್ಲಿವೆ. ಜೇನಿನ ಈ ಅಂಶ ಮಾನವಕುಲಕ್ಕೆ ಜೇನು ನೊಣಗಳ ಕೊಡುಗೆಯೆಂದರೂ ಸಲ್ಲುವುದು. ಸಾಮಾನ್ಯ ಸಕ್ಕರೆಯಲ್ಲಿಲ್ಲದ ಈ ಅಂಶಗಳೇ ಸಂಗ್ರಹಣಿ, ಸ್ಕರ್ವಿ ಮೊದಲಾದ ನಿಶ್ಶಕ್ತಿ ಮೂಲಕವಾದ ರೋಗಗಳಿಗೆ ದಿವ್ಯಾಷಧವಾಗಿವೆ. ಹಣ್ಣಿನ ಸಕ್ಕರೆ ಮತ್ತು ಗ್ಲುಕೋಸ್ ಸಕ್ಕರೆಗಳು ಸೇರಿ ದೇಹಪೋಷಣೆಗೆ ಅವಶ್ಯವಾದ ಗ್ಲೈಕೋಜನ್ ಮತ್ತು ರಕ್ತಗತಸಕ್ಕರೆಗಳ ಸಂಗ್ರಹವನ್ನು ಬೆಳೆಸುತ್ತವೆ. ಜೇನಿನ ಈ ಅಂಶ ಬಹಳ ಬೇಗನೆ ಪಚನವಾಗಿ ಶಕ್ತಿ ಮತ್ತು ಉಷ್ಣತೆಯಾಗಿ ಮಾರ್ಪಡುವದು.

ದುಡಿಮೆಯ ದಣಿವನ್ನು ನಿವಾರಿಸಲು ಜೇನು ಒಳ್ಳೆಯ ಸಾಧನವೆಂದು ಹಿಂದಿನ ಗ್ರೀಕ್ ಜಟ್ಟಿಗಳು ಕಂಡುಕೊಂಡಿದ್ದರು. ಜಗತ್ತಿನ ಎಲ್ಲ ಜನಾಂಗಗಳ ಪುರಾಣಗಳೂ ಜೇನಿನ ಮಹಿಮೆಯನ್ನು ವರ್ಣಿಸದೆ ಇಲ್ಲ. ವೇದವಂತೂ ಜೇನನ್ನು ಸವಿ ಮತ್ತು ಶಕ್ತಿಗೆ ಮಾದರಿಯಾಗಿಟ್ಟುಕೊಂಡಿದೆ.

ಪುರಾತನ ಗ್ರೀಸಿನ ಡೆಮೊಕ್ರಿಟಸ್, ಅಲೆಕ್ಸಾಂಡರ್ ಮುಂತಾದವರು ಜೇನಿನ ಮಹಿಮೆಯನ್ನು ಕಂಡುಕೊಂಡಿದ್ದರು. ಅವರು ತಮ್ಮ ಹೆಣಗಳನ್ನು ಜೇನಿನಿಂದ ಲೇಪಿಸಿ ಹೂಳಬೇಕೆಂದು ಬರೆದಿಟ್ಟಿದ್ದರು! ಇಜಿಪ್ತದ ಒಂದು ಪುರಾತನ ಗೋರಿಯನ್ನು ಅಗೆದಾಗ ೩೩೦೦ ವರ್ಷಗಳಷ್ಟು ಹಿಂದಿನ ಒಂದು ಜೇನ ಕೊಡವು ಅಲ್ಲಿ ದೊರೆಯಿತು. ಆ ಜೇನು ಇನ್ನೂ ಶುದ್ಧವಾಗಿಯೇ ಇತ್ತು.

ಸಾಮಾನ್ಯ ಸಕ್ಕರೆಗಿಂತ ಜೇನು ಹೆಚ್ಚು ಬೇಗನೆ ಶಕ್ತಿ ಕೊಡುವುದಷ್ಟೇ ಅಲ್ಲ; ಅದಕ್ಕಿಂತ ಜೇನಿನ ಸವಿಯು ಕೂಡ ನೂರು ಪಟ್ಟು ಹಾಗೂ ನೂರು ವಿಧವಾಗಿದೆ. ರಸಗಳ ಮನೋಹರ ಸಂಯೋಜನೆ ಜೇನಿನಲ್ಲಿರುವಂತೆ ಇತರ ಯಾವ ಆಹಾರದಲ್ಲಿಯೂ ದೊರೆಯದು.

ಜೇನು ಕ್ರಿಮಿನಾಶಕ ಕೂಡಾ ಹೌದು. ಎಲ್ಲ ತರದ ಅಣುಜೀವಿಗಳನ್ನು ಅದು ಕೊಲ್ಲುತ್ತದೆ. ದುರ್ವಾಸನೆಯನ್ನು ನಿವಾರಿಸುತ್ತದೆ. ಜೇನಿನ ಸಂಪರ್ಕ ಬಂದ ೪೮ ತಾಸುಗಳೊಳಗೆ ಟಾಯಿಫಾಯ್ಡ್ ಜ್ವರದ ಕ್ರಿಮಿಗಳು ಮತ್ತು ಕೇವಲ ಹತ್ತು ಗಂಟೆಗಳೊಳಗೆ ಆಮಶಂಕೆಯ ರೋಗಾಣುಗಳು ನಾಶವಾಗುತ್ತವೆ. ಜೇನು ಹೊಟ್ಟೆಯಲ್ಲಿ ಹುಳಿಯಾಗುವುದಿಲ್ಲ. ಅದರ ಪರಿಮಳದಿಂದ ಹಸಿವು ಹೆಚ್ಚುತ್ತದೆ. ಕರುಳಿನ ಹುಣ್ಣು ಮುಂತಾದವುಗಳಿಗೆ ಜೇನು ಸರಿಯಾದ ಔಷಧ.

ಜೇನಿನಲ್ಲಿ ಬೇರೆ ಪದಾರ್ಥಗಳನ್ನು ತಜ್ಞರಿಗೆ ತಿಳಿಯದಂತೆ ಮಿಶ್ರಿಸಲು ಸಾಧ್ಯವೇ ಇಲ್ಲ. ನೀರು ಬೆರಸಿದರೆ ಜೇನು ಹುಳಿತು ಸುಲಭವಾಗಿ ಗೊತ್ತಾಗುತ್ತದೆ. ಸಕ್ಕರೆಯನ್ನು ಬೆರಸಿದರೆ ಅದು ಕೆಲ ಕಾಲದಲ್ಲಿ ತಾನೇ ಬೇರ್ಪಟ್ಟು ನಿಲ್ಲುತ್ತದೆ.

ಇತರ ಯಾವುದೇ ತರದ ಸಕ್ಕರೆಗಳೊಡನೆ ಜೇನನ್ನು ಮಿಶ್ರ ಮಾಡಿದರೆ ಅದು ದಪ್ಪವಾಗಿ ಹೆಪ್ಪುಗಟ್ಟುತ್ತದೆ.

ಜೇನು ಬೆರಕೆಯಿಲ್ಲದೆ ಶುದ್ಧವಾಗಿದೆಯೇ ಎಂದು ಪರೀಕ್ಷಿಸಲು ಒಂದು ಉತ್ತಮ ಉಪಾಯವುಂಟು. ಜೇನಿನ ಹೂಜಿಯ ಮುಚ್ಚಳಕ್ಕೆ ತೂತು ಕೊರೆದು ಅದನ್ನು ಓರೆಯಾಗಿ ಇಟ್ಟುಬಿಡಬೇಕು. ಒಳ್ಳೆಯ ಜೇನು ಸಾವಕಾಶವಾಗಿ ಹೊರಗೆ ಹರಿದು ಹಾವಿನಂತೆ ಸುರುಳಿಗಟ್ಟುತ್ತದೆ. ಅಶುದ್ಧ ಜೇನು ಹಾಗೆ ಮಾಡುವುದಿಲ್ಲ.

ಜೇನು ಬಣ್ಣದಲ್ಲಿ ಕೆನೆ ಬಣ್ಣದ್ದಾಗಿ, ಬಂಗಾರದ ಹಳದಿಯಾಗಿ, ಅಥವಾ ಸಾಗರ ನೀಲವಾಗಿ ಇರಬಹುದು. ಬೇರೆ ಬೇರೆ ದೇಶಗಳಲ್ಲಿ ಬೇರೆ ಬೇರೆ ತರದ ಜೇನುಗಳು ದೊರೆಯುತ್ತವೆ. ಅವುಗಳ ಗುಣಧರ್ಮಗಳೂ ಬೇರೆ ಬೇರೆಯಾಗಿರುತ್ತವೆ. ಆದರೆ ಹಣ್ಣು-ಸಕ್ಕರೆ ಮತ್ತು ಗ್ಲೂಕೋಸ್ ಸಕ್ಕರೆಗಳು ಮಾತ್ರ ಎಲ್ಲ ಜೇನಿನಲ್ಲಿ ಇದ್ದೇ ತೀರುವವು. ಬೇರೆ ಬೇರೆ ಜಾತಿಯ ನೊಣಗಳು ಒಂದೇ ತರದ ಹೂಗಳಿಂದ ವಿವಿಧ ಮಾದರಿಯ ಜೇನು ತಯಾರಿಸುತ್ತವೆ. ನೇಪಾಳದ ಒಂದು ಬಗೆಯ

ಕಾಡು ಜೇನು ನೊಣಗಳು ತಮ್ಮ ಕೊಂಡಿಯ ಮೂಲಕ ಕಾಡು ಹೂಗಳಿಂದ ತಯಾರಿಸಿದ ಜೇನು ವಿಷಪ್ರಾಯವಾಗಿಯೂ ಇರುತ್ತದೆ.

ಜೇನು ಔಷಧವೆಂದು, ಆಹಾರವೆಂದು ಮಾತ್ರವಲ್ಲದೆ ಉದ್ಯೋಗಗಳಲ್ಲಿ ಕೂಡ ಉಪಯೋಗವಾಗುತ್ತದೆ. ಕೇಕ್, ಬ್ರೆಡ್ ಮೊದಲಾದ ಸಿದ್ಧಾಹಾರಗಳಲ್ಲಿ, ತಂಬಾಕು ಹದ ಮಾಡುವುದರಲ್ಲಿ, ಚರ್ಮದ ಲೋಶನ್, ಮಲಮು, ಅಲಂಕಾರ ಸಾಧನಗಳು, ಸಾಬೂಣ ಮತ್ತು ಅನೇಕ ಔಷಧಗಳ ತಯಾರಿಕೆಯಲ್ಲಿ ಜೇನು ಅವಶ್ಯಕವಾಗಿದೆ. ಆಯುರ್ವೇದದಲ್ಲಿ ಔಷಧಗಳನ್ನು ಜೇನಿನಲ್ಲಿ ಬೆರಸಿಯೇ ಕೊಡುತ್ತಾರೆ.

ಜೇನು ಎಲ್ಲ ರೋಗಗಳಿಗೆ ಪಥ್ಯವಾಗಿರುವಂತೆ ಎಲ್ಲ ಜನರಿಗೆ ಪ್ರಿಯವಾಗಿದೆ. ಔಷಧವೂ ಆಗಿದೆ. ಎಲ್ಲದಕ್ಕಿಂತಲೂ ಹೆಚ್ಚು ಅಮೃತೋಪಮವಾದ ಅದರ ಸವಿ ಇನ್ನೊಂದು ವಸ್ತುವಿನಿಂದ ದೊರೆಯದು. ಆರೋಗ್ಯ ದೃಷ್ಟಿಯಿಲ್ಲದಿದ್ದರೂ ಜೇನಿನ ಸವಿಗೆ ಮರುಳಾಗಿ ಯಾರು ನಾಲಿಗೆ ಚಪ್ಪರಿಸುವುದಿಲ್ಲ? ಕರಡಿಗಳಿಗೆ ಕೂಡ ಜೇನು ಪ್ರಿಯವಾಗಿದೆಯೆಂದ ಮೇಲೆ ಮನುಷ್ಯನ ಮಾತು ಬೇರೆ ಹೇಳಬೇಕೆ?



## ಮಾತೃಭಾಷೆಯ ನೆನಪು

ಶ್ರೀ ಗೋಪಾಲ ಭಾಂಡರಿಗೆ ಆಶ್ರಯವಿತ್ತ ಮಹಾರಾಜ ಕೃಷ್ಣಚಂದ್ರರ ದರಬಾರಿಗೆ ಒಮ್ಮೆ ಒಬ್ಬ ಹೊಸ ಪಂಡಿತರು ಬಂದರು. ಅನೇಕ ಭಾಷೆಗಳಲ್ಲಿ ನುರಿತವರೆನಿಸಿದ ಆ ಪಂಡಿತರ ಮಾತೃಭಾಷೆ ಯಾವುದೆಂದು ತಿಳಿವುದೇ ಕಷ್ಟವಾಯಿತು.

ರಾಜಸಭೆಯಲ್ಲಿ ಹೊಸ ಪಂಡಿತರ ಮಾತೃಭಾಷೆ ಯಾವುದೆಂದು ತಿಳಿಯಬಲ್ಲವರು ಇರಲಿಲ್ಲ. ಇದರಿಂದ ರಾಜನು ಆ ಕೆಲಸವನ್ನು ಗೋಪಾಲ ಭಾಂಡರಿಗೆ ಒಪ್ಪಿಸಿದನು.

"ನಾನು ಭಾಷೆಗಳನ್ನೇನೂ ಹೆಚ್ಚು ತಿಳಿದವನಲ್ಲ. ಆದರೆ ಪ್ರಭುಗಳು ನಾನು ಯಾವ ವಿಧಾನವನ್ನಾದರೂ ಅನುಸರಿಸಲು ಅಪ್ಪಣೆಸಿದರೆ ಹೊಸ ಪಂಡಿತರ ತಾಯ್ನುಡಿಯನ್ನು ಪತ್ತೆ ಹಚ್ಚ ಬಲ್ಲೆನು'' ಎಂದು ಭಾಂಡಾ ಹೇಳಿದರು.

ರಾಜ ಒಪ್ಪಿದ. ಅದೇ ದಿನ ಪಂಡಿತರೆಲ್ಲರೂ ರಾಜಸಭೆಯಿಂದ ಹೊರಗೆ ಇಳಿದು ಹೋಗುವಾಗ್ಗೆ ಹೊಸ ಪಂಡಿತರೂ ಪಾವಟಗೆಗಳಿಂದ ಇಳಿಯುತ್ತಿದ್ದರು. ಒಡನೆಯೇ ಗೋಪಾಲ ಭಾಂಡರು ಸರಸರನೆ ಇಳಿದು ಅವರನ್ನು ಅಪ್ಪಳಿಸಿದ ರಭಸಕ್ಕೆ ಹೊಸ ಪಂಡಿತರು ಪಾವಟಗೆಗಳಿಂದ ಉರುಳಿ ಬಿದ್ದರು.

ಹೊಸ ಪಂಡಿತರು ಸಿಟ್ಟು ಮತ್ತು ನೋವಿನಿಂದ ಭಾಂಡರನ್ನು ಬಯ್ಯತೊಡಗಿದರು. ಆಗ ಗೋಪಾಲ ಹೇಳಿದರು : " ಇದೇ ಅವರ ಮಾತೃಭಾಷೆ. ಸಂತೋಷವಾಗಿದ್ದಾಗ ಯಾವ ಭಾಷೆಯನ್ನಾದರೂ ಮಾತನಾಡಬಹುದು. ಆದರೆ ದುಃಖದ ಉಮ್ಮಳವಾದಾಗ ಮಾತೃಭಾಷೆಯೇ ನೆನಪಿಗೆ ಬರುವುದಲ್ಲದೆ ಬೇರೆಯಲ್ಲ'' ಎಂದರು.

— ಕ್ಷಿತಿ ಮೋಹನ ಸೇನ.

# ಶರಚ್ಚಂದ್ರರೊಡನೆ ಒಂದು ದಿನ

ಅಸಮಂಜ ಮುಖರ್ಜಿ

ಅಂದು ರವಿವಾರ. ನಾನು ಪೇಟೆಗೆ ಹೋಗಿ ಎಂದಿನಂತೆ ಮೀನು ಕೊಳ್ಳದೇ ಸೇರಿನಷ್ಟು ಮಾಂಸವನ್ನು ಕೊಂಡು ತಂದು ನಮ್ಮಾಕೆಗೆ ಹೇಳಿದೆ, "ಇವೊತ್ತು ಬರಿ ಮಾಂಸದ ಸಾರು ಮತ್ತು ಅನ್ನ. ಕೊನೆಗೆ ಮೊಸರು ಮತ್ತು ಸಂದೇಶ. * "

ಆಕೆ, "ಶರತ್‌ಬಾಬುಗಳ ಮನೆಗೆ ಊಟಕ್ಕೆ ಔತಣ ಇವೊತ್ತಲ್ಲವೆ?" ಎಂದಳು. ನಾನು ಬೆಚ್ಚಿಬಿದ್ದೆ. ಶರತ್ ಬಾಬುಗಳ ಆಮಂತ್ರಣ ನನಗೆ ಮರೆತೇ ಹೋಗಿತ್ತು.



ಶರತ್‌ಬಾಬು ಎಂದರೆ ಕಾದಂಬರಿ ಸಮ್ರಾಟ ಶರತ್ ಚಂದ್ರ ಚಟ್ಟೋಪಾಧ್ಯಾಯರು. ಹಿಂದಿನ ರವಿವಾರ ಭೆಟ್ಟಿಯಾದಾಗ್ಗ ಮುಂದಿನ ರವಿವಾರ ಮಧ್ಯಾಹ್ನ ಊಟಕ್ಕೆ ಬಾ ಅಂದಿದ್ದರು. ನಾನು ಒಪ್ಪಿದ್ದೆ.

ಮಾಂಸದ ಅಡಿಗೆಯ ಆಸೆ ಬಿಟ್ಟು ನಾನು ಲಗುಬಗೆಯಿಂದ ಸ್ನಾನ ಮುಗಿಸಿ ನಮ್ಮ ಕಲಕತ್ತೆಯ ಉತ್ತರ ಧ್ರುವದಿಂದ ದಕ್ಷಿಣ ಧ್ರುವಕ್ಕೆ —ಅರ್ಥಾತ್ ಬರಾನಗರದಿಂದ ಬಾಲಿಗಂಜಿಗೆ ಸಾಗಿದೆ.

ಮನೋಹರ ಪುಕುರ ರಸ್ತೆಯಲ್ಲಿ ಶರತ್ ಬಾಬುಗಳು ಹೊಸ ಮನೆ ಕಟ್ಟಿಸಿ ಒಕ್ಕಲಾಗಿದ್ದರು. ನಾನು ಅಲ್ಲಿ ತಲುಪಿದಾಗ ಹತ್ತು ಗಂಟೆಯಾಗಿರಬಹುದು. ಆಮಂತ್ರಣವನ್ನು ನಾನಂತೂ ಮರೆತಿದ್ದೆ. ಆದರೆ ಶರತ್‌ಬಾಬುಗಳ ಹಾವ-ಭಾವ ನೋಡಿದರೆ ಅವರೂ ಅದನ್ನು ಮರೆತೇ ಬಿಟ್ಟಂತಿತ್ತು.

ಅವರು ನನ್ನನ್ನು ನೋಡಿ ಸಂಗತಿಯನ್ನು ನೆನೆದು, ನಾಚಿಕೆ ತಡೆದುಕೊಂಡು, "ಒಳ್ಳೇದೇ ಆಯಿತು, ಇನ್ನು ಇಲ್ಲಿ ಕೂಡ್ರಬೇಕಾಗಿಲ್ಲ" ಎಂದರು.

"ಎಲ್ಲಿಗೆ ಹೋಗಬೇಕು ?" ನಾನು ಕೇಳಿದೆ.

"ಬೋಟಾನಿಕಲ್ ಗಾರ್ಡನಿಗೆ. ಅಲ್ಲಿ ನಮ್ಮ ಪೆನ್ ಕ್ಲಬ್ಬಿನವರ ಭೋಜನಕೂಟ ಇದೆ ಇವೊತ್ತು. ನೀನೂ ಬಾ, ನನ್ನ ಗೆಸ್ಟ್ ಅಂತ."

"ಬರಲಿಕ್ಕೆ ಅಡ್ಡಿಯಿಲ್ಲ. ಆದರೆ ಊಟ ಮಾತ್ರ ಇಲ್ಲಿಯೇ ಮಾಡುವವ ನಾನು. ಆ ಮೇಲೆಯೇ ಇಲ್ಲಿಂದ ಹೊರಟೇನು. ನನಗೆ ಊಟಕ್ಕೆ ಆಮಂತ್ರಣವಿರುವುದು ಇಲ್ಲಿ."

ಶರತ್ ಬಾಬುಗಳು ಒಪ್ಪಲೇಬೇಕಾಯಿತು.

* ಒಂದು ಬಂಗಾಲಿ ಸಿಹಿ ತಿಂಡಿ.

ಬಂಗಾಲಿ 'ವಸುಮತಿ'ಯಿಂದ ಸಂಗ್ರಹ

ನಾನು ಊಟಕ್ಕೆ ಕುಳಿತೆ. ಅವರಂದರು: "ನೋಡಿಲ್ಲಿ. ಇಲ್ಲಿಯೇ ಹೊಟ್ಟೆ ಒಡೆಯುವ ಹಾಗೆ ತಿನ್ನಬೇಡ. ನಮ್ಮ ಕ್ಲಬ್ ಭಾರಿ ಕ್ಲಬ್. ಊಟದ ವ್ಯವಸ್ಥೆಯೂ ಅದ್ಭುತ. ಇಲ್ಲೇ ತುಂಬಿಕೊಂಡಿಯೆಂದರೆ ಮತ್ತೆ ಅಲ್ಲಿ ಹೋಗಿ ಏನು ತಿನ್ನುತ್ತಿ?"

ನಾನು ಅವರ ಸದುಪದೇಶಕ್ಕೆ ಕಿವಿಗೊಡಲಿಲ್ಲ. "ನೀವೇನೂ ತೆಗೆದುಕೊಳ್ಳುವುದಿಲ್ಲವೆ?" ಎಂದು ಕೇಳಿದೆ.

ಅವರು, "ನಿನ್ನ ಹಾಗೆ ನಾನೇನೂ ಮರುಳನಲ್ಲ. ನಾನು ಅಲ್ಲೇ ಉಣ್ಣುವೆ. ಇಲ್ಲಿ ನಿನ್ನ ಸಂಗಡ ಕುಳಿತಿರುತ್ತೇನೆ ಅಷ್ಟೆ" ಎಂದರು. ನಾನು ಒಂದು ವಾಟಿ ಮೊಸರಲ್ಲಿ ಎರಡು ಸಂದೇಶಗಳನ್ನು ನುರಿಚಿ ಗಂಟಲಲ್ಲಿಳಿಸುವುದರಲ್ಲಿ ಮಗ್ನನಾದೆ. "ಮಧುರೇಣ ಸಮಾಪಯೇತ್" ಎಂಬ ಶಾಸ್ತ್ರ ಪ್ರಕಾರ ಕೊನೆಗೆ ಮತ್ತೆರಡು ಸಂದೇಶ ಹೊಡೆದು ಮುಗಿಸಿದೆ.

ಅನಂತರ ಹೊರಡಲನುವಾಗಿ ಶರತ್‌ಬಾಬು ತಮ್ಮ ಡ್ರೈವರನನ್ನು ಕರೆದು, "ಕಾಲೀ, ನಿನಗೆ ಊಟವಾಗಿದೆಯೆ?" ಎಂದು ಕೇಳಿದರು. "ಇಲ್ಲ ರಾಯರೇ" ಎಂದನಾತ. "ಇರಲಿ. ಅಲ್ಲಿ ಹೋಗಿಬಿಟ್ಟು ಉಂಡರಾಯಿತು. ಅದೇ ಸರಿ" ಎಂದು ಶರತ್‌ಬಾಬು ಅವನನ್ನು ಹೊರಡಿಸಿದರು. ಅಂದು ಕೊನೆಗೂ ಅವನಿಗೆ ಊಟವೇ ಸಿಗಲಿಲ್ಲ

ಬೊಟಾನಿಕಲ್ ಗಾರ್ಡನಿಗೆ ಕಾರಿನಲ್ಲಿ ಹೊರಟೆವು. ಯಾವುಯಾವುವೋ ಸುತ್ತು ಬಳಸು ದಾರಿ ಹಿಡಿದು ಸರ್ವ ದಿಕ್ಕುಗಳಲ್ಲಿಯೂ ಯಾತ್ರೆ ಮಾಡಿದೆವು. ಹಾದಿಯುದ್ದಕ್ಕೂ ಹರಟೆ. ಕೊನೆಗೊಮ್ಮೆ ಬೊಟಾನಿಕಲ್ ಗಾರ್ಡನಿನ ಯುರೋಪಿಯನ್ ಹೋಟೆಲ್ ತಲುಪಿದೆವು. ಇಲ್ಲಿಯೇ ಅಂದಿನ ಭೋಜನ ಕೂಟವಂತೆ.

ಕಾರಿನಿಂದಿಳಿದೆವು. ಆದರೆ ಅಲ್ಲೇನಿದೆ? ನಾಲ್ಕು ದಿಕ್ಕಿಗೂ ನೀರವ. ಇಷ್ಟು ದೊಡ್ಡ ಪಾರ್ಟಿಯಂತೆ, ಅಲ್ಲಿ ಸದ್ದೇ ಇಲ್ಲ. ಶರತ್‌ಬಾಬು ವ್ಯಾಕುಲ ದೃಷ್ಟಿಯಿಂದ ಸುತ್ತಲೂ ನೋಡಿದರು. "ಎಲಾ, ಒಬ್ಬರೂ ಕಾಣಿಸುವುದಿಲ್ಲವಲ್ಲ!" ಎಂದು ಉದ್ಗಾರ ತೆಗೆದರು. "ಇಲ್ಲೇ ಹೌದೋ ಅಲ್ಲೋ ಮತ್ತೆ?" ನಾನು ಕೇಳಿದೆ. "ಛೇ ಛೇ, ನಾನು ಹತ್ತು ಹತ್ತು ಸಾರಿ ಆಮಂತ್ರಣ ಪತ್ರಿಕೆಯಲ್ಲಿ ನೋಡಿಕೊಂಡಿದ್ದೇನೆ. ಸಂಶಯವೇ ಇಲ್ಲ" ಎಂದರವರು.

ಸರಿ, ಅಲ್ಲೇ ಹರಿಯುವ ಗಂಗೆಯ ದಂಡೆಯಲ್ಲಿ ಕುಳಿತು ನೀರಲ್ಲಿ ಕಾಲಿಳಿಬಿಟ್ಟು, ನಾವೆಗಳು, ತೆರೆಗಳು ಮೊದಲಾದವನ್ನು ನಿರೀಕ್ಷಿಸತೊಡಗಿದೆವು. ಹೊತ್ತು ಕಳೆಯಲು ತೆರೆಗಳನ್ನು ಎಣಿಸುವುದರಲ್ಲಿ ಮಗ್ನರಾದೆವು.

ಶರತ್‌ಬಾಬುಗಳು ನಾಲ್ಕೂ ಸುತ್ತ ಕಣ್ಣು ಹಾಯಿಸಿ ಪೆನ್ ಕ್ಲಬ್ಬಿನ ಮೆಂಬರರನ್ನು ಹುಡುಕುತ್ತಿದ್ದರು. ಹೊಟೇಲಿನ ಚಪರಾಸಿಯೊಬ್ಬನನ್ನು ಕರೆದು, "ಬಾಬೂ ಲೋಕ ಸಬ ಆಯಾ ನೆಹಿ?" (ರಾಯರುಗಳು ಬಂದಿಲ್ಲವೇ?) ಎಂದು ವಿಚಾರಿಸಿದರು.

"ಬಾಬೂ ಲೋಕ? ಕೋಯಿ ಬಾಬು ಲೋಕ ತೋ ನಹೀಂ ಆಯಾ ಹುಜೂರ್. ಉಧರ ದೇಖಿಯೇ. ಓಯಿ ವಟಗಾಛಕಾ ನೀಚಮೇ ಬಾಬು ಲೋಕಕಾ ಸಬ ಖಾನಾ ಪೀನಾ ಹೋಗಾ ಮಾಲುಮ ಹೋತಾ" ಎಂದನಾತ. ನಾವು ಗಾಡಿ ಹೊರಡಿಸಿ, ಅಲ್ಲಿ ಇಲ್ಲಿ ಸುತ್ತುಹಾಕುತ್ತ ಆ ಆಲದ ಮರದ ಬುಡಕ್ಕೆ ಹೋದರೆ ಅಲ್ಲಿ ಪಿಕ್‌ನಿಕ್ ನಡೆದಿತ್ತು-ಕಾಲೇಜ ಹುಡುಗರದು.

ನಾವು ತಲೆಯ ಮೇಲೆ ಕೈಯಿಟ್ಟುಕೊಂಡು ಯುರೋಪಿಯನ್ ಹೋಟಲಿಗೆ ತಿರುಗಿ ಬರಬೇಕಾಯಿತು. "ಕಾರ್ಡಿನಲ್ಲಿ ನೋಡಿದ್ದೀರಾ, ಎಷ್ಟು ಗಂಟೆಗೆ ಪಾರ್ಟಿ ಅಂತ?" ಎಂದು ನಾನು ಕೇಳಿದೆ. ಶರತ್‌ಬಾಬು "ಇಡೀ ದಿನ. ಬೆಳಗ್ಗೆ ಎಂಟರಿಂದ ಸಂಜೆಯ ವರೆಗೆ" ಎಂದರು. ನಾನು ಕೈಗಡಿಯಾರ ನೋಡಿದೆ. ಒಂದೂವರೆ ಗಂಟೆಯಾಗಿದೆ.

ಶರತ್‌ಬಾಬು ಕೇಳಿದರು, "ಎಂಟು ಹೊಡೆದಿದೆ ತಾನೆ?" ನಾನು "ಇಲ್ಲ, ಇನ್ನೂ ಸ್ವಲ್ಪ

ತಡವಿದೆ. ಏಳಿ, ಈ ಆಲದ ಮರದ ಬುಡದ ಕುರ್ಚಿಯಲ್ಲಾದರೂ ಕೂಡ್ರುವಾ," ಎಂದೆ.

ಕೆಲ ಕ್ಷಣಗಳ ನಂತರ ಶರಚ್ಚಂದ್ರರು ಎದ್ದು ನಿಂತು, "ಹೋಟೇಲಿನ ಮ್ಯಾನೇಜರನನ್ನು ವಿಚಾರಿಸಿದರೆ ಸಂಗತಿಯೆಲ್ಲ ಗೊತ್ತಾದೀತು," ಎಂದು ಹೋಟೆಲಿನೊಳಗೆ ಹೋದರು. ಐದು ನಿಮಿಷಗಳ ನಂತರ ತಿರುಗಿ ಬಂದು, "ಹೌದು, ಇದೇ ಹೊಟೇಲಿನಲ್ಲಂತೆ, ಎಂಟರಿಂದ ಸಂಜೆವರೆಗೂ ಹೌದಂತೆ, ರವಿವಾರ ದಿನವೂ ಹೌದಂತೆ; ಆದರೆ ಇವರೆಲ್ಲ ಇನ್ನೂ ಯಾಕೆ ಕಾಣಿಸುವುದಿಲ್ಲ?"

ನಾನು ಹೇಳಿದೆ: "ನಾನು ಹೊಟ್ಟೆತುಂಬ ಹೊಡೆದೇ ಬಂದಿದ್ದೇನೆ, ಅನ್ನಿ. ಆದರೆ ನಿಮ್ಮ ಮತ್ತು ಕಾಲಿಯ ಅವಸ್ಥೆಯೇನು?"

ಶರತ್‌ಬಾಬು ಒಂದನ್ನೂ ಕಿವಿಯಲ್ಲಿ ಹಾಕಿಕೊಳ್ಳದೆ, ಚಿಂತಿತ ಮುಖಮುದ್ರೆಯಿಂದ ಹೊಟೇಲಿನ ಹುಡುಗನನ್ನು ಕರೆದರು. "ಚಹಾದ ಹೊತ್ತಂತೂ ಆಯಿತಲ್ಲ. ಚಹಾ ತೆಗೆದುಕೊಳ್ಳಲು ಏನಡ್ಡಿ?" ಎಂದು ಮೂರು ಕಪ್ ಚಹಾಕ್ಕೆ ಆರ್ಡರು ಕೊಟ್ಟರು—ನಮ್ಮಿಬ್ಬರ ಹಾಗು ಡ್ರೈವರ ಕಾಲಿಯ ಸಲುವಾಗಿ. ಕಪ್ಪಿಗೆ ಎಂಟಾಣೆಯಂತೆ ಮೂರು ಕಪ್ಪಿನ ಚಾರ್ಜು ಒಂದೂವರೆ ರೂಪಾಯಿ ಹುಡುಗನ ಕೈಲಿಟ್ಟು "ಜಲ್ದೀ ಲೇ ಆವ್" ಎಂದರು. ಜಲ್ದಿಯಾಗಿಯೇ ಬಂತು. ಕುಡಿದು ಮತ್ತೆ ಹರಟೆ ಪ್ರಾರಂಭವಾಯಿತು.

ಚಹಾದ ನಂತರ ನನಗೆ ಸಿಗರೇಟಿನ ಚಟ. ಶರತ್‌ಬಾಬು ಹೋಟೆಲ್ ಹುಡುಗನ ಹತ್ತಿರ ಸಿಗರೇಟಿನ ಮಾತೆತ್ತಿದರು. ಆತನಂದ: "ಏಕ್ ಪ್ಯಾಕೇಟ, ಹುಜೂರ್ ನಹೀ ಮಿಲೇಗಾ. ಪಚಾಸಕಾ ಏಕ್ ಟಿನ್ ಮಿಲತಾ ಹೈ" ಎಂದ. ಸಿಗರೇಟಿನ ಸಂಗತಿ ಬೇಡ. ರೂಪಾಯಿ ಎರಡಾಣೆಯ ಟಿನ್ನಿಗೆ ಇಲ್ಲಿ ಐದು ರೂಪಾಯಿ ಇದ್ದೀತು. ಎರಡು ಬಿಲ್ಲೆಯ ಚಹಾಕ್ಕೆ ಇಲ್ಲಿ ಎಂಟಾಣೆ ತೆಗೆದುಕೊಳ್ಳುತ್ತಾರೆಂದ ಮೇಲೆ–" ಎಂದು ನಾನು ಶರತ್ ಬಾಬುಗಳಿಗೆ ಹೇಳಿದೆ.

"ಇರಬಹುದು, ಏನು ತಪ್ಪಾಯಿತು. ಸಾಹೇಬರ ಹೋಟೇಲು, ಬೊಟಾನಿಕಲ್ ಗಾರ್ಡನ್, ಗಂಗೆಯ ಧಾರೆ. ಕೆನೋಪಿಯ (canopy) ತಳದಲ್ಲಿ, ಚೇರ್, ಬಾಯ್. ಅಂದ ಮೇಲೆ ಎಂಟಾಣೆ ಏನು ಹೆಚ್ಚು?" ಎಂದರು ಶರತ್. "ಲೇ ಆವ್ ಡಿಬಿಯಾ!" ಎಂದು ಹುಡುಗನಿಗೆ ಹೇಳಿದರು.

ಶರಚ್ಚಂದ್ರರ ಹತ್ತಿರ ಪೈಪು ಮತ್ತು ತಂಬಾಕಿತ್ತು. ಅವರು ನಿರರ್ಗಳವಾಗಿ ಅದರ ಉಪಾಸನೆಯನ್ನೇ ಮಾಡುತ್ತಿದ್ದರು. ಸಿಗರೇಟ್ ನನಗಾಗಿ ಮಾತ್ರ. ಹುಡುಗ ತಡವಿಲ್ಲದೆ ಗೋಲ್ಡ್ ಫ್ಲೇಕಿನ ಒಂದು ಟಿನ್ ಮತ್ತು ಬಿಲ್ ತಂದ. ಚಹಾದ ಸಂಗಡ ಹೋಲಿಸಿದರೆ ಸಿಗರೇಟು ಅಗ್ಗವೇ ಇತ್ತೆನ್ನಬೇಕು. ರೂಪಾಯಿ ಎರಡಾಣೆಯ ಬದಲು ರೂಪಾಯಿ ನಾಲ್ಕಾಣೆ ಮಾತ್ರ ಹಾಕಿದ್ದರು.

ಆ ಮೇಲೆ ಶರತ್-ಬಾಬುಗಳು ಪೈಪಿನಿಂದ, ನಾನು ಸಿಗರೇಟಿನಿಂದ ಹೊಗೆ ಬಿಡುತ್ತ ಎಷ್ಟೋ ಹೊತ್ತು ಒಂದು ಗಿಡದ ಬುಡದಿಂದ ಇನ್ನೊಂದು ಗಿಡದ ಬುಡಕ್ಕೆ ಅಲೆಯಲಾರಂಭಿಸಿದೆವು. ನಡನಡುವೆ ಯಾವುದಾದರೊಂದು ಮರದ ತಳದಲ್ಲಿ ಕುಳಿತು ಮಾತುಕಥೆ ನಡೆಸುತ್ತಿದ್ದೆವು. ಬೇಸರವಾದಾಗ ಗಂಗೆಯ ನೀರಲ್ಲಿ ಕಾಲಾಡಿಸುತ್ತ, ಬೇಕಾದ ಬೇಡವಾದ ಸುದ್ದಿಗಳನ್ನು ಚರ್ಚಿಸುತ್ತ ಹೊತ್ತು ಕಳೆದೆವು. ಈ ಪ್ರಕಾರ ಪೆನ್ ಕಬ್ಲಿನ ವಿರಾಟ್ ಭೋಜನ ಕೂಟವನ್ನು ನಮ್ಮ ವಿರಾಟ್ ರೀತಿಯಿಂದ ಅನುಭವಿಸುತ್ತ ಕಡೆಗೆ ಮೂರು ಗಂಟೆಯ ಹೊತ್ತಿಗೆ ಆಸೆ ತೊರೆದು ಗಾಡಿ ಹೊರಡಿಸಿ ಅಲ್ಲಿಂದ ತಳಕಿತ್ತೆವು.

ದಾರಿಯಲ್ಲಿ ಶಿವಪುರ ರಸ್ತೆಯಲ್ಲಿ ಶರಚ್ಚಂದ್ರರು ಒಮ್ಮಿಂದೊಮ್ಮೆ "ಕಾಲಿ, ನಿಲ್ಲಿಸು ನಿಲ್ಲಿಸು!" ಎಂದು ಕೂಗಿದರು. ಕಾಲಿ ಗಾಡಿ ನಿಲ್ಲಿಸಿದರೆ ಅವರಂದರು, "ಯಾಕೆ ನಿಲ್ಲಿಸಲಿಕ್ಕೆ ಹೇಳಿದೆ ನಾನು? ಮರೆತೇ ಹೋಯಿತಲ್ಲ :...ಹಾಂ ನೆನಪಾಯಿತು ನೋಡು: ಅಂಗಡಿಯಿಂದ ಒಂದು ಬಾಟಲಿ ಸೋಡಾ ತೆಗೆದುಕೊಂಡು ಬಾರಯ್ಯ,

ಕಾಲಿ. ಭಾರಿ ನೀರಡಿಕೆಯಾಗಿದೆ."

ಸ್ವಲ್ಪ ಸಮಯದ ನಂತರ ಇನ್ನೊಂದು ಸ್ಥಳದಲ್ಲಿ "ತಡೆ-ತಡೆ-ತಡೆ!" ಎಂದು ಒದರಿದರು ಶರತ್‌ಚಂದ್ರರು.

"ಏನು ಮತ್ತೆ ಸೋಡಾ ತಾನೆ?" ನಾನು ಕೇಳಿದೆ.

"ಅಲ್ಲ. ಅಲ್ಲಿ ನೋಡು, ಗಿಡದ ಬುಡಕ್ಕೆ ನಿಂತಿದ್ದಾನಲ್ಲ ಮುದುಕ. ಅವನ್ನ ಕರೆತಾರಪ್ಪ ಕಾಲಿ—ಹೌದು. ಆ ಭಿಕ್ಷುಕನನ್ನೆ."

ಕಾಲಿ ಅವನನ್ನು ಕರೆತಂದ. ಬಿಕ್ಕೆ ಬೇಡುವವನೇ ಸೈ. ಹರಕು ಕೊಳಕು ಬಟ್ಟೆ, ನೆರಿಗಟ್ಟಿದ ಮೈ. ದುಃಖ ಕಷ್ಟ ಹಸಿವುಗಳ ದೆಸೆಯಿಂದ ಮುದುಕನಲ್ಲದಿದ್ದರೂ ಅವನಿಗೆ ಮುಪ್ಪು ಬಂದಿತ್ತು. ಬೆನ್ನು ಬಾಗಿ ಹೋಗಿದೆ, ಕಣ್ಣು ಗುಳಿ ಸಾರಿದೆ. ಅವನ ಮುಖ ನೋಡಿ ಶರತ್‌ಬಾಬು ಕೇಳಿದರು. "ನೀನು ಭಿಕ್ಷುಕನೋ?"

"ಅಲ್ಲ ಸ್ವಾಮಿ."

"ಅಲ್ಲ? ಒಳ್ಳೇದು. ಏನಾದರೂ ತಿನ್ನುವೆಯಾ?"

"ಏನು ತಿನ್ನಲಿ?"

ಶರಚ್ಚಂದ್ರರು ತಮ್ಮ ಸ್ಯಾಟಿನ್ನಿನ ಪರ್ಸಿನಿಂದ ಕೈಗೆ ಬಂದಷ್ಟು ದುಡ್ಡು-ದಂಬಡಿ ತೆಗೆದು ಕೈಯಲ್ಲಿ ಹಿಡಿದುಕೊಂಡರು. ಅದರಲ್ಲಿ ನಾಲ್ಕಾಣೆ ಎರಡಾಣೆ, ಆಣೆ, ಬಿಲ್ಲೆ ಎಲ್ಲ ಇದ್ದವು. ಎಲ್ಲ ಕೂಡಿ ಎರಡು ರೂಪಾಯಿ ವರೆಗೆ ಇದ್ದಿರಬಹುದು. ಮತ್ತೆ ಆತನ ಮೋರೆ ನೋಡಿ ಕೇಳಿದರು: "ಏನಾದರೂ ತಿನ್ನಲಿಕ್ಕೆ ಬೇಕಾದರೆ ಹೇಳು."

ಮನುಷ್ಯ ಕೈ ಮುಂದೆ ಮಾಡಿ, "ಅದನ್ನು ಕೊಟ್ಟು ಬಿಡಿ ಬಾಬು. ಏನಾದರೂ ಕೊಂಡು ತಿನ್ನುವೆ" ಎಂದ.

ಅವನು ಹೋದ ಮೇಲೆ ನಾನು "ಏನಿದು ದಾದಾ? ದಾನ ಕೊಡುವಾಗ ಪಾತ್ರಾಪಾತ್ರ ನೋಡಬೇಡವೆ?" ಎಂದೆ.

"ನೋಡಿದರೆ ತಿಳಿಯುವುದಿಲ್ಲವೇ, ಪಾಪ ಮನುಷ್ಯ ಉಂಡಿಲ್ಲ ಅಂತ?"

"ಗೊತ್ತಿದೆ. ಆದರೆ ಹಾಗಲ್ಲ. ಮನುಷ್ಯನನ್ನು ನೋಡಿದರೇನೆ ಗಾಂಜಾಬಡಕನಂತೆ ಕಾಣುತ್ತಾನೆ. ಗಾಂಜಾ ಅಲ್ಲದಿದ್ದರೆ ಜುಗಾರಿ. ಇಲ್ಲದಿದ್ದರೆ ಅದೇ ತರದ ಇನ್ನೇನಾದರೂ. ಭಿಕ್ಷುಕನಂತೂ ಸರ್ವಥಾ ಅಲ್ಲ."

ಎದುರಿಗಿನ ದೃಷ್ಟಿಯನ್ನು ಹೊರಳಿಸದೆ ಕಾಲಿ ಹೇಳಿದ: "ಬಹಳ ಮಾಡಿ ಗಾಂಜಾಬಡಕನೇ ಇರಬೇಕು."

ಶರಚ್ಚಂದ್ರರು ಮಾತಾಡಲಿಲ್ಲ. ಸುಮ್ಮನೆ ಕುಳಿತಿದ್ದರು. ಕಾರು ವೇಗವಾಗಿ ಹೊರಟಿತು.

ಹೌರಾ ಸೇತುವೆ ದಾಟಿ ಈಚೆಗೆ ಬಂದ ಮೇಲೆ ಶರತ್ ಹೇಳಿದರು: "ಗಂಟೆ ಇನ್ನೂ ಮೂರೂವರೆ. ಸಂಜೆಯಾಗಲು ಇನ್ನೂ ಬಹಳ ಹೊತ್ತಿದೆ. ಇಷ್ಟೆಲ್ಲ ವೇಳೆಯನ್ನು ಹೇಗೆ ಕಳೆಯಬೇಕು? ಏನಾದರೊಂದು ಬೇಕಲ್ಲ."

"ಕೆಲಸ ಬೇಕಾದಷ್ಟಿದೆ. ನೀವು ದಕ್ಷಿಣಕ್ಕೆ ಹೋಗುವವರು, ನಾನು ಉತ್ತರಕ್ಕೆ."

"ಊಂಹೂಂ, ನಿನ್ನನ್ನು ಈಗ ಬಿಡಲಾರೆ," ಎಂದು ಮತ್ತೊಮ್ಮೆ ಗಡಿಯಾರ ನೋಡಿ ಡ್ರೈವರನಿಗೆ ಹೇಳಿದರು: "ಚಲೋ ರಂಗಮಹಲ."

"ರಂಗಮಹಲಿ"ನಲ್ಲಿ ಅಂದು ಶರತ್‌ಚಂದ್ರರ "ಚರಿತ್ರಹೀನ" ಚಲಚಿತ್ರದ ಪ್ರಥಮ ಪ್ರದರ್ಶನವಿತ್ತು. ಅಲ್ಲಿಗೆ ತಲಪುತ್ತಲೇ ಅವರು "ಅಲ್ಲಾ, ಚಿತ್ರ ಸುರುವಾಗಲು ಇನ್ನೂ ಒಂದು ತಾಸು ಇದ್ದೀತು. ಉಪೇಂದ್ರನ್ನ ಕರೆತಂದರೆ ಒಳ್ಳೇದು. ಕಾಲೀ, ಉಪೇಂದ್ರ ಬಾಬುಗಳನ್ನು ಕರೆದುಕೊಂಡು ಬಾ" ಎಂದರು. ಉಪೇಂದ್ರ ಬಾಬುಗಳು "ವಿಚಿತ್ರಾ" ಪತ್ರಿಕೆಯ ಸಂಪಾದಕರು. ಶರಚ್ಚಂದ್ರರ ಸೋದರಮಾವ.

ಕಾಲಿ ಗಾಡಿ ಹಿಡಿದುಕೊಂಡು ಉಪೇಂದ್ರ ಬಾಬುಗಳಲ್ಲಿ ಹೋಗಿದ್ದನಷ್ಟೆ, ಶರತ್‌ಬಾಬು ಹಠಾತ್ತಾಗಿ, "ಭಾರಿ ತಪ್ಪಾಯಿತು. ಇಲ್ಲಿ—" ಎಂದರು.

"ಮತ್ತೇನು ತಪ್ಪು? ಇವೊತ್ತು ತಪ್ಪಿನ ಮೇಲೆ ತಪ್ಪೇ ಆಗುತ್ತಿರುವ ಹಾಗೆ ಕಾಣುತ್ತದೆ. ಅವರಿಗೆ ಎಪ್ರಿಲ್ ಮೊದಲ ತಾರೀಕು ಅಲ್

ಫೂಲ್ಸ್ ಡೇ ಆದರೆ ನಮಗೆ ಇವೊತ್ತು ಆಲ್ ಭೂಲ್ಸ್ (ತಪ್ಪು) ಡೇ ಇದೆಯೋ ಏನೋ. ಈಗ ಮತ್ತೇನಾಯಿತು ಹೇಳಿ!"

"ಅಂಥದೇನೂ ಇಲ್ಲ. ಆದರೆ ಇನ್ನೂ ಒಂದು ತಾಸು ಇಲ್ಲಿ ಕುಳಿತು ಏನು ಮಾಡಬೇಕು? ಉಪೇಂದ್ರನ ಮನೆಗೆ ನಾವೇ ಹೋಗಿಬಿಡಬಹುದಲ್ಲ" ಎಂದವರೇ ಶರತ್ ಬಾಬು ಒಬ್ಬ ಟ್ಯಾಕ್ಸಿಯವನನ್ನು ಕರೆದು ಬಾಡಿಗೆ ಗೊತ್ತು ಮಾಡಿ ಉಪೇಂದ್ರ ಬಾಬುಗಳಲ್ಲಿಗೆ ಹೊರಟೇ ಬಿಟ್ಟರು.

ಅಲ್ಲಿಗೆ ಹೋದೊಡನೇ ಉಪೇಂದ್ರ ಬಾಬುಗಳು, "ಇದೇನು, ಇದೇ ನಿನ್ನ ಕಾರು ಬಂತು. ಅದರಲ್ಲಿ ಬಾರದೆ ಅದರ ಬೆನ್ನಿಗೇ ಟ್ಯಾಕ್ಸಿಯಲ್ಲಿ ಬರುವಂಥದೇನಿತ್ತು?" ಎಂದು ಕೇಳಿದರು. ನಾನು ಕಾರಣವನ್ನು ವಿವರಿಸಿದೆ. ಅಲ್ಲದೆ ಅಂದಿನ ಪುರಾಣವನ್ನೆಲ್ಲ ಸ್ವಲ್ಪದರಲ್ಲಿ ವರ್ಣಿಸಿದೆ.

ಅವರು ಬಿದ್ದುಬಿದ್ದು ನಗತೊಡಗಿದರು. "ಪೆನ್ ಕ್ಲಬ್ಬಿನ ಭೋಜನ ಕೂಟ ಈ ಆದಿತ್ಯವಾರ ಅಲ್ಲ, ಮುಂದಿನ ಆದಿತ್ಯವಾರ," ಎಂದು ಅವರು ತಮಗೆ ಬಂದಿದ್ದ ಆಮಂತ್ರಣ ಕಾರ್ಡು ತಂದು ತೋರಿಸಿದರು. ನಿಜ, ಹಾಗೇ ಇತ್ತು. ಅಸಾಧ್ಯ ಹಾಸ್ಯಮಯ ಸನ್ನಿವೇಶವೇ. ಆದರೆ ಆ ದಿನದ ಎಲ್ಲ ದುರ್ಭಾಗ್ಯದ ನಂತರ ನಗುವ ತ್ರಾಣ ನಮ್ಮಲ್ಲಿದ್ದಿಲ್ಲ ಅಷ್ಟೇ.

ಮತ್ತೆ ರಂಗಮಹಲ ತಲಪಿದಾಗ ಅಲ್ಲಿ ಗದ್ದಲವೋ ಗದ್ದಲ. ಒಳಗೆ ಸಾಸಿವೆ ಹಾಕಲು ಸ್ಥಳವಿಲ್ಲ. ಮ್ಯಾನೇಜರ ಓಡಿ ಬಂದು ಬೇರೆ ಮೂರು ಕುರ್ಚಿ ತರಿಸಿ ಹಾಕಿ ನಮಗೆ ಕೂಡ್ರಲು ಎಡೆ ಮಾಡಿಕೊಟ್ಟ. ಚಿತ್ರ ಚೆನ್ನಾಗಿಯೇ ಇತ್ತು. ಅಭಿನಯ ಉತ್ಕೃಷ್ಟವಾಗಿತ್ತು. ದಿವಾಕರನ ಪಾತ್ರ ವಹಿಸಿದ್ದ ಧೀರಾಜ ಭಟ್ಟಾಚಾರ್ಯ ಬಂದು ತನ್ನ ಅಭಿನಯ ಹೇಗಾಗಿದೆಯೆಂದು ವಿಚಾರಿಸಿದ. ಶರತ್‌ಬಾಬುಗಳ ಪ್ರಶಂಸೆಯಿಂದ ಆತ ಹಿಗ್ಗಿ ಹೋದ.

ಅಂತೂ ಅಂದು ಮನೆ ಸೇರಿದಾಗ ರಾತ್ರಿ ೧೧ ಹೊಡೆದಿತ್ತು. ಇನ್ನೂ ಅರ್ಧ ಗಂಟೆ ಮೊದಲು ತಲುಪಬಹುದಿತ್ತು. ಆದರೆ ನನಗೆ ದಾರಿ ತಪ್ಪಿ ಸುತ್ತು ಹಾಕಿ ಹೋಗಬೇಕಾಯಿತು. ಮನೆ ಸೇರಿ ನೋಡುತ್ತೇನೆ, ಅಂದಿನ ತಪ್ಪುಗಳ ಮಾಲೆಯ ಕೊನೆಗೆ ಮತ್ತೊಂದು ತಪ್ಪಾಗಿತ್ತು. ಗೋಲ್ಡ್ ಫ್ಲೇಕಿನ ಡಬ್ಬಿಯನ್ನು ಮರವೆಯಿಂದ, ನಾನೇ ಜೇಬಿನಲ್ಲಿಟ್ಟುಕೊಂಡು ಬಂದುಬಿಟ್ಟಿದ್ದೆ. ೫೦ ರಲ್ಲಿ ೧೦ ಸಿಗರೇಟನ್ನು ನಾನು ಆಗಲೇ ಧ್ವಂಸ ಮಾಡಿದ್ದೆನೆನ್ನಿ. ಉಳಿದ ೪೦ ನ್ನಾದರೂ ಶರತ್ ಬಾಬುಗಳಿಗೆ ಮರುದಿನ ತಲಪಿಸಲೇಬೇಕು ಎಂದು ನಿರ್ಧರಿಸಿಕೊಂಡೆ.

ಆದರೆ ಮರುದಿನ ಸಂಕಲ್ಪಿತ ಕಾರ್ಯ ಪೂರೈಸಲಾಗಲಿಲ್ಲ. ಅಂದು ಮತ್ತೆ ಡಬ್ಬಿಯಿಂದ ಕೆಲ ಸಿಗರೇಟುಗಳು ಭಸ್ಮವಾದವು. ಮೂರನೇ ದಿನವೂ ಏನೋ ವಿಘ್ನ ಬಂತು. ಐದನೇ ದಿನ ವೇಳೆ ಮಾಡಿಕೊಂಡು ಡಬ್ಬಿಯನ್ನು ಜೇಬಿನಲ್ಲಿಟ್ಟು ಅವರ ಮನೆಗೆ ಹೋದಾಗ ಅದರಲ್ಲಿ ಉಳಿದದ್ದು ಬರೇ ಐದು ಸಿಗರೇಟುಗಳು. ಅಲ್ಲಿ ತಾಸೆರಡು ತಾಸು ಹರಟುತ್ತ ಕುಳಿತು ಮೇಜಿನ ಮೇಲೆ ಡಬ್ಬಿಯನ್ನು ಬಿಟ್ಟು ಹೊರಟಾಗ ಅದರಲ್ಲಿ ಒಂದೇ ಒಂದು ಸಿಗರೇಟು ಉಳಿದಿತ್ತು.

ನಾನು ಹೊರಡಲೆದ್ದೊಡನೆ ಶರತ್‌ಬಾಬು "ಮತ್ತೆ ಅದನ್ನೇಕೆ ಮರೆತು ಬಿಟ್ಟುಹೋಗುತ್ತಿ? ಹಿಡಿದುಕೋ. ದಾರಿಯಲ್ಲಿ ಎಳೆಯುತ್ತೆಳೆಯುತ್ತ ಹೋದರಾಯಿತು," ಎಂದರು.

ನಾನು, "ಹೌದು ಮರೆತಿದ್ದೆ ನೋಡಿ" ಎಂದು ಆ ಕೊನೆಯ ಸಿಗರೇಟನ್ನೂ ಹೊತ್ತಿಸಿ ಸೇದುತ್ತ ಅಲ್ಲಿಂದ ಹೊರಬಿದ್ದೆ.



# ನಿಮ್ಮ ಶಬ್ದ ಭಾಂಡಾರ ಬೆಳೆಯಲಿ

## ಶಬ್ದ ಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಇಲ್ಲಿ ಪ್ರತಿ ತಿಂಗಳು ಕೆಲವು ಶಬ್ದಗಳನ್ನು ಪರಿಚಯ ಮಾಡಿ ಕೊಡಲಾಗುವದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು, ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥಗಳನ್ನು ವಿವರಿಸಿದೆ.

೧. **ಉಕ್ಕಡ**
(ಅ) ಪಾದರಕ್ಷೆ (ಆ) ಊರಿನ ಕೊನೆಯ ಭಾಗ (ಇ) ತೀವ್ರವಾದ (ಈ) ಕೈಸಾಲ.

೨. **ಅಭ್ಯರ್ಥಿ**
(ಅ) ವಿರುದ್ಧಾರ್ಥದ ಶಬ್ದ (ಆ) ಪೂಜಿಸುವವ (ಇ) ಬೇಡುವಾತ (ಈ) ಅಡ್ಡಿ.

೩. **ಒತ್ತುಕರಡು**
(ಅ) ಮಸಿ ಆರಿಸಲು ಬಳಸುವ ಕಾಗದ (ಆ) ಅರ್ಧವಾಗದ ಬರಹ (ಇ) ಗುಡ್ಡದಲ್ಲಿ ಬೆಳೆಯುವ ಹುಲ್ಲು (ಈ) ಮರದ ಜೊಷ್ಟೆ.

೪. **ಅವ್ಯಾಹತ**
(ಅ) ಅವ್ಯವಸ್ಥಿತ (ಆ) ಬ್ರಹ್ಮಚಾರಿ (ಇ) ತಡೆಯಿಲ್ಲದ (ಈ) ದೇವತೆ.

೫. **ಕುಚೋದ್ಯ**
(ಅ) ಆಶ್ಚರ್ಯ (ಆ) ಉಪಟಳ (ಇ) ಕೆಟ್ಟ ಉಪದೇಶ (ಈ) ಅಪಹಾಸ್ಯ.

೬. **ಔತ್ತರೇಯ**
(ಅ) ಉತ್ತರ ದಿಕ್ಕಿನ (ಆ) ವೇದದ ಒಂದು ಶಾಖೆ (ಇ) ಎದುರಾಡುವುದು (ಈ) ಭೂರಿಭೋಜನ.

೭. **ತಾರಕ**
(ಅ) ಒಂದು ಪುರಾತನ ನಾಣ್ಯ (ಆ) ದುಃಖಿತ (ಇ) ದಾಟಿಸುವವ (ಈ) ತಾರತಮ್ಯ.

೮. **ಸಂದಿಗ್ಧ**
(ಅ) ಸಂಧಿಕಾಲದ (ಆ) ಉತ್ತಮ ಹಾಲು (ಇ) ಸಂಗ್ರಹ (ಈ) ಸಂಶಯಾಸ್ಪದವಾದ.

೯. **ಕೂಲಂಕಷ**
(ಅ) ಕುಲಗೇಡಿ (ಆ) ಆನೆಯ ಕಿವಿಯೊಳಗೆ ಹಾಕುವ ಆಯುಧ (ಇ) ಕಲಂಕಿತ (ಈ) ಸಂಪೂರ್ಣವಾದ.

೧೦. **ಛಿದ್ರಾನ್ವೇಷಣ**
(ಅ) ತಪ್ಪು ಹುಡುಕುವುದು (ಆ) ತೂತು ಕೊರೆಯುವುದು (ಇ) ಕೋಟೆಯ ದುರ್ಬಲ ಸ್ಥಾನ (ಈ) ಒಡಕು.

೧೧. **ಕಾಸಕಾರ**
(ಅ) ಹಣ ಕೂಡಿಸಿಟ್ಟ (ಆ) ಉಬ್ಬಸ ರೋಗಿ (ಇ) ಒಂದು ಜಾತಿಯ ಹೂ (ಈ) ಕುದುರೆಯ ಆಳು.

೧೨. **ಅವಹೇಳನ (ನೆ)**
(ಅ) ಅವನು ಹೇಳಿದ್ದು (ಆ) ತೆಗಳಿಕೆ (ಇ) ಅಪಾರ್ಥ (ಈ) ಇನ್ನೊಬ್ಬರನ್ನು ಆಧರಿಸಿರುವುದು.

# ‘ ಶಬ್ದಭಾಂಡಾರ ’ ದ ಸರಿಯಾದ ಅರ್ಥಗಳು

೧. **ಉಕ್ಕಡ** (ಅ) ಊರಿನ ಕೊನೆಯ ಭಾಗ; ಮುಂಗಾವಲು; ಕಾವಲು ಮನೆ (ಉಕ್ಕಡ ಬಾಗಿಲು ಎಂದರೆ ಊರಿನ ಅಗಸೆ ಬಾಗಿಲು ಉಕ್ಕಡಮನೆ ಎಂದರೆ ಊರಿನ ಕೊನೆಯ ಮನೆ). ಬಾವಿಯ ಹಗ್ಗಕ್ಕೆ ಜೋಡಿಸುವ ಉರುಳಿನ ಚಿಕ್ಕ ಹಗ್ಗಕ್ಕೂ ಉಕ್ಕಡವೆಂದು ಹೆಸರಿದೆ. (ಕನ್ನಡ).

೨. **ಅಭ್ಯರ್ಥಿ** (ಇ) ಬೇಡುವವ, ಕೇಳಿಕೊಳ್ಳುವವ, ಅಪೇಕ್ಷಿಸುವವ. ಉದಾ- ಅಭ್ಯರ್ಥಿಯಾಗಿ ಬಂದ ಬ್ರಾಹ್ಮಣನಿಗೆ ರಘು ಬೇಡಿದ್ದನ್ನು ಕೊಟ್ಟ. (ಸಂ. ಅಭಿ= ಎದುರು. ಅರ್ಥಿ = ಬೇಡುವವ).

೩. **ಒತ್ತುಕರಡು** (ಅ) ಬರೆದ ಮಸಿಯನ್ನು ಆರಿಸಲು ಉಪಯೋಗಿಸುವ ಕಾಗದ; ಬ್ಲಾಟಿಂಗ್ ಕಾಗದ (ಕನ್ನಡ).

೪. **ಅವ್ಯಾಹತ** (ಇ) ತಡೆಯಿಲ್ಲದ, ನಿರರ್ಗಳವಾದ. ಉದಾ: ಅವನ ಭಾಷಣ ಅವ್ಯಾಹತವಾಗಿ ಸಾಗಿತ್ತು. ( ಸಂ. ಅ = ಇಲ್ಲ, ವಿ = ವಿರುದ್ಧವಾಗಿ, ಆಹತ = ಹೊಡೆಯಲ್ಪಟ್ಟದ್ದು ).

೫. **ಕುಚೋದ್ಯ** (ಈ) ಅಪಹಾಸ್ಯ, ನಕಲಿ, ನಿಂದಿಸುವಪ್ರವೃತ್ತಿ, ಉಪಹಾಸ. ಉದಾ- ಕುಚೋದ್ಯದ ಅರಸಗೆ ಕುಲಗೇಡಿ ಪ್ರಧಾನಿ. ( ಸಂಸ್ಕೃತ- ಕು = ಕೆಟ್ಟ, ಚೋದ್ಯ = ಆಕ್ಷೇಪ ).

೬. **ಔತ್ತರೇಯ** (ಅ) ಉತ್ತರ ದಿಕ್ಕಿನ, ಉತ್ತರ ದೇಶಕ್ಕೆ ಸಂಬಂಧಿಸಿದ. ಉದಾ- ಔತ್ತರೇಯ ಸಂಗೀತದ ಮೇಲೆ ಪಾರಸೀಕ ಪ್ರಭಾವ ಬಿದ್ದಿದೆ. ( ಸಂ. ಉತ್ತರದಿಕ್ಕಿಗೆ ಸಂಬಂಧಿಸಿದ ).

೭. **ತಾರಕ** (ಇ) ದಾಟಿಸುವ, (ಕಷ್ಟಗಳಿಂದ) ಪಾರು ಮಾಡುವ, ಉದ್ಧರಿಸುವ. ಉದಾ- ಪರಮಾತ್ಮನ ನಾಮವೇ ಭಕ್ತರಿಗೆ ತಾರಕ. ( ಸಂ. ತರ = ದಾಟು ಧಾತುವಿನಿಂದ ). ಈ ಶಬ್ದಕ್ಕೆ ನಕ್ಷತ್ರ, ಕಣ್ಣುಗೊಂಬೆ ಎಂಬರ್ಥಗಳೂ ಇದೆ.

೮. **ಸಂದಿಗ್ಧ** (ಈ) ಸಂಶಯಾಸ್ಪದವಾದ, ಅನಿಶ್ಚಿತವಾದ; ಇಕ್ಕಟ್ಟಿನ, ಸಂಕೋಚದ, ಬಿಕ್ಕಟ್ಟಿನ. ಉದಾ- ಅವನ ಮಾತು ಸಂದಿಗ್ಧವಾಗಿದೆ ಅಂದರೆ ಅಸ್ಪಷ್ಟವಾಗಿದೆ. ಇದೊಂದು ಸಂದಿಗ್ಧ ಪರಿಸ್ಥಿತಿ ಎಂದರೆ ಇಕ್ಕಟ್ಟಿನ ಸ್ಥಿತಿ. (ಸಂ. ಸಂ = ವಿಶೇಷವಾಗಿ, ದಿಗ್ಧ = ಜೋಡಿಸಿದ).

೯. **ಕೂಲಂಕಷ** (ಈ) ಸಂಪೂರ್ಣವಾದ, ಪರಿಪೂರ್ಣವಾದ ಉದಾ- ಅವನಿಗೆ ಆ ವಿಷಯ ಕೂಲಂಕಷವಾಗಿ ತಿಳಿದಿದೆ. (ಸಂ. ಕೂಲಂ = ದಡವನ್ನು, ಕಷ = ಕೊರೆಯುವ; ಅಂದರೆ ತುಂಬಿಹರಿಯುವ)

೧೦. **ಛಿದ್ರಾನ್ವೇಷಣ** (ಅ) ತಪ್ಪು ಹುಡುಕುವುದು. ಉದಾ- ಅವನು ಛಿದ್ರಾನ್ವೇಷಣ ಸ್ವಭಾವದವನು. (ಸಂ. ಛಿದ್ರ = ತೂತು, ಅನ್ವೇಷಣ= ಹುಡುಕುವಿಕೆ).

೧೧. **ಕಾಸಕಾರ** (ಈ) ಕುದುರೆಯ ಆಳು. ಕಾಸದಾರ, ಕಾಸ್ತಾರ ಎಂದೂ ಪ್ರಯೋಗವಿದೆ. (ಹಿಂದಿ ಮೂಲ).

೧೨. **ಅವಹೇಳನ (ನೆ)** (ಅ) ತೆಗಳಿಕೆ, ನಿಂದೆ, ತಿರಸ್ಕಾರದ ಮಾತು. ಉದಾ- ಅವನು ಈ ಕಾರ್ಯದಿಂದ ಬಹಳ ಅವಹೇಳನೆಗೆ ಗುರಿಯಾಗಬೇಕಾಯಿತು. (ಸಂ. ಅವ = ಕೆಟ್ಟ, ಹೇಲನ = ವಿನೋದ).

## ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ಅರಿಯಿರಿ.

೬—೮ ಸರಿಯಿದ್ದರೆ ....ಸಾಧಾರಣ
೯—೧೦ ,, ....ಉತ್ತಮ
೧೧—೧೨ ,, ....ಅತ್ಯುತ್ತಮ



ಈ ದುರಭ್ಯಾಸದ ಮೂಲ ಮೈಗಿಂತ ಮನಸಿನಲ್ಲೇ ಹೆಚ್ಚು.

# ಮಕ್ಕಳೇಕೆ ಹಾಸಿಗೆಯಲ್ಲಿ ಮೂತ್ರವಿಸರ್ಜನೆ ಮಾಡುತ್ತಾರೆ?

ಮೂರುನಾಲ್ಕು ವರ್ಷಗಳಾದ ಮೇಲೂ-ಕೆಲವೇಳೆ ಏಳೆಂಟು ವರ್ಷಗಳ ವರೆಗೂ ಮಕ್ಕಳು ಹಾಸಿಗೆಯಲ್ಲಿ ಉಚ್ಚೆ ಹೊಯ್ದುಕೊಳ್ಳುವದು ಕೆಲ ಕುಟುಂಬಗಳಲ್ಲಿ ಸಮಸ್ಯೆಯನ್ನುಂಟುಮಾಡುತ್ತದೆ. ಕೆಲವರು ಇದನ್ನು ಆನುವಂಶಿಕ ಉಪದ್ರವವೆಂದು ಅಸಡ್ಡೆಮಾಡುತ್ತಾರೆ. ಡಾಕ್ಟರರ ಕಡೆಗೆ ಹೋದರೆ ಕೂಡ ಅವರ ಚಿಕಿತ್ಸೆಯಿಂದ ತಾತ್ಕಾಲಿಕ ಉಪಶಮನವಾಗಿ ಮತ್ತೆ ಹಳೇ ಅಭ್ಯಾಸವೇ ತಲೆಯೆತ್ತುವದು ಅನುಭವಕ್ಕೆ ಬಂದ ಮಾತು.

ಹಾಸಿಗೆಯಲ್ಲಿ ಉಚ್ಚೆ ಹೊಯ್ಯುವದಕ್ಕೂ ಮಗುವಿನ ಮಾನಸಿಕ ಸ್ಥಿತಿಗೂ ಸಂಬಂಧವಿದೆಯೆಂದು ಹೇಳಿದರೆ ಎಷ್ಟೋ ಜನರಿಗೆ ಹೊಸ ಸುದ್ದಿ ಎನಿಸೀತು. ಆದರೆ ನೂರಕ್ಕೆ ತೊಂಭತ್ತು ಪಾಲು ಪ್ರಕರಣಗಳಲ್ಲಿ ಇದು ಅಕ್ಷರಶಃ ಸತ್ಯ.

ಕೆಲ ಮಕ್ಕಳು ಎರಡು ವರ್ಷದವಾದೊಡನೆ ಹಾಸಿಗೆಯಲ್ಲಿ ಉಚ್ಚೆ ಹೊಯ್ಯುವದನ್ನು ನಿಲ್ಲಿಸುತ್ತವೆ. ಮೂರುವರ್ಷಗಳಾಗುವವರೆಗೆ ಮಗು ಹಾಸಿಗೆಯಲ್ಲಿ ಉಚ್ಚೆಹೊಯ್ಯುತ್ತಿದ್ದರೂ ಅದು ಅಸ್ವಾಭಾವಿಕವಲ್ಲ. ಅನಂತರವೂ ಈ ಅಭ್ಯಾಸ ಮುಂದುವರಿದರೆ ಮಾತ್ರ ಅದರ ಕಾರಣವನ್ನು ಹುಡುಕಬೇಕು.

ಪ್ರಾರಂಭದಲ್ಲಿ ಚಿಕ್ಕ ಮಕ್ಕಳು ಉಚ್ಚೆ ಬಂದೊಡನೆ ಹೊಯ್ದುಬಿಡುತ್ತಿದ್ದರೂ ಬರಬರುತ್ತ ಅದನ್ನು ತಡೆದುಕೊಳ್ಳುವ ಶಕ್ತಿಯುಂಟಾಗುತ್ತದೆ.

ಮೂತ್ರವಿಸರ್ಜನೆಯ ಮೇಲೆ ಮಕ್ಕಳಿಗೆ ಹಿಡಿತ ಯಾವ ವಯಸ್ಸಿಗೆ ಬರುತ್ತದೆ ಎಂಬ ಬಗ್ಗೆ ಡಾಕ್ಟರರೊಬ್ಬರು ಅಂಕೆ ಸಂಖ್ಯೆಗಳನ್ನು ಸಂಗ್ರಹಿಸಿ ಹೀಗೆ ಹೇಳಿದ್ದಾರೆ: ಒಂದು ವರ್ಷದ ಮಕ್ಕಳಲ್ಲಿ ನೂರಕ್ಕೆ ಹತ್ತರಷ್ಟು, ಒಂದೂವರೆ ವರ್ಷದ ಮಕ್ಕಳಲ್ಲಿ ನೂರಕ್ಕೆ ಮೂವತ್ತರಷ್ಟು, ಎರಡು ವರ್ಷದ ಮಕ್ಕಳಲ್ಲಿ ಅರುವತ್ತೈದರಿಂದ ಎಂಬತ್ತರಷ್ಟು ಮಕ್ಕಳಿಗೆ ಮೂತ್ರವಿಸರ್ಜನೆಯ ಮೇಲೆ ಹಿಡಿತ ಬಂದಿರುತ್ತದೆ. ಮೂರು ವರ್ಷಗಳ ನಂತರ ಸಾಮಾನ್ಯವಾಗಿ ಎಲ್ಲ ಮಕ್ಕಳೂ ಹಾಸಿಗೆಯಲ್ಲಿ ಉಚ್ಚೆ ಹೊಯ್ಯುವದನ್ನು ನಿಲ್ಲಿಸುತ್ತವೆ.

ಹಾಸಿಗೆಯಲ್ಲಿ ಉಚ್ಚೆ ಹೊಯ್ಯುತ್ತಿರುವದಕ್ಕೆ ಮಾನಸಿಕ ಕಾರಣಗಳಿವೆಯೇ ಎಂದು ನೋಡುವ ಮೊದಲು ಶಾರೀರಕ ಕಾರಣಗಳಿಲ್ಲ ಎಂಬುವದನ್ನು ನಿಶ್ಚಯ ಮಾಡಿಕೊಳ್ಳಬೇಕು. ಉಚ್ಚೆ ಹೊಯ್ಯುವ ಮಕ್ಕಳಿಗೆ ಅನೇಕ ಸಲ ಸೂತ್ರಕೃಮಿಗಳಾಗಿರುತ್ತವೆ, ಇಲ್ಲವೇ ಟೊಂಕದ ಎಲುವಿನ ಜೋಡಣೆ ಸರಿಯಾಗಿರುವದಿಲ್ಲ. ಕೆಲವು ಮಕ್ಕಳ ಮೂತ್ರಾಶಯದಲ್ಲಿ ಜಂತುಗಳಾಗಿರುತ್ತವೆ. ತೀರ ಚಿಕ್ಕ ವಯಸ್ಸಿನಲ್ಲಿ ಕೂಡ ಮಧುಮೇಹ ರೋಗ ಬರುವದೂ ಉಂಟು. ಮಕ್ಕಳ ಆಹಾರದಲ್ಲಿ ಉಪ್ಪಿನ ಪ್ರಮಾಣ ತೀರ ಹೆಚ್ಚಾಗಿರುವದೂ ಉಂಟು. ಕೆಲಮಕ್ಕಳು ವಿಪರೀತ ಪ್ರಮಾಣದಲ್ಲಿ ನೀರು ಕುಡಿಯುವದರಿಂದ ಮೂತ್ರದ ಉತ್ಪತ್ತಿ ಹೆಚ್ಚಿ ನಿದ್ದೆಯಲ್ಲಿ ಅವು ಉಚ್ಚೆಹೊಯ್ಯುತ್ತವೆ.

ಆದರೆ ಈ ಬಗೆಯ ಶಾರೀರಕ ಕಾರಣಗಳಿಂದ

'ಸುಶ್ರುತ' ಮಾಸಿಕದಿಂದ

ಮೂತ್ರ ವಿಸರ್ಜನೆಯ ಮೇಲೆ ಹಿಡಿತ ಸಿಗದ ಮಕ್ಕಳ ಸಂಖ್ಯೆ ತೀರ ಕಡಿಮೆಯಾಗಿರುತ್ತದೆ. ಬಹಳಷ್ಟು ಸಲ ಹಾಸಿಗೆಯಲ್ಲಿ ಉಚ್ಚೆ ಹೊಯ್ಯುವದರ ಕಾರಣ ಮಕ್ಕಳ ಮನಸ್ಸಿನಲ್ಲಿ ಗುಪ್ತವಾಗಿ ನಡೆದ ಘರ್ಷಣೆಯಲ್ಲಿರುತ್ತದೆ. ಮಕ್ಕಳಿಗೆ ಗೊತ್ತಾಗದಂತೆ ಆಗುವ ಮೂತ್ರ ವಿಸರ್ಜನಕ್ರಿಯೆ ಆ ಗುಪ್ತ ಘರ್ಷಣೆಯ ಒಂದು ಲಕ್ಷಣ ಮಾತ್ರವಾಗಿರುತ್ತದೆ.

ಗಂಗೂ ಬಾಯಿಗೆ ತನ್ನ ಮಕ್ಕಳ ಪ್ರಗತಿಯ ಚಿಂತೆ ಸದಾ ಕಾಡುತ್ತಿತ್ತು. ತನ್ನ ಮಗುವಿಗೆ ದುರಭ್ಯಾಸವಿರಬಾರದು. ಅದು ಮೂತ್ರವಿಸರ್ಜನೆಯ ಮೇಲೆ ಆದಷ್ಟು ಬೇಗ ಹಿಡಿತ ತಂದುಕೊಳ್ಳಬೇಕೆಂದು ಅವಳು ವರ್ಷದೊಳಗೇ "ತರಬೇತು" ಮಾಡಲಾರಂಭಿಸಿದಳು. ಇದಕ್ಕೆ ಅವಳು ಬೆದರಿಕೆ ಹಾಕುವದು, ಆಸೆತೋರಿಸುವದು ಹೀಗೆ ದ್ವಿಮುಖ ಉಪಾಯುಗಳನ್ನು ಕೈಕೊಂಡಳು. ಆದರೆ ಅದು ವಿಫಲವಾಯಿತಲ್ಲದೆ ಎರಡು ವರ್ಷವಾದ ಮೇಲೂ ಅದು ಹಾಸಿಗೆಯಲ್ಲಿ ಉಚ್ಚೆಹೊಯ್ಯುತ್ತಲೇ ಹೋಯಿತು. ಕಾರಣವಿಷ್ಟೆ: ಕಾಲು ಗಟ್ಟಿಯಾಗುವ ಮೊದಲೇ ಬಲಾತ್ಕಾರದಿಂದ ಮಗುವನ್ನು ನಿಲ್ಲಿಸಹಚ್ಚಿದರೆ ಅವುಗಳ ಕಾಲು ಡೊಂಕಾಗುವಂತೆ, ಮಕ್ಕಳ ಶಾರೀರಕ ಮತ್ತು ಮಾನಸಿಕ ಸಿದ್ಧತೆ ಪೂರ್ಣವಾಗುವ ಮೊದಲೇ ಈ ಬಗೆಯ ತರಬೇತು ದೊರೆಯತೊಡಗಿದರೆ ಅವು ಗೊಂದಲದಲ್ಲಿ ಸಿಲುಕುತ್ತವೆ. ಇದರಿಂದ ಸ್ವಾಭಾವಿಕವಾಗಿಯೇ ಆಗುತ್ತಿದ್ದ ಕಾರ್ಯವು ಕೂಡ ವಿಲಂಬಕ್ಕೆ ಬೀಳುವಂತಾಗುತ್ತದೆ. ಗಂಗೂಬಾಯಿಯ ಮಗುವಿಗೂ ಹೀಗೇ ಆಗಿತ್ತು.

ಮಗು ಇನ್ನೂ ತೀರ ಚಿಕ್ಕದಿರುವಾಗ ಮನೆಯಲ್ಲಿ ಇನ್ನೊಂದು ಮಗು ಹುಟ್ಟುತ್ತದೆ. ತಂದೆ ತಾಯಿಗಳ ಲಕ್ಷ್ಯ ಹೆಚ್ಚಾಗಿ ಹೊಸಮಗುವಿನತ್ತ ಹೋಗುತ್ತದೆ. ತನ್ನಮೇಲೆ ತಂದೆ ತಾಯಿಗಳು ಪ್ರೀತಿ ಮಾಡುವದಿಲ್ಲ, ಹೊಸ ಮಗುವಿನ ಮೇಲೆ ಮಾಡುತ್ತಾರೆ ಎಂಬ ಕಲ್ಪನೆಯಿಂದ ಮೊದಲಿನ ಮಗು ತಾನೂ ಸಣ್ಣ ಮಗುವಾಗಬೇಕು ಎಂದು ಅಪೇಕ್ಷಿಸುತ್ತದೆ. ಈ ಮಾನಸಿಕ ಸ್ಥಿತಿಯ ಪರಿಣಾಮವಾಗಿ ಅದು ಮತ್ತೆ ಹಾಸಿಗೆಯಲ್ಲಿ ಉಚ್ಚೆ ಹೊಯ್ಯತೊಡಗುತ್ತದೆ. ಈ ಸ್ಥಿತಿಯಲ್ಲಿ ಕೆಲ ಮಕ್ಕಳು ಎಳೆ ಕೂಸಿನಂತೆ ಬೊಟ್ಟು ಕೂಡ ಚೀಪಲು ಪ್ರಾರಂಭಿಸುತ್ತವೆ. ಇಂಥ ಸಂದರ್ಭಗಳಲ್ಲಿ ಮಗುವಿಗೆ ಹೊಸ ಮಗುವಿನ ಆಗಮನದಿಂದ ಅದರ ಮೇಲಿನ ತಮ್ಮ ಪ್ರೀತಿಯೇನೂ ಕಡಮೆಯಾಗಿಲ್ಲ ಎಂಬುದನ್ನು ಮನಗಾಣಿಸಿಕೊಡಲು ತಂದೆ ತಾಯಿಗಳು ಪ್ರಯತ್ನಿಸಿ ಹಾಗೆ ಮನಗಾಣಿಸಿ ಕೊಟ್ಟಲ್ಲಿ ಪ್ರಕರಣ ಸುಧಾರಿಸುತ್ತದೆ.

ಕೆಲ ಸಲ ತಾಯಿ ಮಗುವಿನ ಕಾಳಜಿಯನ್ನು ಅತಿರೇಕವಾಗಿ ವಹಿಸುತ್ತಾಳೆ. ೪-೫ ವರ್ಷಗಳಾದರೂ ಮಗುವಿಗೆ ತಾನೇ ಅಂಗಿ ಹಾಕುವದು, ತಾನೇ ಉಣಿಸುವದು ಮಾಡುತ್ತಾಳೆ. ಮಗು ಪೂರ್ಣ ಪರಾವಲಂಬಿಯಾಗುತ್ತದೆ. ಸ್ವಾವಲಂಬಿಯಾಗುವ ಸಂಧಿಯೇ ಅದಕ್ಕೆ ದೊರೆಯುವದಿಲ್ಲ. ಅಸಹಾಯ ಕೂಸಾಗಿರುವದರಲ್ಲಿ ಅದಕ್ಕೊಂದು ಬಗೆಯ ಸಂತೋಷವೆನಿಸಿ ಹಾಸಿಗೆಯಲ್ಲಿ ಉಚ್ಚೆ ಹೊಯ್ಯುವ ರೂಢಿ ಉಳಿಯುತ್ತದೆ.

ಮನೆಯ ಜನರು ಕೋಪಿಷ್ಠರಾಗಿದ್ದರೆ ಮೇಲಿಂದ ಮೇಲೆ ಮಕ್ಕಳಿಗೆ ಹೊಡೆತ ತಿನ್ನುವ ಪ್ರಸಂಗ ಬರುತ್ತದೆ. ಆಗ ಮಕ್ಕಳಲ್ಲಿ ಸೇಡಿನ ಭಾವನೆ ಉದಯಿಸುತ್ತದೆ. ಹಿರಿಯರನ್ನು ಹೊಡೆಯುವದಂತೂ ಮಕ್ಕಳಿಗೆ ಸಾಧ್ಯವಿಲ್ಲವಾದ್ದರಿಂದ ಅವು ಇತರ ರೀತಿಗಳಲ್ಲಿ ತಮ್ಮ ಪ್ರತಿಭಟನೆಯನ್ನು ವ್ಯಕ್ತಪಡಿಸಬಯಸುತ್ತವೆ. ಹಾಸಿಗೆಯಲ್ಲಿ ಉಚ್ಚೆ ಹೊಯ್ಯಬಾರದಲ್ಲವೇ, ಸರಿ, ಹೊಯ್ದೇ ತೀರುತ್ತೇನೆ ಎಂದು ಅವು ಅಂದುಕೊಳ್ಳುತ್ತವೆ. ಈ ಪ್ರತೀಕಾರ ಬುದ್ಧಿ ಎಚ್ಚರದಲ್ಲಿ ಪ್ರಕಟಕ್ಕೆ ಬರಲು ಅಂಜಿಕೆ ಅಡ್ಡ ಬರುತ್ತದೆ. ಆದರೆ ಎಚ್ಚರದಲ್ಲಿ ತೀರಿಸಿಕೊಳ್ಳಲಾರದ ಆಸೆಯನ್ನು ಸ್ವಪ್ನದಲ್ಲಿ ತೀರಿಸಿಕೊಳ್ಳಲು ಸುಪ್ತ ಚೇತನ ಅವಕಾಶ ಮಾಡಿಕೊಡುತ್ತದೆ. ವಯಸ್ಸು ಹೆಚ್ಚಿದ ಬಳಿಕ ಈ ಚಟ ನಿಂತರೂ ಬೇರೆ ಬಗೆಯಲ್ಲಿ ಈ ಬಂಡಾಯ ಕಾಣಿಸಿಕೊಂಡು ಮಕ್ಕಳು ಅಪರಾಧಿ ಪ್ರವೃತ್ತಿಯನ್ನು ತೋರುತ್ತವೆ.

ಹಾಸಿಗೆಯಲ್ಲಿ ಉಚ್ಚೆ ಹೊಯ್ಯುವದಕ್ಕೆ ಎಷ್ಟೋ ಸಲ ಭೀರು ಸ್ವಭಾವ ಕಾರಣವಾಗಿರು

ತ್ತದೆ. ಬೆತ್ತದ ಏಟು ಹಾಕಿದಾಗ ಮಕ್ಕಳು ಉಚ್ಚೆ ಹೊಯ್ಯುವದನ್ನೂ ಎಷ್ಟೋ ಜನ ನೋಡಿರಬಹುದು. ಹಾಸಿಗೆಯಲ್ಲಿ ಉಚ್ಚೆ ಹೊಯ್ಯುವದನ್ನು ಬಿಟ್ಟ ಮಕ್ಕಳು ಕೂಡ ಎಷ್ಟೋ ಸಲ ಶಾಲೆಯ ಭೀತಿ, ಪ್ರೀತಿಯ ವ್ಯಕ್ತಿಗಳಿಂದ ದೂರವಾಗಿರುವ ಭೀತಿ ಮುಂತಾದ ಕಾರಣಗಳಿಂದ ಮತ್ತೆ ಹಾಸಿಗೆಯಲ್ಲಿ ಉಚ್ಚೆ ಹೊಯ್ಯತೊಡಗುತ್ತವೆ. ಅವರ ಭೀರು ಸ್ವಭಾವ ತೊಲಗುವ ತನಕ ಈ ಚಟ ಅವರನ್ನು ಬಿಡುವದಿಲ್ಲ.

ಶಾರೀರಕ ಕಾರಣ ಯಾವದೂ ಕಂಡು ಬರದಾಗ ಮಾನಸಿಕ ಕಾರಣದ ಶೋಧ ಮಾಡಬೇಕು. ಮಕ್ಕಳ ಸುಪ್ತ ಆಶೆ, ಆಕಾಂಕ್ಷೆ, ಭೀತಿ, ಕೋಪ ಮುಂತಾದವುಗಳು ಅವುಗಳ ಮನಸ್ಸಿನ ಆಳದಲ್ಲಿ ಹುದುಗಿದ್ದರೂ ಅವನ್ನು ಹೊರತರಬಹುದಾಗಿದೆ. ಆದರೆ ಇದಕ್ಕಾಗಿ ಅವಸರಪಡುವದಾಗಲಿ, ದಂಡಪ್ರಯೋಗ ಮಾಡುವದಾಗಲಿ ಪ್ರಯೋಜನದ್ದಲ್ಲ. ಮಗು ನಾಲ್ಕು ದಿನ ಹಾಸಿಗೆಯಲ್ಲಿ ಉಚ್ಚೆಹೊಯ್ದ ವಿಷಯವನ್ನು ಕಡೆಗಣಿಸಿ ಒಂದು ದಿನ ಹೊಯ್ಯದೆ ಇದ್ದುದನ್ನೆ ದೊಡ್ಡದನ್ನಾಗಿ ಮಾಡಿ ಮಗುವನ್ನು ಹೊಗಳಬೇಕು. ಮಗುವಿಗೆ ದೊಡ್ಡ ಆಮಿಷ ತೋರಿಸುವದೂ ಹಿತಕರವಲ್ಲ. ಆಗ ಪರಾಜಯದ ಸಂಶಯದಿಂದ ಅದು ವ್ಯಗ್ರವಾಗುವ ಸಂಭವ ಹೆಚ್ಚಾಗುತ್ತದೆ. ಆದರೆ ಉತ್ತೇಜನವೀಯಲೆಂದು ಸಣ್ಣ ಪುಟ್ಟ ಬಹುಮಾನ ಕೊಡಬಹುದು.

ಚಿಕ್ಕ ಮಕ್ಕಳ ಚಿಕಿತ್ಸೆಯಲ್ಲಿ ಆಟ-ವಿನೋದಗಳಿಗೆ ಮಹತ್ವದ ಸ್ಥಾನವಿದೆ. ನೀರಿನಲ್ಲಿ ಆಟವಾಡುವ, ಕೆಸರಿನಲ್ಲಿ ಓಡಾಡುವ ಚಾಪಲ್ಯ ಮಕ್ಕಳಿಗೆ ತುಂಬ ಇರುತ್ತದೆ. ತಾಯಿ ಮಗುವನ್ನು ಇಪ್ಪತ್ತು ನಾಲ್ಕು ತಾಸೂ ಸ್ವಚ್ಛವಾಗಿಡುತ್ತಿದ್ದರೆ ಹಾಸಿಗೆಯಲ್ಲಿ ಉಚ್ಚೆ ಹೊಯ್ದು ಮಗು ತನ್ನ ಚಾಪಲ್ಯವನ್ನು ತೀರಿಸಿಕೊಳ್ಳುತ್ತದೆ. ನೀರು ಕೆಸರುಗಳಲ್ಲಿ ಆಟವಾಡಲು ಮಗುವಿಗೆ ಒಂದಿಷ್ಟು ಅವಕಾಶವಿತ್ತರೆ ಅದರ ಇಚ್ಛಾಪೂರ್ತಿಯಾಗಿ ಸಂಘರ್ಷ ಕೊನೆಗಂಡು ಅದಗ ಹಾಸಿಗೆ ಒಣದಾಗಿ ಉಳಿಯತೊಡಗುತ್ತದೆ.

ಕೆಲ ಮಕ್ಕಳು ತಾಯಿ ಮಗ್ಗಲಲ್ಲಿ ಮಲಗಿದಾಗ ಮಾತ್ರ ಹಾಸಿಗೆಯಲ್ಲಿ ಉಚ್ಚೆ ಹೊಯ್ಯುತ್ತವೆ. ಇಂಥ ಮಕ್ಕಳನ್ನು ಪ್ರತ್ಯೇಕವಾಗಿ ಮಲಗಿಸಿದಾಗ ಈ ಅಭ್ಯಾಸ ತಪ್ಪುವದು.

ಸಂಜೆ ಮತ್ತು ರಾತ್ರಿ ಕಾಲದಲ್ಲಿ ಹೆಚ್ಚು ನೀರು ಕುಡಿಯುವದರಿಂದ ಮೂತ್ರದ ಉತ್ಪತ್ತಿ ಜಾಸ್ತಿಯಾಗಿ ರಾತ್ರಿ ಮೂತ್ರಶಂಕೆಯಾಗುತ್ತದೆ. ಆದ್ದರಿಂದ ಸಂಜೆಯ ನಂತರ ತೆಳ್ಳನ್ನ ಪದಾರ್ಥಗಳನ್ನು ಮಕ್ಕಳಿಗೆ ಕೊಡುವದನ್ನು ಕಡಿಮೆ ಮಾಡಬೇಕು. ನೀರಡಿಕೆ ಹೆಚ್ಚಿಸುವ ಸಿಹಿ ಮತ್ತು ಮಸಾಲೆಯುಕ್ತ ತಿಂಡಿಯನ್ನು ಕೊಡಬಾರದು.

ಸಾಮಾನ್ಯವಾಗಿ ಮಕ್ಕಳು ಹಾಸಿಗೆಯಲ್ಲಿ ಉಚ್ಚೆ ಹೊಯ್ಯುವದು ರಾತ್ರಿಯ ಪ್ರಥಮಾರ್ಧದಲ್ಲಿಯೆ. ರಾತ್ರಿ ಮಲಗುವ ಮೊದಲು ಮಗುವಿಗೆ ಉಚ್ಚೆ ಹೊಯ್ಯಿಸಿ ಮಲಗಿಸಿ ನಂತರ ಎಷ್ಟು ಹೊತ್ತಿನ ನಂತರ ಅದು ಉಚ್ಚೆ ಹೊಯ್ಯುತ್ತದೆಂಬುದನ್ನು ನೋಡಬೇಕು. ಮಗು ೧ ಗಂಟೆಗೆ ಉಚ್ಚೆ ಹೊಯ್ಯುತ್ತದೆ ಎಂದಾದರೆ ೧೩॥ ಗಂಟೆಗೇ ಅದನ್ನೆಬ್ಬಿಸಿ ಉಚ್ಚೆಹೊಯ್ಯಿಸಬೇಕು. ಈ ಕಾಲವನ್ನೂ ನಿಧಾನವಾಗಿ ಹೆಚ್ಚಿಸುವದು ಸಾಧ್ಯವಾಗುವದು. ಕೆಲ ದಿನಗಳಲ್ಲಿ ಉಚ್ಚೆ ಬಂದೊಡನೆ ಮಗು ತಾನಾಗಿಯೆ ಎಚ್ಚರಾಗಲು ತೊಡಗುವದು. ಮಗುವನ್ನು ಅರ್ಧಮರ್ಧ ಎಚ್ಚರಿಸುವದರಿಂದ ಏನೂ ಪ್ರಯೋಜನವಾಗುವದಿಲ್ಲ. ಆ ಸ್ಥಿತಿಯಲ್ಲಿ ಮಗು ಉಚ್ಚೆಹೊಯ್ಯದೆ ಹಾಗೆಯೇ ಮಲಗುವದು. ಆದ್ದರಿಂದ ಮಗುವನ್ನು ಪೂರ್ತಿ ಎಚ್ಚರಿಸುವುದವಶ್ಯ.

ಈ ಕಲ್ಪನೆಯ ಆಧಾರದಿಂದ ಕೆಲ ವ್ಯಾಪಾರ ಕಂಪನಿಗಳು ಒಂದು ವಿದ್ಯುದ್ಯಂತ್ರವನ್ನು ತಯಾರಿಸಿವೆ. ಇದನ್ನು ಟೊಂಕಕ್ಕೆ ಕಟ್ಟಿ ಮಲಗಿಕೊಂಡರೆ ಉಚ್ಚೆ ಬಂದೊಡನೆ ಗಂಟೆ ಬಾರಿಸಿ ಮಗುವಿಗೆ ಎಚ್ಚರವಾಗುತ್ತದೆ.

ಈ ಚಟ ನಿವಾರಣೆಗೆ ಮುಖ್ಯ ಉಪಾಯಯೋಜನೆ ಮಾನಸಿಕವಾಗಿರುವದರಿಂದ ಔಷಧ ಚಿಕಿತ್ಸೆಯ ಸಂಬಂಧ ಹೆಚ್ಚಾಗಿ ಬರುವದಿಲ್ಲ. ಧತ್ತೂರ ವರ್ಗದ ಔಷಧಿಗಳು ಕ್ಷೋಭೆಯನ್ನು

ಕಡಿಮೆ ಮಾಡುವದರಿಂದ ಉಪಯುಕ್ತವಾಗುತ್ತವೆ. ಇದರಿಂದ ಮೂತ್ರಾಶಯದಲ್ಲಿ ತುಸು ಮೂತ್ರ ಕೂಡಿದೊಡನೆ ಮೂತ್ರ ವಿಸರ್ಜಿಸಬೇಕೆಂಬ ಇಚ್ಛೆ ಕಡಿಮೆಯಾಗುತ್ತದೆ.

ಗಾಢ ನಿದ್ದೆಮಾಡುವ ಮಕ್ಕಳಿಗೆ ಮೂತ್ರ ಹೊಯ್ದರೂ ಎಚ್ಚರಾಗುವದಿಲ್ಲ. ಅಂಥ ಮಕ್ಕಳಿಗೆ ನಿದ್ದೆ ಕಡಿಮೆ ಮಾಡುವ ಔಷಧ ಕೊಡುವದರಿಂದ ಪ್ರಯೋಜನ ಪಡೆಯಬಹುದು. ಆದರೆ ಈ ಎರಡು ಬಗೆಯ ಔಷಧಗಳನ್ನೂ ಡಾಕ್ಟರರ ಸಲಹೆಯಿಲ್ಲದೆ ಉಪಯೋಗಿಸುವದು ಅಪಾಯಕರವಾದುದರಿಂದ ಔಷಧ ಕೊಡುವದಾದರೆ ಡಾಕ್ಟರರನ್ನು ವಿಚಾರಿಸಿಯೇ ಕೊಡಬೇಕು.

ಔಷಧದ ಉಪಯೋಗ ಮಾಡದೆಯೆ ನಿಮ್ಮ ಮಗುವಿನ ಈ ಅಭ್ಯಾಸವನ್ನು ಬಿಡಿಸುವದು ಶಕ್ಯವಿದೆ. ನಿಮ್ಮಲ್ಲಿ ತಾಳ್ಮೆ, ಮಗುವಿನ ಮನವನ್ನು ಅರಿತುಕೊಳ್ಳುವ ಇಚ್ಛೆ ಇದ್ದರೆ ತೀರಿತು. ನೀವು ನಿಮ್ಮ ಮಗುವನ್ನು ಈ ಅಭ್ಯಾಸದಿಂದ ಮುಕ್ತಗೊಳಿಸಬಹುದು.



## ನಿಂದೆಯಿಂದ ಕೊಬ್ಬಿದ ದೈತ್ಯ

ಬೌದ್ಧರ "ಸಂಯುತ್ತ ನಿಕಾಯ" ದಲ್ಲಿ ಹೀಗೊಂದು ಕಥೆಯಿದೆ :

ಒಮ್ಮೆ ಅತ್ಯಂತ ಕೃಶನಾಗಿದ್ದ ಅಸುರನೊಬ್ಬನು ಬಂದು ದೇವಾಧಿಪತಿಯಾದ ಇಂದ್ರನ ಸಿಂಹಾಸನದ ಮೇಲೆ ಕುಳಿತುಕೊಂಡನು. ಮಿಕ್ಕ ದೇವತೆಗಳೆಲ್ಲರೂ "ಎಂಥ ಅಪವಿತ್ರ ಕಾರ್ಯವಿದು, ಈ ಅಸಹ್ಯಪ್ರಾಣಿಯು ದೇವತೆಗಳೊಡೆಯನಾದ ಇಂದ್ರನ ಸಿಂಹಾಸನದ ಮೇಲೆ ಕುಳಿತುಬಿಟ್ಟಿದೆಯಲ್ಲ!"—ಎಂದು ನಿಂದಿಸುವುದಕ್ಕೆ ಮೊದಲುಮಾಡಿದರು.

ಅವರ ನಿಂದೆ ಹೆಚ್ಚಿದಂತೆಲ್ಲ ಆ ಕೃಶಾಂಗ ಅಸುರನ ಮೈ ದುಂಡಗಾಯಿತು. ಅವರು ರೇಗಿ ಬಯ್ಯುತ್ತ ಹೋದಂತೆ ಅಸುರನು ಸ್ಫುರದ್ರೂಪಿಯಾಗುತ್ತ ಬಂದನು.

ಇಷ್ಟರಲ್ಲಿ ಇಂದ್ರನು ಅಲ್ಲಿಗೆ ಬಂದನು. ದೇವತೆಗಳು ನಡೆದ ಘಟನೆಯನ್ನು ಹೇಳಿದರು: "ಇವನಿಗೆ ಸಿಟ್ಟೇ ಆಹಾರವಾಗಿರುವಂತೆ ಕಾಣಿಸುತ್ತದೆ. ನಾವು ಬಯ್ದಂತೆಲ್ಲ ಅವನು ಹೃಷ್ಟ-ಪುಷ್ಟನಾಗಿ ಲಾವಣ್ಯಯುತನಾಗಿ ಕಾಣಿಸುತ್ತಾನಲ್ಲ!"

ದೇವೇಂದ್ರನು ಶಾಂತ ಮುಖಮುದ್ರೆಯಿಂದ "ಪ್ರಭೋ, ನಾನು ನಿನ್ನ ಕಿಂಕರನಾದ ಶಕ್ರನು!" ಎಂದು ಮೂರು ಸಲ ನುಡಿದನು. ಅವನ ಒಂದೊಂದು ವಾಕ್ಯದ ಶ್ರವಣದಿಂದಲೂ ಅಸುರನು ಮತ್ತೆ ಕೃಶನಾಗುತ್ತ ಬಂದನು. ಮೂರನೆಯ ವಾಕ್ಯ ಮುಗಿವುದರೊಳಗೆ ಅವನು ಅಂತರ್ಧಾನನಾದನು.

—"ಅಧ್ಯಾತ್ಮಪ್ರಕಾಶ" ದಿಂದ



# ನಾನು ಓದಿ ಮೆಚ್ಚಿದ್ದು

ರವೀಂದ್ರನಾಥರ ಒಂದು ಗೀತ

" ನೀನು ಈಗ ಇರುವಂತೆಯೇ ಬಾ. ಅಲಂಕಾರ ಮಾಡಿಕೊಳ್ಳುವುದರಲ್ಲಿ ಹೊತ್ತು ಕಳೆಯಬೇಡ. ನಿನ್ನ ಜಡೆ ಬಿಚ್ಚಿದ್ದರೆ, ನಿನ್ನ ಬೈತಲೆ ನೇರವಾಗಿಲ್ಲದಿದ್ದರೆ ಕಂಚುಕ ಕಟ್ಟಿರದಿದ್ದರೆ ತೊಂದರೆಪಡಬೇಡ. ಇರುವಂತೆ ಬಾ. ಅಲಂಕಾರದಲ್ಲಿ ಹೊತ್ತು ಕಳೆಯಬೇಡ.

" ಹುಲ್ಲಿನ ಮೇಲೆ ಬೇಗಬೇಗ ಹೆಜ್ಜೆಯಿಡುತ ಬಾ. ನಿನ್ನ ಕಾಲ ಅಲತಿಗೆ ಮಂಜಿನಲ್ಲಿ ಹೋದರೆ, ನಿನ್ನ ಕಾಲ ಅಂದುಗೆ ಸ್ವಲ್ಪ ಸಡಿಲವಾದರೆ, ನಿನ್ನ ಸರದಿಂದ ಮುತ್ತು ಸೋರಿಬಿದ್ದರೆ, ಅದಕ್ಕೆ ನೀನು ಚಿಂತೆ ಮಾಡಬೇಡ. ಹುಲ್ಲಿನ ಮೇಲೆ ಬೇಗಬೇಗ ಹೆಜ್ಜೆಯಿಟ್ಟು ಬಾ. . . .

" ನೀನು ಮಾಲೆಯನ್ನು ಪೋಣಿಸಿ ತರದಿದ್ದರೆ ಇಲ್ಲವೆನ್ನುವರಾರು ? ಕಡಗದ ತಿರುಪನ್ನು ಹಾಕದಿದ್ದರೆ ಬೇಡ ಬಿಡು. ಆಕಾಶದ ತುಂಬ ಮೋಡಗಳು ಹಬ್ಬಿವೆ. ಹೊತ್ತಾಗಿ ಹೋಗಿದೆ. ಇರುವಂತೆ ಬಾ. ಅಲಂಕಾರದಲ್ಲಿ ಹೊತ್ತು ಕಳೆಯಬೇಡ. "

(ಮಾಸ್ತಿಯವರ ಅನುವಾದ)

ಆಯ್ದವರು : ಕೆ. ಜಿ. ವಸಂತಕುಮಾರ, ಕಡೂರು

ದಿ. ಮಧುರ ಚೆನ್ನರ "ಪೂರ್ವರಂಗ"ದಿಂದ

ನಾನು ಇರುವೆನೋ ಅಥವಾ ಇಲ್ಲವೋ ? ನನ್ನ ಜೀವವು ನನ್ನ ಮೈಯೊಳಗೆಲ್ಲಿದೆ ? ಹೇಗೆ ಇದೆ ? ಅದನ್ನು ನಾನು ಎಂದು ನೋಡಿರುವೆ ? ಇದೆಯೆಂದು ಯಾಕೆ ಹೇಳಬೇಕು ? ಮೈಯನ್ನು ಹರಿದಾಗಲಿ, ಮುರಿದಾಗಲಿ. ಹಿಂಡಿ ರಸ ತೆಗೆದಾಗಲಿ ಆ ಜೀವ ಎಂಬುದನ್ನು ಹೊರಗೆ ತೆಗೆದು ನೋಡಬಹುದೋ ? ಅಥವಾ ಸೂಕ್ಷ್ಮದರ್ಶಕದಂಥ ಯಂತ್ರಸಾಮುಗ್ರಿಯಿಂದಾದರೂ ಅದನ್ನು ಕಾಣಬಹುದೋ? ನಮ್ಮ ದೇಹದಲ್ಲಿ ನಮ್ಮ ಜೀವವು ಇದ್ದಂತೆ ಈ ತುದಿಮೊದಲಿಲ್ಲದ ವಿಶ್ವದಲ್ಲಿ ಅದರ ಆತ್ಮ ಸ್ವರೂಪವಾಗಿ ಪರಮಾತ್ಮನಿರಲಾರನೇಕೆ ? ಭೂಮಿಯನ್ನು ಬರೇ ಅಗೆದರೆ ಅಲ್ಲೇನು ? ಕಲ್ಲು-ಮಣ್ಣು ! ಮುಗಿಲೇರಿ ನೋಡಿದರೆ ಅಲ್ಲೇನಿದೆ ? ಬರೇ ಅಪರಂಪಾರವಾದ ಪೊಳ್ಳಿನಲ್ಲಿ ಅಸಂಖ್ಯ ನಕ್ಷತ್ರಗಳು ! ಜಡದೃಷ್ಟಿಯಿಂದ ಪರಿಶೋಧಿಸಿದರೆ ಇದಕ್ಕಿಂತ ಹೆಚ್ಚಿಗೆ ಏನು ಲಭ್ಯ ! ನಮ್ಮೊಳಗಿನ ಜೀವವನ್ನು ನೋಡುವದಕ್ಕೆ ಯೋಗದಂಥ ಒಂದು ಒಳದೃಷ್ಟಿಯಿದೆಯೆಂದುಕೊಂಡರೆ ಅದೇ ಒಳದೃಷ್ಟಿಯಿಂದ ದೇವರನ್ನು ಕಾಣುವದಕ್ಕೂ ಸಾಧ್ಯವಿರಲಾರದೇಕೆ ?

ಒಟ್ಟಿಗೆ ನಮ್ಮನ್ನು ನಾವು ಇರುವುದಾಗಿ ಭಾವಿಸಿದರೆ ಆತನನ್ನು ಇದ್ದಾನೆಂದು ಹೇಳಬೇಕು. ಆದರೆ ಆತನನ್ನು ಇಲ್ಲವೆಂದು ಹೇಳುವದಾದರೆ, ನಮ್ಮನ್ನೂ ನಾವು ಇಲ್ಲವೆಂದು ಗ್ರಹಿಸುವದಕ್ಕೆ ಸಾಧ್ಯವಿರಬೇಕು.

ಆಯ್ದವರು : ಹರಿಹರ ಜಿ. ಡಿ., ಕಿಲ್ಲೆ, ಹುಬ್ಬಳ್ಳಿ

ಶ್ರೀ ತಾರಾನಾಥರ "ಸಮಾಜದ ಕಟ್ಟು" ಲೇಖನದಿಂದ

ಸಮಾಜದ ಕಟ್ಟುಕಟ್ಟಳೆಗಳು ಗಾಯನ ವಾದ್ಯಗಳ ಕಟ್ಟುಗಳಿದ್ದಂತಿರಬೇಕು. ಸಾಮಾಜಿಕ ಬಂಧನವು ಮುಕ್ತಿಯ ಮೂಲಕಾರಣವಾಗಬೇಕಲ್ಲದೆ ಪ್ರಗತಿಯನ್ನು ನೆಲಕ್ಕೆ ಒತ್ತಿ ಮಾನವನನ್ನು ನಿರ್ಜೀವ ಯಂತ್ರವಾಗಿ ಹಾಳು ಮಾಡುವದಕ್ಕಲ್ಲ. ವೀಣೆಗೇರಿಸಿದ ತಂತಿಗಳು ಬಂಧನದಲ್ಲಿವೆ. ಆ ಬಂಧನದಿಂದ ಅನೇಕ ರಾಗ-ರಾಗಿಣಿಗಳಿಗೆ ಜನ್ಮ ಕೊಟ್ಟು ಪರರನ್ನು ಆನಂದಸಾಗರದಲ್ಲಿ ಮುಳುಗಿಸಿ ತಾವೂ ಕೀರ್ತಿಯನ್ನು ಪಡೆಯುತ್ತವೆ. ಬಂಧನದಿಂದಲೇ ರಸಭರಿತವಾದ ಆಲ್ಹಾದಕರವಾದ, ರಾಗಗಳನ್ನುತ್ಪಾದಿಸುವ ಸ್ವಾತಂತ್ರ್ಯವು ಬಂದಿತಲ್ಲವೇ ? ಸಾಮಾಜಿಕ ಬಂಧನವೂ ಹೀಗೆ ಪ್ರಗತಿಗೆ ಉತ್ತೇಜನವನ್ನು ಕೊಡುವಂಥಾದ್ದಾಗಿರಬೇಕು. ವೀಣೆಯ ತಂತಿಗಳಂತೆ ವ್ಯಕ್ತಿಯ ಪ್ರಗತಿಯನ್ನೂ, ಸಮಾಜದ ಸುಖವನ್ನೂ, ಬೆಳೆಸುವಂಥಾದ್ದೇ ಶಾಸ್ತ್ರೋಕ್ತ ಬಂಧನ. ಇದ್ದಂತೆ ಇರುವದು ಯಂತ್ರಜೀವನ. ಪ್ರಾಣಿಜೀವನವಲ್ಲ. ಪರಿಸ್ಥಿತಿಯನ್ನು ಜಯಿಸಲು ಯತ್ನಿಸುವದೇ ಪ್ರಾಣಿಸ್ವಭಾವ. 'ಮುಂದೆ ಇನ್ನೂ ಮುಂದೆ' ಎಂಬುದೇ ಅಹೋರಾತ್ರಿ ಪ್ರಾಣಿಗಳಲ್ಲಾಗುವ ಆಕಾಶವಾಣಿ. .... ನಮ್ಮಲ್ಲಿಯ ಪ್ರತಿಯೊಂದು ವ್ಯಕ್ತಿಗೂ ಪ್ರಫುಲ್ಲಿತವಾಗಿ ಅರಳಲಿಕ್ಕೆ ಯಾವಾಗ ಸಮಾಜದಲ್ಲಿ ಪ್ರೋತ್ಸಾಹವಿಲ್ಲದಿದ್ದರೂ, ಸಂದರ್ಭ ಮಾತ್ರವಾದರೂ ದೊರೆಯುವದೋ ಆ ದಿನವೇ ನಮ್ಮ ಸಮಾಜವು ಅಜಿಂಕ್ಯವಾಗುವದು. ಆ ಹೊತ್ತೇ ಜ್ಞಾನಭಾಸ್ಕರನು ತನ್ನ ಪ್ರೇಮದ ಕಿರಣಗಳನ್ನು ಸುರಿಸುವನು. ಉಷಾದೇವಿಯು ತನ್ನ ಅನೇಕ ರೂಪ ವರ್ಣಗಳ ಸುಂದರ ಮತ್ತು ಲಲಿತ ರೂಪಗಳನ್ನು ತೋರಿಸುವಳು ಅಂದೇ ನಿಸರ್ಗದೇವತೆಯು ತನ್ನ ಸುಂದರ ಬಾಲೆಯರಾದ ಪುಷ್ಪ ಪಲ್ಲವಗಳ ನರ್ತನದೊಡನೆ ಗಂಧರ್ವ ಗಾಯನವನ್ನು ಹಾಡುವಳು.

—ಆಯ್ದವರು : ಪ್ರಕಾಶ ಹೊಂಗಲ, ಬೈಲಹೊಂಗಲ.

ಆಂಟನ್ ಚಕೋಫನ "ಅಂಕಲ್ ವೇನಿಯ" ಎಂಬ ಕಿರುನಾಟಕದಿಂದ

ಜೀವಿಸೋಣ. ಜೀವಿಸಿದ್ದು ಬಾಳನ್ನು ಸಾಗಿಸೋಣ. ವಿಧಿ ಹೊರಿಸುವ ದಿನ ದಿನದ ದುಃಖದ ಪರಂಪರೆಯನ್ನು ಸೌಮ್ಯ ಸ್ವಭಾವದಿಂದ ಹೊತ್ತು ನಿರ್ವಹಿಸೋಣ. ನಮ್ಮ ಜೀವನವನ್ನೆಲ್ಲ ಹೆರವರಿಗಾಗಿ ಶ್ರಮಿಸೋಣ. ವಿಶ್ರಾಂತಿ ಒಂದಿನಿತೂ ಬೇಡ. ಸಮಯ ಸನ್ನಿಹಿತವಾದಾಗ ಸವಿನಮ್ರ ಭಾವನೆಯಿಂದ ಮೃತ್ಯುವನ್ನು ಆಹ್ವಾನಿಸೋಣ. ಕಾಲನ ಗೋರಿಯಾಚೆ ನಿಂತು ಸುಸ್ಪಷ್ಟವಾಗಿ ನುಡಿಯೋಣ— ನಮಗೊದಗಿದ ಸಂಕಷ್ಟಗಳನ್ನೆಲ್ಲ ಸಹಿಸಿದ್ದೇವೆ, ದುಃಖದ

ಕಂಬನಿಯನ್ನು ಮಿಡಿದಿದ್ದೇವೆ, ಬಾಳಿನ ಕಹಿಯನ್ನು ಅನುಭವಿಸಿದ್ದೇವೆ— ಎಂದು ಸ್ಫುಟವಾಗಿ ಘೋಷಿಸೋಣ. ದೇವರು ನಮ್ಮನ್ನು ಕರುಣಾಪೂರಿತ ದೃಷ್ಟಿಯಿಂದ ಕಾಣುತ್ತಾನೆ. ಆಗ ಶುಭ್ರ, ಸುಂದರ, ಸುಕೋಮಲವಾದ ಜೀವನವನ್ನು ಕಾಣಲುಜ್ಜುಗಿಸೋಣ. ನಾವು ಪಟ್ಟ ಬವಣೆಯನ್ನೆಲ್ಲ ಹಿಂದಿರುಗಿ ನೋಡಿ ಕೋಮಲಭಾವನೆಯಿಂದ ಕಂಡು ನಲಿಯೋಣ. ನಂತರ ವಿಶ್ರಮಿಸೋಣ . . .

. . . . ವಿಶ್ರಮಿಸಿ ದೇವದೂತರ ಮಧುರ ವಾಣಿಯನ್ನು ಆಲಿಸೋಣ; ಮಿನುಮಿನುಗುವ ತಾರಾವಳಿಯಿಂದ ತುಂಬಿದ ಅಂಬರವನ್ನು ಅವಲೋಕಿಸೋಣ. ಜಗವೆಲ್ಲ ಅಮೃತತ್ವದಿಂದ ತುಂಬಿ, ಬುವಿಯ ಪಾಪವೆಲ್ಲ, ಬವಣೆಯ ಪರಂಪರೆಯಲ್ಲಿ ತೊಡೆದುಹೋಗುವದನ್ನು ವೀಕ್ಷಿಸೋಣ. ಆಗ ನಮ್ಮ ಜೀವನ ಶಾಂತಿಯುತವಾಗುತ್ತದೆ, ಮಧುರ ಮಂಜುಳವಾಗುತ್ತದೆ. ಆಯ್ದವರು : ಯಂ.ಯಂ. ಎಸ್.

ಈಗ ಸುಮಾರು ಐದು ತಿಂಗಳುಗಳಿಂದ ಓದುಗರು "ನಾನು ಓದಿ ಮೆಚ್ಚಿದ್ದು" ವಿಭಾಗಕ್ಕೆ ತಮಗೆ ಮೆಚ್ಚಿದ ಪ್ಯಾರಾಗಳನ್ನು ಕಳಿಸುತ್ತ ಬಂದಿದ್ದಾರೆ. ಈ ಪ್ಯಾರಾಗಳಲ್ಲಿ ಹೆಚ್ಚಿನಂಶ ಕೆಲವೇ ಆಧುನಿಕ ಕಾದಂಬರಿಗಳಿಂದ ಆರಿಸಿಕೊಂಡವು. ಇತರ ಪುಸ್ತಕಗಳಿಂದ ಅಲ್ಲೊಂದು ಇಲ್ಲೊಂದು ಪ್ಯಾರಾಗಳನ್ನು ಕಳಿಸಿದವರೂ ಪಠ್ಯಪುಸ್ತಕಗಳಿಂದ ಎತ್ತಿಕೊಂಡಿರುವುದೇ ಹೆಚ್ಚು.

ಸುಮಾರು ಒಂದು ದಶಕ ಹಿಂದಿನ, ಹಾಗೂ ಅಗ್ಗದ ಕೈಹೊತ್ತಿಗೆಯ ರೂಪದಲ್ಲಿ ಹೊರಡದ ಪುಸ್ತಕಗಳಲ್ಲಿ, ಕಥೆ ಕಾದಂಬರಿಗಳ ಹೊರಗೆ, ಓದಿ ಮೆಚ್ಚುವಂಥ ಪ್ಯಾರಾಗಳಿಲ್ಲವೆ? ಇವೆ. ಆದರೆ ಅವನ್ನು ಓದುವವರು ಕಡಮೆ ಎಂದು ತೋರುತ್ತದೆ. ಅನೇಕ ಜನರು ಕಳಿಸುವ ಪ್ಯಾರಾಗಳಲ್ಲಿ ಮೆಚ್ಚತಕ್ಕ ಅಂಶವಾವುದು ಎಂಬುದೇ ಒಂದು ಸಮಸ್ಯೆ.

ಓದಿ ಮೆಚ್ಚಿದ ವಿಭಾಗವು ಹೆಚ್ಚು ಆಕರ್ಷಕವಾಗಬೇಕಾದರೆ ಓದುಗರು ನಿಜವಾಗಿ ಸವಿದ ಭಾಗಗಳನ್ನು ತಮ್ಮ ನೋಟುಬುಕ್ಕಿನಲ್ಲಿ ಬರೆದುಕೊಂಡು ಹಾಗೆ ಬರೆದಿಟ್ಟವುಗಳಿಂದ ಆಯ್ದ ಪ್ಯಾರಾಗಳನ್ನು ಕಳಿಸುವುದು ಸರಿಯಾದ ರೀತಿ. ಓದುಗರು ಈ ಅಭ್ಯಾಸವನ್ನು ಬೆಳೆಸಿಕೊಳ್ಳುವರೆಂದು ನಂಬುತ್ತೇವೆ.

## ಅತಿ ಜನಪ್ರಿಯ ಲೇಖಕರಾರು ?

ನಮಗೆ ಬರುತ್ತಿರುವ ಪ್ಯಾರಾಗಳಿಂದ ಇಂದಿನ ಜನಾಂಗದ ಅತಿ ಜನಪ್ರಿಯ ಲೇಖಕರಾರೆಂದು ಊಹಿಸಬಹುದೆ? ಈ ಕುತೂಹಲದಿಂದ ವಿಂಗಡಿಸಿದಾಗ ಕೆಳಗಿನಂತೆ ತೀರ್ಮಾನ ಹೊರಟಿತು. ಬಂದ ೧೨೫ ಪ್ಯಾರಾಗಳಲ್ಲಿ ಮೊದಲ ಮೂರು ಸ್ಥಾನಗಳು ಕೆಳಗಿನ ಲೇಖಕರಿಗೆ ಸಲ್ಲುತ್ತವೆ :

| | | |
|---|---|---|
| ೧. | ತ.ರಾ.ಸು. | (೧೮ ಪ್ಯಾರಾಗಳು) |
| ೨. | ಅ.ನ.ಕೃ. | (೧೭ ಪ್ಯಾರಾಗಳು) |
| ೩. | ಕು.ವೆಂ.ಪು. | (೧೧ ಪ್ಯಾರಾಗಳು) |



**ರಶಿಯವನ್ನು ಸಂಕಟದಲ್ಲಿ ಕಾಪಾಡಿದ ವೀರ**

# ಮಾರ್ಶಲ್ ಝುಕೋವ್

ಮಾರ್ಶಲ್ ಗ್ರಿಗೊರಿ ಕಾನ್‌ಸ್ಟಾಂಟಿನೊವಿಚ್ ಝುಕೋವರು ಇಂದು ರಶಿಯದ ಅತಿ ಪ್ರಬಲ ಪುರುಷರಲ್ಲೊಬ್ಬರಾಗಿದ್ದಾರೆ. ಸ್ಟಾಲಿನ್ನರ ಮರಣಾನಂತರ ಅಸ್ತಿತ್ವಕ್ಕೆ ಬಂದ ಮಂತ್ರಿಮಂಡಲದಲ್ಲಿ ಮಾರ್ಶಲ್ ಝುಕೋವರಿಗೆ ಉಪ-ಸಂರಕ್ಷಣ ಮಂತ್ರಿ ಪದ ದೊರಕಿತು. ಗುಪ್ತ ಪೋಲೀಸ ಪಡೆಯ ಪ್ರಮುಖ ಬೇರಿಯಾನನ್ನು ಗಲ್ಲಿಗೇರಿಸಿದ ಬಳಿಕ ಝುಕೋವರ ಅಂತಸ್ತು ಇನ್ನೂ ಹೆಚ್ಚಿತು. ಈಗ ಅವರು ರಶಿಯದ ಸಂರಕ್ಷಣ ಮಂತ್ರಿಯಾಗಿದ್ದಾರೆ.

ರಶಿಯದಲ್ಲೆಲ್ಲ ಇಂದು ಜನಪ್ರಿಯತೆಯಲ್ಲಿ ಝುಕೋವರನ್ನು ಮೀರಿಸುವವರಿಲ್ಲ ಎನ್ನಬೇಕು. ಎರಡನೇ ಮಹಾಯುದ್ಧದಲ್ಲಿ ಕುಸಿಯಲಾಗಿದ್ದ ರಶಿಯನ್ ಸೈನ್ಯವನ್ನು ವಿಜಯಕ್ಕೆ ಒಯ್ದವರು ಅವರೇ ಎಂಬುದಾಗಿ ರಶಿಯದ ಜನತೆ ಅವರಿಗೆ ವೀರಪೂಜೆ ಸಲ್ಲಿಸುತ್ತದೆ. ಸೈನಿಕರಿಗೆ ಅವರೆಂದರೆ ಜೀವ. ಅಮೇರಿಕದಲ್ಲಿ ಐಸೆನ್‌ಹಾವರರು ಹೇಗೋ ಹಾಗೆ ರಶಿಯದಲ್ಲಿ ಝುಕೋವರ ಮೇಲೆ ಜನರ ಪ್ರೀತಿ.

ಸ್ಟಾಲಿನ್ ನಂತರದ ರಶಿಯದಲ್ಲಿ ಜನರಿಗೆ ಸ್ವಲ್ಪವಾದರೂ ಸ್ವಾತಂತ್ರ್ಯದ ಹವೆ ಸಿಕ್ಕಿದ್ದರೆ ಝುಕೋವರಿಗೆ ಅದರ ಕೀರ್ತಿ ಕೆಲವಂಶ ಸಲ್ಲಬೇಕು. ಸ್ಟಾಲಿನ್ನರ ದಬ್ಬಾಳಿಕೆಯ ಮುಖ್ಯ ಸಾಧನವಾಗಿದ್ದ ಗುಪ್ತ ಪೋಲೀಸಿನ ಅಧಿಕಾರವನ್ನೂ ಶಕ್ತಿಯನ್ನೂ ಕುಗ್ಗಿಸಿದ್ದರಲ್ಲಿ ಝುಕೋವರ ಕೈವಾಡ ಮುಖ್ಯವಾಗಿತ್ತೆಂದು ವಿದೇಶಿ ನಿರೀಕ್ಷಕರೆಲ್ಲರ ಮತ.

ಗುಪ್ತ ಪೋಲೀಸ ಮುಖ್ಯಸ್ಥ ಲಾರೆಂಟಿ ಬೇರಿಯಾನನ್ನು ಸ್ವಹಸ್ತದಿಂದ ಬಂಧಿಸಿದ ಧೀರ ಝುಕೋವರೇ ಎಂದು ಹೇಳುವವರಿದ್ದಾರೆ. ಸ್ಟಾಲಿನ್ನರ ಮರಣದ ನಂತರ ಗುಪ್ತಪೋಲೀಸಿನ ಬಲದಿಂದ ತಾನೇ ಸರ್ವಾಧಿಕಾರಿಯಾಗಲು ಬೇರಿಯಾ ಹೊಂಚುಹಾಕಿದ್ದ. ಬುಲ್ಗಾನಿನ್, ಮಾಲಿಂಕೋವರು ಗಾಬರಿಯಾದರು. ಬೇರಿಯಾನ ಗುಪ್ತಪೋಲಿಸರನ್ನು ಮೆಟ್ಟಿಹಾಕಲು

ಸೈನ್ಯಕ್ಕೆ ಮಾತ್ರ ಸಾಧ್ಯವೆಂದು ಅವರಿಗೆ ತೋರಿತು. ಸೈನ್ಯವು ಝುಕೋವರಿಗೆ ಬೆಂಬಲ ಕೊಡುತ್ತದೆಂದೂ ಅವರು ಬಲ್ಲರು. ಆದ್ದರಿಂದ ಅವರು ಝುಕೋವರನ್ನು ತಮ್ಮ ಪಕ್ಷಕ್ಕೆ ತೆಗೆದುಕೊಂಡರು.

ಮರುದಿನ ಮಂತ್ರಿಮಂಡಲದ ಸಭೆ ಸೇರಿದಾಗ ಝುಕೋವರೂ ಹಾಜರಿದ್ದರು. ಅದರಲ್ಲಿ ಗುಪ್ತ ಪೋಲೀಸು ದಳದ ನಿಯಂತ್ರಣವನ್ನು ಬಿಟ್ಟುಕೊಡಲು ಬೇರಿಯಾಗೆ ಹೇಳಲಾಯಿತು. ಬೇರಿಯಾ ಅದನ್ನು ಧಿಕ್ಕರಿಸಿದ್ದೇ ತಡ, ಝುಕೋವ ತಾವೇ ಎದ್ದು ಹೋಗಿ ಬೇರಿಯಾ-ನನ್ನು ಬಂಧಿಸಿದರು. ಮೊದಲೇ ಅವರು ಸೈನ್ಯದ ತುಕಡಿಗಳನ್ನು ಆಯಕಟ್ಟಿನ ಸ್ಥಳಗಳಲ್ಲಿ ನಿಲ್ಲಿಸಿ-ದ್ದರಿಂದ ಬೇರಿಯಾನ ಗುಪ್ತಪೋಲೀಸರು ತೆಪ್ಪಗೆ ಕುಳಿತಿರಬೇಕಾಯಿತು. ಮುಂದೆ ಬೇರಿಯಾನನ್ನು ಗುಪ್ತವಾಗಿ ವಿಚಾರಣೆಗೊಳಪಡಿಸಿ ಮರಣ ದಂಡನೆ ವಿಧಿಸಲಿಕ್ಕೂ ಝುಕೋವರ ಒತ್ತಾಯವೇ ಕಾರಣವೆಂಬುದು ಆಗ ರಶಿಯದಲ್ಲಿದ್ದ ವಿದೇಶೀಯರ ಅಭಿಪ್ರಾಯ.

ಜನತೆಯ ಸ್ವಾತಂತ್ರ್ಯಕ್ಕೆ ಯಮಸ್ವರೂಪನಾ-ಗಿದ್ದ ಬೇರಿಯಾನ ಅವಸಾನಕ್ಕೆ ಝುಕೋವರು ಕಾರಣವೆಂದು ಮಾತ್ರವಲ್ಲ, ರಶಿಯವನ್ನು ಮೂವತ್ತು ವರ್ಷಕಾಲ ಉಕ್ಕಿನ ಮುಷ್ಟಿಯಲ್ಲಿ ಹಿಡಿದಿದ್ದ ಸ್ಟಾಲಿನ್ನರ ಮೃತ್ಯುವಿನಲ್ಲಿಯೂ ಝುಕೋವರ ಅಂಗವಿದೆಯೆಂಬವರಿದ್ದಾರೆ.

ಆದರೆ ರಶಿಯದ ಹೊರಗೆ ಝುಕೋವರ ಕೀರ್ತಿಯಿರುವುದು ಎರಡನೇ ಮಹಾ ಯುದ್ಧದ ವೀರ ಸೇನಾಪತಿಯೆಂದು. ವಿಜಯೋನ್ಮಾದದಲ್ಲಿ ಮಾಸ್ಕೋದ ಹೆಬ್ಬಾಗಿಲಿಗೆ ಜರ್ಮನ್ ಸೇನೆ ಬಂದು ನಿಂತಿತ್ತು. ಹತ್ತು ವಾರಗಳಲ್ಲಿ ರಶಿಯವನ್ನು ಮುಗಿಸುವೆನೆಂಬ ಹಿಟ್ಲರನ ಪಂಥ ಗೆಲ್ಲುವು-ದೆನ್ನೋ ಅನಿಸುತ್ತಿತ್ತು. ಸ್ಟಾಲಿನ್ನರು ರಾಜಧಾನಿಯನ್ನು ಕುಚಬಿಶೇವಕ್ಕೆ ವರ್ಗಾಯಿಸಿ ನಿರಾಶೆಯಿಂದ ಕೈಚೆಲ್ಲಿ, "ಲೆನಿನ್ನರು ಕಟ್ಟಿದ್ದೆಲ್ಲ ನಾವು ಮಣ್ಣುಗೂಡಿಸಿದಂತಾಯಿತು" ಎಂದು ತಮ್ಮ ಜೊತೆಗಾರರಿಗೆ ಹೇಳಿದರಂತೆ. ಆಗ ಜರ್ಮನ್ ಸೇನೆಯನ್ನು ಮಾಸ್ಕೋದಿಂದ ಸ್ಟಾಲಿನ್‌ಗ್ರಾಡ್ ವರೆಗಿನ ವಿಸ್ತಾರವಾದ ರಂಗದಲ್ಲಿ ಅಪ್ಪಳಿಸಿ ಹಿಂದೂಡಿದ ಸೇನಾನಾಯಕ ಝುಕೋವ್.

೧೯೪೧ರ ಫೆಬ್ರುವರಿಯಲ್ಲಿ ರಶಿಯಾದ ಸೇನಾಪತಿ ಮಂಡಲದ ಮುಖ್ಯಸ್ಥರಾಗಿ ಸ್ಟಾಲಿನ್ನರು ಝುಕೋವರನ್ನು ನೇಮಿಸಿದಾಗ ರಶಿಯನ್ ಸೈನ್ಯ ದುರವಸ್ಥೆಯಲ್ಲಿತ್ತು. ೧೯೩೭ರಲ್ಲಿ ಸ್ಟಾಲಿನ್ನರು ಸೈನ್ಯದ ಹಳೇ ನಾಯಕರನ್ನೆಲ್ಲ ಕೊಲ್ಲಿಸಿಬಿಟ್ಟಿದ್ದರು. ಉಳಿದವರು ಸ್ಟಾಲಿನ್ನರ ಬಾಲಬಡಕರು ಮಾತ್ರ. ಫಿನ್ಲಂಡಿನ ಮೇಲೆ ಹೂಡಿದ ಯುದ್ಧದಲ್ಲಿ ರಶಿಯಕ್ಕೆ ಫಜೀತಿಯಾಗಿತ್ತು. ಇಂಥ ಸೈನ್ಯವನ್ನು ಪುನಃ ಸಂಘಟಿಸುತ್ತಿದ್ದಾಗಲೇ ಜರ್ಮನರು ದಾಳಿ ಮಾಡಿದರು. ಅಕ್ಟೋಬರದಷ್ಟು ಹೊತ್ತಿಗೆ ಮಾಸ್ಕೋದ ೩೦ ಮೈಲಿನೊಳಗೆ ಅವರು ನುಗ್ಗಿಬಿಟ್ಟಿದ್ದರು. ಆಗ ಮಾಸ್ಕೋವನ್ನು ರಕ್ಷಿಸಲು ಝುಕೋವರನ್ನು ಕೇಳಿಕೊಳ್ಳಲಾಯಿತು.

"ಒಂದು ಹೆಜ್ಜೆ ಹಿಂದಿಡಕೂಡದು! ಫ್ಯಾಸಿಸ್ಟರನ್ನು ತಡೆಯಿರಿ! ಪ್ರತಿಯೊಬ್ಬನೂ ಹತ್ತು ಕೈಯುಳ್ಳವರಂತೆ ಹೋರಾಡಿರಿ!'' ಎಂದು ಸೈನಿಕರಿಗೆ ಝುಕೋವರು ಕಟ್ಟಪ್ಪಣೆ ಮಾಡಿದರು. ಸೈನಿಕರು ವೀರಾವೇಶದಿಂದ ಕಾದಿದರು. ಜರ್ಮನ್ನರ ಮುಂದೋಟದ ಭರ ಕುಗ್ಗಿತು. ಝುಕೋವರು ಕಾದಿಟ್ಟ ದಳಗಳನ್ನು ಕರೆಸಿದರು. ಆ ಮೇಲೆ ಮಾಸ್ಕೋದ ಹೆಬ್ಬಾಗಿಲ ವರೆಗೂ ಜರ್ಮನ್ನರನ್ನು ಬರಗೊಟ್ಟು, ಝುಕೋವರು ಒಮ್ಮೆಲೇ ಪ್ರತಿದಾಳಿ ಹೂಡಿದರು. ಜರ್ಮನ್ ಸೈನ್ಯ ಡಿಸೆಂಬರದೊಳಗೆ ಹಿಂದೋಡತೊಡಗಿತ್ತು.

ಸ್ಟಾಲಿನ್‌ಗ್ರಾಡಿನ ಅದ್ಭುತ ಸಮರವನ್ನು ಯೋಜಿಸಿ ಜರ್ಮನ್ನರ ಏಳು ಸೈನ್ಯಗಳನ್ನು ಸಂಪೂರ್ಣ ನಾಶಪಡಿಸಿದ್ದೂ ಝುಕೋವರ ಸಮರಕೌಶಲವೇ.

ಅನಂತರ ೨೦೦ ರಶಿಯನ್ ದಳಗಳೊಡನೆ ಜರ್ಮನ್ನರನ್ನು ಬೆನ್ನಟ್ಟುತ್ತ ೧೮ ದಿನಗಳಲ್ಲಿ ೩೦೦ ಮೈಲು ಕ್ರಮಿಸಿ ವಾರ್ಸಾವನ್ನು ಗೆದ್ದು ಬರ್ಲಿನ್ನಿನ ಪತನಕ್ಕೆ ಎಡೆ ಮಾಡಿಕೊಟ್ಟವರೂ ಝುಕೋವರೇ.

ರಶಿಯನ್ ಸೇನೆಯಲ್ಲಿ ಝುಕೋವರ ಉನ್ನತಿ ಐಸೆನ್‌ಹಾವರರು ಅಮೇರಿಕನ್ ಸೈನ್ಯದಲ್ಲಿ ಪಡೆದ ಉನ್ನತಿಯಂತೆ ಅತಿ ಶೀಘ್ರವಾಗಿತ್ತು. ಅವರ ತಂದೆ ಮಧ್ಯ ರಶಿಯದ ಸ್ಟ್ರೆಲ್ಕೋವದ ಒಬ್ಬ ಬಡ ರೈತ. ೧೮೯೫ ರಲ್ಲಿ ಹುಟ್ಟಿದ ಝುಕೋವರು ೧೧ ನೇ ವಯಸ್ಸಿಗೆ ಕೆಲಸ ಹುಡುಕುತ್ತ ಮಾಸ್ಕೋಕ್ಕೆ ಬಂದು ಒಬ್ಬ ಉಣ್ಣೆ ವ್ಯಾಪಾರಿಯಲ್ಲಿ ಕೆಲಸ ಕಲಿಯಲು ಸೇರಿಕೊಂಡರು. ಮೊದಲನೇ ಮಹಾಯುದ್ಧದಲ್ಲಿ ಝಾರ ಚಕ್ರವರ್ತಿಯ ಸೈನ್ಯಕ್ಕೆ ಸೇರಿದ ಅವರನ್ನು ಎರಡು ವರ್ಷಗಳ ನಂತರ ಆರೋಗ್ಯ ನೆಟ್ಟಗಿಲ್ಲೆಂದು ಸೇನೆಯಿಂದ ಬಿಡುಗಡೆ ಮಾಡಲಾಯಿತು.

ಅವರಿಗೆ ಆರೋಗ್ಯಲಾಭವಾಗುವಷ್ಟರಲ್ಲಿ ಕಮ್ಯುನಿಸ್ಟರು ರಶಿಯದಲ್ಲಿ ಅಧಿಕಾರಕ್ಕೆ ಬಂದಿದ್ದರು. ಅವರು ಮತ್ತೆ ಸೈನ್ಯ ಸೇರಿದರು, ಮತ್ತು ಕಮ್ಯುನಿಸ್ಟರೂ ಆದರು. ರಶಿಯದ ಯಾದವಿ ಯುದ್ಧದಲ್ಲಿ ಚೆನ್ನಾಗಿ ಹೋರಿ ಆಫೀಸರ ಪದಕ್ಕೇರಿದರು.

ಯಾದವಿ ಕಲಹ ಮುಗಿದ ಮೇಲೆ ರಶಿಯನ್ ಸೇನಾಪತಿಗಳ ಕಾಲೇಜಾದ ಫ್ರುನ್ಜ್ ವಿದ್ಯಾಲಯದಲ್ಲಿ ಅಭ್ಯಸಿಸಿ ಝುಕೋವರು ೧೯೩೬ ರ ವರೆಗೂ ಸಾಮಾನ್ಯ ಸೈನ್ಯಾಧಿಕಾರಿಯಾಗಿದ್ದರು. ಅನಂತರ ಸ್ಪೇನಿನಲ್ಲಿ ಯಾದವಿ ಯುದ್ಧ ನಡೆದಾಗ ರಶಿಯದ ಮುಖ್ಯ ನಿರೀಕ್ಷಕರಾಗಿ ಕಳಿಸಲ್ಪಟ್ಟರು.

ಝುಕೋವರ ಸಮರ ಕೌಶಲದ ಪ್ರಥಮ ಪರಿಚಯವಾದದ್ದು ೧೯೩೮ರಲ್ಲಿ. ಜಪಾನಿಗಳು ಮಂಗೋಲಿಯನ್ ಗಣರಾಜ್ಯದ ಮೇಲೆ ದಾಳಿ ಮಾಡಿದಾಗ ಸ್ಟಾಲಿನ್ನರು ಝುಕೋವರನ್ನು ಅಲ್ಲಿಗೆ ಕಳಿಸಿದರು. ಝುಕೋವರು ಜಪಾನಿಗಳ ೬ನೇ ಸೈನ್ಯವನ್ನು ಸಂಪೂರ್ಣ ನಿರ್ನಾಮ ಮಾಡಿದ್ದರಿಂದ ಜಪಾನಿಗಳು ಬಾಲ ಮುದುಚಿಕೊಂಡು ಮಂಚೂರಿಯಕ್ಕೆ ಪಲಾಯನ ಮಾಡುವಂತಾಯಿತು.

" ಯುದ್ಧವೆಂಬುದೊಂದು ವಿಜ್ಞಾನ–ಗಣಿತದ ಸಮಸ್ಯೆಯಿದ್ದಂತೆ. ಮನುಷ್ಯರನ್ನೂ ಶಸ್ತ್ರಾಸ್ತ್ರಗಳನ್ನೂ ಕಾಲ-ದೂರಗಳಲ್ಲಿ ಸರಿಯಾಗಿ ಹೊಂದಿಸಬಲ್ಲವನು ಸಮಸ್ಯೆ ಬಿಡಿಸುತ್ತಾನೆ" ಎನ್ನುತ್ತಾರೆ ಅವರು. ಝುಕೋವರು ಸಮಸ್ಯೆಯನ್ನು ಒಂದಲ್ಲ ಎರಡೂ ಕೈಗಳಿಂದ ಬಿಡಿಸಿ ತೋರಿಸಿದರು. ಎರಡನೇ ಮಹಾಯುದ್ಧದಲ್ಲಿ ಅವರು ಎರಡೆರಡು ಹುದ್ದೆಗಳನ್ನು ನೋಡಿಕೊಳ್ಳಬೇಕಾಗಿತ್ತು. ಒಂದು, ರಣರಂಗದಲ್ಲಿ ಸೇನೆಗಳನ್ನು ನಡೆಸುವುದು, ಎರಡು, ಸೇನಾಪತಿ ಮಂಡಲದ ನಾಯಕರಾಗಿ ಕಚೇರಿ ಕೆಲಸ ನೋಡಿಕೊಳ್ಳುವುದು. ಯಾವ ಸೇನಾಪತಿಯನ್ನೂ ಕಂಗೆಡಿಸಬಹುದಾಗಿದ್ದ ಈ ಇಮ್ಮಡಿ ಹುದ್ದೆಗಳ ನಿರ್ವಹಣಕ್ಕೆ ಅವರು ರಣರಂಗದಿಂದ ಕ್ರೆಮ್ಲಿನ್ನಿಗೆ ಕ್ರೆಮ್ಲಿನ್ನಿನಿಂದ ರಣರಂಗಕ್ಕೆ ಯಾತಾಯಾತ ಮಾಡುತ್ತಿದ್ದರು.

ನಿಷ್ಠುರ ಸೇನಾಪತಿಯಾದರೂ ಝುಕೋವರು ತಮ್ಮ ಸೈನಿಕರ ಸುಖದುಃಖಗಳನ್ನು ತಮ್ಮ ಸುಖದುಃಖವೆಂದೇ ಬಗೆಯುವರು. " ನನಗೇನೇ ಆಗಲಿ, ಸಾಮಾನ್ಯ ಸೈನಿಕ ನನಗೆ ನನ್ನ ಜೀವಕ್ಕಿಂತಲೂ ಪ್ರಿಯ. ನನಗೆ ನಿದ್ದೆ ಬೇಡ, ವಿಶ್ರಾಂತಿಯೂ ಬೇಡ; ಆದರೆ ನನ್ನ ಸೈನಿಕರಿಗೆ ಅವೆರಡೂ ಸಿಗಲಿ " ಎನ್ನುತ್ತಾರೆ ಅವರು.

ಒಮ್ಮೆ ಸಾಮಾನ್ಯ ಸೈನಿಕನ ವೇಷದಲ್ಲಿ ಅವರು ಯಾರಿಗೂ ತಿಳಿಯದಂತೆ ಸೇನಾಧಿಕಾರಿಗಳ ವಾಹನಗಳು ಹಾಯ್ದು ಹೋಗುವ ದಾರಿಯಲ್ಲಿ ಕಾದು ನಿಂತರು. ರಶಿಯನ್ ಸೇನಾಧಿಕಾರಿಗಳು ಮೋಟಾರು ನಿಲ್ಲಿಸಿ, ಕಾಲ್ನಡೆಯಲ್ಲಿ ಸಾಗುತ್ತಿರುವ ಸಾಮಾನ್ಯ ಸೈನಿಕರನ್ನು ಎಂದೂ ತಮ್ಮೊಂದಿಗೆ ಕರೆದೊಯುವುದಿಲ್ಲೆಂಬ ದೂರನ್ನು ಒರೆಗೆ ಹಚ್ಚುವುದು ಅವರ ಉದ್ದೇಶವಾಗಿತ್ತು. ದೂರು ನಿಜವೆಂದು ಸ್ವಾನುಭವದಿಂದ ಸಿದ್ಧವಾಯಿತು. ಅವರು ಕೂಡಲೇ ಕ್ರಮ ಕೈಕೊಂಡರು. ಅಂದಿನಿಂದ ಅಧಿಕಾರಿಗಳು ಸಾಮಾನ್ಯ ಸೈನಿಕರಿಗೆ ನೆರವಾಗುವ ಪಾಠ ಕಲಿತರು.

ಇಂಥ ಕಾರ್ಯಗಳು ಝುಕೋವರಿಗೆ ಸೈನಿಕರ ಪ್ರೀತಿವಿಶ್ವಾಸಗಳನ್ನು ಗಳಿಸಿಕೊಟ್ಟಿವೆ. ಆದರೆ ಅದೇ ಅವರಿಗೆ ಕಷ್ಟವನ್ನೂ ತಾರದಿರಲಿಲ್ಲ. ಸರ್ವಾಧಿಕಾರಿಯ ರಾಜ್ಯದಲ್ಲಿ ಸರ್ವಾಧಿಕಾರಿ

ಹೊರತು ಮತ್ತಾರಿಗೂ ಜನಪ್ರಿಯತೆ ಪಥ್ಯವಲ್ಲ. ಈ ಮನುಷ್ಯನನ್ನು ತೀರ ಬೆಳೆಯಗೊಡಬಾರದೆಂದು ಸ್ಟಾಲಿನ್ನರು ಮನಸಿನಲ್ಲೇ ನಿಶ್ಚಯ ಮಾಡಿಕೊಂಡರು.

ಯುದ್ಧ ಮುಗಿಯುವವರೆಗೆ ಅವರು ಕಾಯಲೇಬೇಕಾಯಿತು. ಸಂಕಟದಿಂದ ಪಾರಾದಮೇಲೆ ಸ್ಟಾಲಿನ್ನರು ಝುಕೋವರ ಮೇಲೆ ವಕ್ರದೃಷ್ಟಿ ಬೀರಿದರು. ಒಮ್ಮೆ ಪಕ್ಷದ ಸಭೆಯಲ್ಲಿ ಅವರನ್ನು ಕರೆದು, "ನೀನೇ ಯುದ್ಧ ಗೆದ್ದೆನೆಂದು ತಿಳಿದುಕೊಂಡಿದ್ದೀಯಾ? ಯುದ್ಧವನ್ನು ಗೆದ್ದದ್ದು ನೀನಲ್ಲ, ನಿನ್ನ ಸೈನ್ಯವಲ್ಲ; ಕಮ್ಯುನಿಸ್ಟ್ ಪಕ್ಷ ಮತ್ತು ರಶಿಯಾದ ತಂದೆ ಸ್ಟಾಲಿನ್!" ಎಂದು ಕಾಮ್ರೇಡರು ಝುಕೋವರನ್ನು ಅವಮಾನಿಸಿದರಂತೆ.

ಇದು ಸತ್ಯವಿರಲಿ ಸುಳ್ಳಿರಲಿ, ಸ್ಟಾಲಿನ್ನರು ಝುಕೋವರಿಗೆ ಒಮ್ಮೆಲೇ ಹಿಂಬಡತಿ ಮಾಡಿದ್ದು ನಿಜ. ೧೯೪೬ರ ವರೆಗೆ ರಶಿಯದ ಮುಖ್ಯ ಸೇನಾನಿಯಾಗಿದ್ದವರನ್ನು ಒಡೆಸಾ ಜಿಲ್ಲೆಯ ಮಿಲಿಟರಿ ಕಮಾಂಡೆಂಟರಾಗಿ ನೇಮಿಸಿದರು. ನಮ್ಮ ಜನರಲ್ ತಿಮ್ಮಯ್ಯನವರನ್ನು ಸಣ್ಣ ಮಿಲಿಟರಿ ಅಧಿಕಾರಕ್ಕೆ ನೇಮಿಸಿದರೆ ಹೇಗೋ ಹಾಗೆ. ಝುಕೋವರ ಮೇಲೆ ಸ್ಟಾಲಿನ್ನರ ಅವಕೃಪೆಯಾಗಲು ಅವರಿಗೂ ಅಮೇರಿಕದ ಐಸೆನ್‌ಹಾವರರಿಗೂ ಯುದ್ಧ ಕಾಲದಲ್ಲಿ ಜರ್ಮನಿಯಲ್ಲಿದ್ದಾಗ ಸ್ನೇಹವಾದದ್ದೊಂದು ಕಾರಣವಾಗಿತ್ತು. ಐಸೆನ್‌ಹಾವರರು ಝುಕೋವರನ್ನು "ಸ್ನೇಹಪ್ರಕೃತಿಯ ಸಜ್ಜನರು, ಸಹಕಾರದ ಇಚ್ಛೆಯುಳ್ಳವರು" ಎಂದು ಹೊಗಳಿದ್ದರು. ಅಂದ ಮೇಲೆ ಝುಕೋವರು ಅಪಾಯಕರ ಮನುಷ್ಯರಿರಬೇಕಲ್ಲವೆ!

ಸ್ಟಾಲಿನ್ನರು ಇನ್ನೂ ಕೆಲಕಾಲ ಬದುಕಿದ್ದರೆ ಝುಕೋವರಿಗೆ ಏನು ಗತಿಯಾಗುತ್ತಿತ್ತೋ ಹೇಳಬರುವುದಿಲ್ಲ. ಆದರೆ ಸ್ಟಾಲಿನ್ನರಿಗಿಂತ ಮುಂದೆ ದೈವ ಓಡಿತು. ಸ್ಟಾಲಿನ್ನರು ಸತ್ತರು. ಅವರ ಬಗಲ ಬಂಟರು ಒಬ್ಬರಿಗೊಬ್ಬರು ಹೆದರಿ ಸಾಯುತ್ತಿದ್ದರು. ಸೈನ್ಯದ ನೆರವಿಲ್ಲದೆ ಅಧಿಕಾರದಲ್ಲಿರುವುದು ಯಾರಿಗೂ ಶಕ್ಯವಿದ್ದಿಲ್ಲ. ಝುಕೋವರಿಗೆ ಹಿಂಬಡತಿಯಾಗಿದ್ದರೂ ಸೈನ್ಯದಲ್ಲಿ ಅವರ ಜನಪ್ರಿಯತೆ ಅಪರಿಮಿತವಾಗಿತ್ತು. ಕ್ರೆಮ್ಲಿನ್ನಿನ ಉತ್ತರಾಧಿಕಾರಿಗಳು ಝುಕೋವರನ್ನು ಮತ್ತೆ ಕರೆಸಿಕೊಳ್ಳಲೇಬೇಕಾಯಿತು.

ಈಗ ಝುಕೋವರು ರಶಿಯದ ೧೭ ಜನ ವರಿಷ್ಠರಲ್ಲಿ ಒಬ್ಬರು. ರಶಿಯದ ಜನರಿಗೆ ಅವರು ದೇಶನಾಯಕರಲ್ಲಿ ೧೨ ನೇ ಸ್ಥಾನದಲ್ಲಿರುವರು. ಆದರೆ ಮಾಸ್ಕೋದ ವಿದೇಶಿ ನಿರೀಕ್ಷಕರು ಝುಕೋವರನ್ನು ಇಂದಿನ ರಶಿಯದ ಏಳುಮಂದಿ ಪ್ರಭಾವ ಶಾಲಿ ವ್ಯಕ್ತಿಗಳಲ್ಲಿ ಪರಿಗಣಿಸುತ್ತಾರೆ.



ಯುರೋಪಿನಲ್ಲಿ ಮೊದಲನೇ ಮಹಾಯುದ್ಧ ಘೋರವಾಗಿ ನಡೆದಿತ್ತು. ಆ ಸಮಯದಲ್ಲಿ ನನಗೆ ಭೆಟ್ಟಿಯಾದ ಒಬ್ಬ ನರಭಕ್ಷಕ ಮುದುಕ ಕೇಳಿದ: "ಅಲ್ಲಾ, ಇಷ್ಟೆಲ್ಲ ಮನುಷ್ಯ ಮಾಂಸವನ್ನು ನೀವು ಯುರೋಪಿಯನ್ನರು ಹೇಗೆ ತಿಂದು ಜೀರ್ಣಿಸಿಕೊಳ್ಳುತ್ತೀರಿ?" ನಾನಂದೆ, ನಾವು ಬಿಳಿಯರು ನಮ್ಮ ಶತ್ರುಗಳನ್ನು ತಿನ್ನುವುದಿಲ್ಲ, ಎಂದು. ಅದನ್ನು ಕೇಳಿ ಅವನು ಜುಗುಪ್ಸೆ ಆಶ್ಚರ್ಯಗಳಿಂದ ನುಡಿದನ್ನು: "ಏನೂ ಪ್ರಯೋಜನವಿಲ್ಲದೆ ಮನುಷ್ಯರನ್ನು ಕೊಲ್ಲುವ ನೀವು ಎಂಥ ಬರ್ಬರ ಜನರಾಗಿರಬೇಕು!"

—ಬ್ರೊನಿಸ್ಲಾ ಮಾಲಿನೊವ್‌ಸ್ಕಿ

# ಈ ವಿಕ್ಷಿಪ್ತ ಪ್ರಪಂಚದಲ್ಲಿ

ನ್ಯೂಜರ್ಸಿಯ ಬ್ಲೂಮಫೀಲ್ಡಿನಲ್ಲಿ ನಾಯಿ ಕೆಮ್ಮು ಬಂದ ಮಕ್ಕಳು ಕುತ್ತಿಗೆಗೆ "ನಾಯಿ ಕೆಮ್ಮು ಬಂದಿದೆ'' ಎಂದು ಬರೆದ ಪಟ್ಟೆಯನ್ನು ಕಟ್ಟಿಕೊಳ್ಳಬೇಕೆಂದು ಕಾಯದೆಯಿದೆ.

ಡೆಟ್ರಾಯಿಟ್‌ದ ಕ್ಷೌರದಂಗಡಿಯೊಂದರಲ್ಲಿ "ನಾವು ಮೊದಲು ಮಾತಾಡಿದರೆ ನಿಮ್ಮ ಕೂದಲನ್ನು ಪುಕ್ಕಟೆಯಾಗಿ ಕತ್ತರಿಸುವೆವು'' ಎಂದು ಬರೆದು ಹಚ್ಚಲ್ಪಟ್ಟಿದೆ.

ವರ್ಮೊಂಟದ ಕಾಯದೆಯೊಂದು, ಆದಿತ್ಯವಾರ ಬೀದಿಯಲ್ಲಿ ಒಬ್ಬ ಸ್ತ್ರೀ ನಡೆದುಕೊಂಡು ಹೋಗುವದಾದರೆ ಅವಳ ಗಂಡ ಅವಳಿಗಿಂತ ಇಪ್ಪತ್ತು ಹೆಜ್ಜೆ ಹಿಂದೆ ಹೆಗಲಮೇಲೆ ಒಂದು ಬಂದೂಕು ಹೊತ್ತುಕೊಂಡು ನಡೆಯಬೇಕು ಎಂದು ಹೇಳುತ್ತದೆ.

ಎಂಜಲೊ ಕೊಸಾನರೊ ಪ್ರವಾಸಪ್ರಿಯ. ಆದರೆ ಆತ ಪ್ರವಾಸ ಮಾಡುವ ರೀತಿಯೇ ಬೇರೆ. ತನ್ನೂರಾದ ಕೆಟನಿಯದಿಂದ ಆತ ೫೬೦ ಮೈಲುಗಳಷ್ಟು ದೂರ ಮರಗಾಲುಗಳ ಮೇಲೆ ನಡೆಯುತ್ತ ಇತ್ತೀಚೆಗೆ ರೋಮ ನಗರಕ್ಕೆ ಬಂದಿದ್ದನು.

ಕೆಂಟುಕಿಯಲ್ಲಿ ವರ್ಷಕ್ಕೆ ಎರಡು ಸಲವಾದರೂ ಸ್ನಾನ ಮಾಡಬೇಕು ಎಂಬ ಕಾಯದೆಯೊಂದಿದೆ.

ವರ್ಮೊಂಟದ ಹೆರಿಗೆ ಆಸ್ಪತ್ರೆಯಲ್ಲಿ "ಥ್ಯಾಂಕ ಯು. ಮುಂದಿನ ವರ್ಷ ಮತ್ತೆ ಬನ್ನಿ'' ಎಂದು ಬರೆದ ಹಲಗೆಯೊಂದು ಇದೆ.

ಚಿಕ್ಯಾಗೋದಲ್ಲಿ ಬೆಂಕಿ ಹತ್ತಿರುವ ಮನೆಯಲ್ಲಿ ಕುಳಿತು ಊಟ ಮಾಡುವದು ಕಾಯದೆಗೆ ವಿರುದ್ಧವಾಗುವದು.

ನ್ಯೂಯಾರ್ಕ ನಗರದ ಓರ್ವ ಸ್ತ್ರೀಗೆ ಬೆಕ್ಕುಗಳ ಮೀಸೆಗಳನ್ನು ಸಂಗ್ರಹಿಸುವ ಚಟವಿದೆ. ಅವಳ ಸಂಗ್ರಹದಲ್ಲಿ ೫೦೦ ಬೆಕ್ಕಿನ ಮೀಸೆಗಳಿವೆ.

ಡರ್ಬಾನದಲ್ಲಿ ಹಗಲಿಡೀ ಮೀನ ಹಿಡಿಯುವದರಲ್ಲಿ ವೇಳೆ ಕಳೆದರೂ ಎರಡು ಚಿಕ್ಕ ಮೀನಗಳನ್ನು ಹಿಡಿಯಲು ಸಮರ್ಥನಾಗಿದ್ದ ಸ್ಯಾಮಿ ಪಭೂರ್ ಎಂಬಾತ ಬಹಳ ಬೇಸರದಿಂದ ಮನೆಗೆ ಹೋದ. ಆದರೆ ಮುಂದೈದು ನಿಮಿಷಗಳಲ್ಲಿ ಅವನ ಹೆಂಡತಿ ಉತ್ಸಾಹದಿಂದ ಅವನನ್ನು ಕೂಗಿದಳು. ಆ ಎರಡು ಮೀನಗಳಲ್ಲಿ ಒಂದರ ಹೊಟ್ಟೆಯಲ್ಲಿ ಅವಳಿಗೆ ಬಂಗಾರದ ಪುಟ್ಟ ಗಡಿಯಾರವೊಂದು ಸಿಕ್ಕಿತ್ತು.

ನಾರ್ತ ಡಕೋಟಾದಲ್ಲಿ ಬೂಟು ಚಪ್ಪಲು ಮುಂತಾದವುಗಳನ್ನು ಹಾಕಿಕೊಂಡು ಮಲಗುವದು ಕಾಯದೆಗೆ ವಿರುದ್ಧವಾಗುವದು.

ಫ್ಲೋರಿಡಾದಲ್ಲಿ ಯಾರೂ ವಾಸಿಸದಿರುವ ಮನೆಯೊಳಕ್ಕೆ ಗುಂಡು ಹಾರಿಸುವದು ಕಾಯದೆಗೆ ವಿರುದ್ಧವಾಗುವದು.

ಈಸ್ಟ ರೊಚೆಸ್ಟರದ ಯಾವುದೇ ಉಪವನದಲ್ಲಿ ಭವಿಷ್ಯ ಹೇಳುವದು ಅಪರಾಧವಾಗುವದು.

ಸುಪರ್‌ವ್ಯಾಜರ ಮಂಡಳದ ಅಪ್ಪಣೆ ಪಡೆಯದೆ ಕುಡಿದು ಮತ್ತನಾಗುವದು ಕ್ಯಾಲಿಫೋರ್ನಿಯದ ಸಾಸಾಲಿಟೊದಲ್ಲಿ ಅಕ್ರಮವೆನಿಸುತ್ತದೆ.



# ಮರಗಳು ದೇವರಾದದ್ದೆಂತು ?

ಪ್ರೊ. ಎಂ. ಎಸ್. ಎಸ್. ರಾವ್

ಅರಳಿ, ಅತ್ತಿ, ಆಲ, ಬಸರಿ, ಗೋಣಿ, ಅಂಜೂರ ಈ ಮರಗಳನ್ನು ಯಾರು ನೋಡಿಲ್ಲ ? ಯಾರು ಕೇಳಿಲ್ಲ? ಆದರೆ ಈ ಮರಗಳ ಹಿಂದೆ ಬರುವ ಅತಿ ಸ್ವಾರಸ್ಯವಾದ ಮತ್ತು ಕುತೂಹಲವನ್ನು ಕೆರಳಿಸುವಂತಹ ಕಥೆಗಳನ್ನು ಅನೇಕರು ಕೇಳಿರಲಿಕ್ಕಿಲ್ಲ.

ಇತಿಹಾಸದ ಪ್ರಾರಂಭವಾದಂದಿನಿಂದ ಅರಳಿ ಅಥವಾ ಅಶ್ವತ್ಥ ಮರವು ಅನೇಕ ಶತಮಾನಗಳು ಉಳಿದಿದ್ದುದನ್ನು ನೋಡಿರುತ್ತದೆ. ಅದರ ಬೇರುಗಳು ಪೌರಸ್ತ್ಯ ಮತ್ತು ಪಾಶ್ಚಿಮಾತ್ಯ ದೇಶಗಳಲ್ಲಿ ಅನೇಕ ಗುಡಿ ಮತ್ತು ಕಟ್ಟಡಗಳ ಬಿರುಕುಗಳಲ್ಲಿ ಬೆಳೆದು ಕ್ರಮೇಣ ಆ ಗುಡಿ ಗೋಪುರಗಳನ್ನೂ ಕಟ್ಟಡಗಳನ್ನೂ ಹಾಳುಮಾಡಿವೆ.

೪,೦೦೦ ವರ್ಷಗಳಿಗಿಂತಲೂ ಹಿಂದಿನ ಹರಪ್ಪಾ ಮತ್ತು ಮೊಹೆಂಜೋದಾರೋ ಸಂಸ್ಕೃತಿಯ ಪ್ರದೇಶಗಳಲ್ಲಿ ದೊರೆತಿರುವ ಮುದ್ರೆಗಳಲ್ಲಿ ಅಶ್ವತ್ಥ ವೃಕ್ಷದ ಚಿತ್ರವೇ ಕಂಡುಬರುತ್ತದೆ. ಸಿಂಹಳ ದೇಶದಲ್ಲಿ "ಅನುರಾಧಾಪುರ" ಎಂಬಲ್ಲಿನ ಪುರಾತನ ಕಾಲದ ಭಗ್ನಾವಶೇಷಗಳಲ್ಲಿ ಪ್ರಾಯಶಃ ಜಗತ್ತಿನಲ್ಲೇ ಅತ್ಯಂತ ಹಳೆಯದಾದ ಅಶ್ವತ್ಥ ಮರವೊಂದಿದೆ. ಅದು ಸುಮಾರು ಕ್ರಿ. ಪೂ. ೨೮೮ ರ ಕಾಲದ್ದು ಇರಬಹುದು ಎಂದು ಊಹಿಸಲ್ಪಟ್ಟಿದೆ. ಅಶೋಕನ ಕಾಲದಲ್ಲಿ ಭಾರತದಿಂದ ಸಿಂಹಳಕ್ಕೆ ಒಯ್ಯಲ್ಪಟ್ಟ ಬೋಧಿವೃಕ್ಷದ ಸಸಿಯೇ ಅದೆಂದು ಪ್ರತೀತಿ ಇದೆ. ಇವತ್ತಿಗೂ ಆ ಮರವನ್ನು ಬಣ್ಣಗಳಿಂದಲೂ ರಾತ್ರಿಯ ವೇಳೆ ದೀಪಗಳಿಂದಲೂ ಅಲಂಕರಿಸುತ್ತಾರೆ.

ಅಷ್ಟೇ ಏಕೆ? ಅತಿ ಪುರಾತನವಾದ ಭಗವದ್ಗೀತೆ, ಬೈಬಲ್ ಮತ್ತು ಕೊರಾನ್‌ಗಳಂತಹ ಧರ್ಮಗ್ರಂಥಗಳಲ್ಲೂ ಅಶ್ವತ್ಥಕ್ಕೆ ಸಂಬಂಧಪಟ್ಟ ಮಹತ್ವದ ವಿಷಯಗಳಿವೆ. ಹಿಂದೂಗಳಿಗೆ ಅದು ಮರಗಳಲ್ಲೆಲ್ಲಾ ಅತ್ಯಂತ ಪವಿತ್ರವಾದ ಮರ. ಸಾವಿರಾರು ವರ್ಷಗಳ ಹಿಂದೆಯೇ ಋಗ್ವೇದವು ಅಶ್ವತ್ಥದ ಪವಿತ್ರತೆಯನ್ನು ಕೊಂಡಾಡಿದೆ. ಅಥರ್ವ ವೇದದಲ್ಲಿಯೂ ಅದಕ್ಕೆ ಸಂಬಂಧಪಟ್ಟ ವಿಷಯಗಳಿವೆ.

ಭಾರತೀಯ ಪುರಾಣವೊಂದರಲ್ಲಿ ಅಶ್ವತ್ಥ ಮರಕ್ಕೆ ಸಂಬಂಧಪಟ್ಟ ಒಂದು ಕಥೆ ಹೀಗಿದೆ:

ತ್ರಿಮೂರ್ತಿಗಳಲ್ಲಿ ಒಬ್ಬನಾದ ಮಹೇಶ್ವರನು ಮತ್ತು ಅವನ ಸಂಗಾತಿಯಾದ ಪಾರ್ವತಿಯು ಕೈಲಾಸ ಪರ್ವತದಲ್ಲಿ ವಾಸವಾಗಿದ್ದರು. ಹೀಗಿರುವಾಗ ಇವರಿಬ್ಬರಿಗೂ ಮಗ ಜನಿಸಿದರೆ, ಅವನು ಬ್ರಹ್ಮ, ವಿಷ್ಣು, ಮಹೇಶ್ವರ ಈ ಮೂರು ಜನರನ್ನೂ ಮೀರಿಸಬಹುದೆಂಬ ಭೀತಿ ದೇವತೆಗಳಿಗೆ ಉಂಟಾಯಿತು. ಅದಕೆ ಶಿವ ಮತ್ತು ಪಾರ್ವತಿ

---

ಪ್ರೊ. ರಾವ್ ಅವರು ಬಾಗಲಕೋಟೆಯ ಬಸವೇಶ್ವರ ಕಾಲೇಜಿನಲ್ಲಿ ಸಸ್ಯಶಾಸ್ತ್ರದ ಪ್ರಾಧ್ಯಾಪಕರು.

ಇವರ ಸಂಬಂಧವನ್ನೇ ತಪ್ಪಿಸಬೇಕೆಂಬ ಉದ್ದೇಶದಿಂದ ದೇವತೆಗಳು ಬ್ರಹ್ಮ ವಿಷ್ಣು ಇವರಿಬ್ಬರನ್ನೂ ಶಿವನಿದ್ದೆಡೆಗೆ ಕಳಿಸಿಕೊಟ್ಟರು.

ಮಹೇಶ್ವರನು ಪಾರ್ವತಿಯ ಸಹವಾಸದಲ್ಲಿದ್ದಾಗ ಬ್ರಹ್ಮ, ವಿಷ್ಣು ಇವರಿಬ್ಬರೂ ನೆಟ್ಟಗೆ ಪ್ರವೇಶಮಾಡಿ, ತಮ್ಮ ಆಗಮನದ ಸೂಚನಾರ್ಥವಾಗಿ ಕಹಳೆಗಳನ್ನು ಊದಿದರು. ಮಹೇಶ್ವರನು ಇವರನ್ನು ನೋಡಿ ನಾಚಿಕೆಯಿಂದ ತಕ್ಷಣ ತಲೆ ತಗ್ಗಿಸಿದನು. ಪಾರ್ವತಿಗೆ ಮಾತ್ರ ತನ್ನ ಸುಖಕ್ಕೆ ಅಡ್ಡಿ ಬಂದದ್ದರಿಂದ ಬಹು ಸಿಟ್ಟು ಬಂತು. ಅವಳು ಬ್ರಹ್ಮ, ವಿಷ್ಣು ಮತ್ತು ಮಹೇಶ್ವರ ಈ ಮೂವರನ್ನೂ ಭೂಲೋಕಕ್ಕೆ ಹೋಗಿ ಮರಗಳಾಗಿ ಹುಟ್ಟುವಂತೆ ಶಪಿಸಿದಳು.

ಮಹೇಶ್ವರನು ಶಾಪ ಪರಿಹಾರಕ್ಕಾಗಿ ಎಲ್ಲರಿಗೂ ಪಾರ್ವತಿಯ ಹತ್ತಿರ ಬಂದು ಕ್ಷಮೆ ಬೇಡಿಕೊಳ್ಳಬೇಕೆಂದು ಸೂಚಿಸಿದನು. ಆದರೆ ಆ ಮೂವರಲ್ಲಿ ಯಾರಿಗೂ ಸಿಟ್ಟಿಗೆದ್ದಿದ್ದ ಪಾರ್ವತಿಯ ಹತ್ತಿರ ಹೋಗುವುದಾಗಲಿಲ್ಲ. ಹೀಗಾಗಿ ಬ್ರಹ್ಮನು "ಪಲಾಶ" ಎಂದರೆ ಮುತ್ತುಗದ ಮರವಾಗಿಯೂ ಮಹೇಶ್ವರನು ಆಲದ ಮರವಾಗಿಯೂ ವಿಷ್ಣು ಅಶ್ವತ್ಥದ ಮರವಾಗಿಯೂ ಭೂಲೋಕದಲ್ಲಿ ಹುಟ್ಟಿದರು. ಈ ಸುದ್ದಿಯನ್ನು ಕೇಳಿದ ದೇವತೆಗಳೆಲ್ಲರೂ ಪಾರ್ವತಿಯ ಕಡೆಗೆ ಹೋಗಿ ಮೊರೆಯಿಟ್ಟರು. ಅನಂತರ ಪಾರ್ವತಿಯು ಪ್ರಸನ್ನಳಾಗಿ ವಿಷ್ಣು, ಬ್ರಹ್ಮ ಮತ್ತು ಮಹೇಶ್ವರರೇ ವೃಕ್ಷಗಳಾಗಿರಬೇಕಿಲ್ಲ; ಅವರು ಯಾವತ್ತೂ ಆ ಮರಗಳಲ್ಲಿ ವಾಸಿಸಿದರೆ ಸಾಕೆಂದು ತನ್ನ ಶಾಪಕ್ಕೆ ಒಂದು ಪರಿಹಾರ ಹೇಳಿದಳು; ಮತ್ತು ಯಾರು ಆ ಮರಗಳನ್ನು ಅಲ್ಲಗಳೆಯುತ್ತಾರೆಯೋ, ಇಲ್ಲವೇ ಆ ಮರಗಳ ಕೊಂಬೆ, ಎಲೆ, ತೊಗಟೆ ಮುಂತಾದುವನ್ನು ಹರಿಯುತ್ತಾರೋ ಅಂಥವರಿಗೆ ನರಕ ಪ್ರಾಪ್ತಿಯೇ ಶಿಕ್ಷೆ. ಮೇಲಾಗಿ ಅಂತಹವರು ಚಂಡಾಲನ ಮನೆಯಲ್ಲಿ ಮತ್ತೆ ಜನಿಸತಕ್ಕದ್ದು ಎಂದು ಘೋಷಿಸಿದಳು. ಈ ನಂಬಿಕೆಯಿಂದಲೇ ಈಗಲೂ ಜನರು ಅರಳಿ ಮತ್ತು ಆಲದ ಮರಗಳನ್ನು ಅವು ಎಲ್ಲಿದ್ದರೂ ಅತ್ಯಂತ ಭಕ್ತಿಪುರಸ್ಸರವಾಗಿ ಪೂಜಿಸುತ್ತಾರೆ. ಅವುಗಳನ್ನು ಕಡಿಯಲು ಹಿಂಜರಿಯುತ್ತಾರೆ.

ಅನೇಕ ಕಡೆ ಇಂದಿಗೂ ಅಶ್ವತ್ಥವನ್ನು ಒಂದು 'ಗಂಡು' ಮರವೆಂತಲೂ, ಬೇವಿನ ಮರವನ್ನು ಒಂದು 'ಹೆಣ್ಣು' ಮರವೆಂತಲೂ ಪರಿಗಣಿಸಿ ಅವೆರಡನ್ನು ಜತೆಯಲ್ಲಿಯೇ ಬೆಳಸಿ ಅವುಗಳಿಗೆ ಶಾಸ್ತ್ರೋಕ್ತವಾಗಿ ಮನುಷ್ಯರಂತೆಯೇ ಲಗ್ನ ಮಾಡುತ್ತಾರೆ.

ಗೌತಮಬುದ್ಧನಾದರೂ ಅಶ್ವತ್ಥ ವೃಕ್ಷದ ಕೆಳಗೆ ಕೂತು ಧ್ಯಾನ ಮಾಡುತ್ತಿದ್ದಾಗಲೇ ಅವನ ಮನಸ್ಸಿನಲ್ಲಿ ಏನೋ ಒಂದು ಮಿಂಚು ಹೊಳೆದಂತಾಗಿ ಪ್ರಪಂಚದ ಆಗುಹೋಗುಗಳ ಬಗ್ಗೆ ಜ್ಞಾನಬೋಧವಾಯಿತು. ಅಂದಿನಿಂದ ಅಶ್ವತ್ಥವೃಕ್ಷಕ್ಕೆ 'ಬೋಧಿವೃಕ್ಷ' ಎಂದು ಹೆಸರಾಯಿತು. ಈ ಮರವು 'ಬುದ್ಧಶಾಕ್ಯಮುನಿಯ ಬೋಧಿವೃಕ್ಷ' ಎಂಬ ಹೆಸರಿನಿಂದ ಬೌದ್ಧ ಪುರಾಣಗಳಲ್ಲಿ, ಮಂದಿರಗಳಲ್ಲಿ ಮತ್ತು ಸ್ತೂಪಗಳಲ್ಲಿ ವರ್ಣಿತವಾಗಿದೆ, ಚಿತ್ರಿಸಲ್ಪಟ್ಟಿದೆ.

ಅಶ್ವತ್ಥವೃಕ್ಷದ ಸಂಬಂಧದಲ್ಲಿ ಇನ್ನೂ ಕೆಲವು ನಂಬಿಕೆಗಳಿವೆ.

"ಮೂಲತೋ ಬ್ರಹ್ಮರೂಪಾಯ ।
ಮಧ್ಯತೋ ವಿಷ್ಣುರೂಪಿಣೇ ॥
ಅಗ್ರತಶ್ಶಿವರೂಪಾಯ ।
ವೃಕ್ಷರಾಜಾಯ ತೇ ನಮಃ ॥"

ಅಂದರೆ ಅಶ್ವತ್ಥ ಮರದ ಬುಡದಲ್ಲಿ ಬ್ರಹ್ಮನೂ ಮಧ್ಯದಲ್ಲಿ ವಿಷ್ಣುವೂ ತುದಿಯಲ್ಲಿ ಮಹೇಶ್ವರನೂ ಇರುವರೆಂದೂ ಈ ವೃಕ್ಷವು ತ್ರಿಮೂರ್ತಿಗಳ ಸ್ವರೂಪದ್ದೆಂದೂ ವೃಕ್ಷಗಳ ರಾಜನೆಂದೂ ಪುರಾಣಗಳಲ್ಲಿ ವರ್ಣಿಸಲ್ಪಟ್ಟಿದೆ.

ಮದುವೆ, ಮುಂಜಿ, ಮುಂತಾದ ಹಿಂದೂಗಳ ಅನೇಕ ಧಾರ್ಮಿಕವಿಧಿಗಳಲ್ಲಿ ಅಶ್ವತ್ಥದ ಕಡ್ಡಿಗಳನ್ನು ಆಯ್ದು ತಂದು ಉಪಯೋಗಿಸುವ ಪದ್ಧತಿ ಬ್ರಾಹ್ಮಣರಲ್ಲಿ ಅನಾದಿಕಾಲದಿಂದಲೂ ನಡೆದು ಬಂದಿದೆ. ಅಂತಹ ಒಣ ಕಡ್ಡಿಗಳಿಗೆ 'ಸಮಿತ್ತು' ಎನ್ನುತ್ತಾರೆ. ಅದನ್ನು ತುಪ್ಪದಲ್ಲಿ ಅದ್ದಿ ಮಂತ್ರ

ಪೂರ್ವಕವಾಗಿ ಅಗ್ನಿಗೆ ಆಹುತಿ ಕೊಡುತ್ತಾರೆ.

ಮೈಸೂರು ರಾಜ್ಯದಲ್ಲಿ ಗೌರಿಬಿದನೂರು ತಾಲೂಕಿನ ವಿದುರಾಶ್ವತ್ಥ ಎಂಬ ಸ್ಥಳದಲ್ಲಿ ಮಹಾಭಾರತದ ಕಾಲದ್ದೆಂದು ಹೇಳಲಾಗುವ ಪುರಾಣಪ್ರಸಿದ್ಧವಾದ ಒಂದು ದೊಡ್ಡ ಅಶ್ವತ್ಥ ವೃಕ್ಷ ಇದೆ. ಇದನ್ನು ವಿದುರನು ನೆಟ್ಟನೆಂದು ಅಲ್ಲಿಯ ಜನಗಳ ನಂಬಿಕೆ. ಬಹುದೂರದ ಸ್ಥಳಗಳಿಂದ ಜನರು ಬಂದು ವೃಕ್ಷವನ್ನು ಅತ್ಯಂತ ಶ್ರದ್ಧಾಭಕ್ತಿಯಿಂದ ಪೂಜಿಸುತ್ತಾರೆ.

ಅನೇಕ ಕಡೆ ಅಶ್ವತ್ಥ ವೃಕ್ಷದ ಕೆಳಗೆ ಕಲ್ಲುಗಳಲ್ಲಿ ನಾಗರ ಪ್ರತಿಮೆಯನ್ನು ಕೆತ್ತಿ ಶಾಸ್ತ್ರೋಕ್ತವಾಗಿ ಪೂಜಿಸಿ ನಾಗರ ಪ್ರತಿಷ್ಠಾಪನೆ ಮಾಡುತ್ತಾರೆ. ಇಂತಹ ಸಹಸ್ರಾರು ನಾಗರಕಲ್ಲುಗಳನ್ನು ವಿದುರಾಶ್ವತ್ಥದಲ್ಲಿಯೂ ನೋಡಬಹುದು. ಮಕ್ಕಳಿಲ್ಲದವರು ಮತ್ತು ಮಕ್ಕಳನ್ನು ಮೇಲಿಂದ ಮೇಲೆ ಕಳೆದುಕೊಂಡವರು ಇಂತಹ ಪೂಜೆಗಳನ್ನು ಕೈಕೊಳ್ಳುವರು. ಮಕ್ಕಳಿಲ್ಲದವರು ಅಶ್ವತ್ಥ ವೃಕ್ಷಕ್ಕೆ ಕೆಲವೊಂದು ವಿಧಿಪೂರ್ವಕವಾಗಿ ಪ್ರದಕ್ಷಿಣೆ ಹಾಕಿದರೆ ಮಕ್ಕಳಾಗುವವೆಂದೂ ಒಂದು ನಂಬಿಕೆ !

ಇನ್ನು ಆಲದ ಮರದ ವಿಚಾರ ಸ್ವಲ್ಪ ಕೇಳಿ:

ಪಶ್ಚಿಮ ಭಾರತದಲ್ಲಿ ಬಡೋಚಿಗೆ ಸಮೀಪದಲ್ಲೇ ನರ್ಮದಾ ನದಿಯಲ್ಲಿ ಒಂದು ದ್ವೀಪವಿದೆ. ಅಲ್ಲಿ ಒಂದು ಬಹು ಪುರಾತನವಾದ ಆಲದ ಮರವಿದೆ. ಅದಕ್ಕೆ "ಕಬೀರನ ಆಲದ ಮರ" ಎಂದು ಕರೆಯುತ್ತಾರೆ. ಆ ಸಂತ ಶಿರೋಮಣಿಯು ಹಲ್ಲು ಉಜ್ಜಲು ಬಳಸುತ್ತಿದ್ದ ಆಲದ ಮರದ ಕಡ್ಡಿಯೊಂದು ನೆಲದ ಮೇಲೆ ಬಿದ್ದು ಚಿಗುರಿ ಬೇರುಬಿಟ್ಟು ಒಂದು ದೊಡ್ಡ ಮರವಾಯಿತು ಎಂದು ಹೇಳುತ್ತಾರೆ. ಆ ಮರಕ್ಕೆ ೩೫೦ ದೊಡ್ಡ ದೊಡ್ಡ ಮತ್ತು ೩೦೦೦ ಕ್ಕೂ ಮಿಕ್ಕಿ ಸಣ್ಣ ಸಣ್ಣ ಕಂಬಗಳಂತಹ ಬೇರುಗಳಿವೆಯಂತೆ. ಆ ಮರವು ಸುಮಾರು ೨೦೦೦ ಅಡಿಗಳಷ್ಟು ಜಾಗವನ್ನು ಆಕ್ರಮಿಸಿದೆಯಂತೆ. ಒಮ್ಮೆ ಒಂದು ಸೈನ್ಯ ಚಲಿಸುತ್ತಿದ್ದಾಗ ೭೦೦೦ ಸೈನಿಕರು ಅದರ ಕೆಳಗೆ ತಂಗಿ ವಿಶ್ರಮಿಸಿದರಂತೆ.



ಪೂರ್ವ ಕಾಲದಲ್ಲಿ ಮುನಿಗಳು ಆಲದ ಮರದ ಹಾಲನ್ನು ತಲೆಯ ಕೂದಲಿಗೆ ಹಚ್ಚಿಕೊಂಡು ಜಟೆಯನ್ನು ಕಟ್ಟಿಕೊಳ್ಳುತ್ತಿದ್ದರಂತೆ. ಇದರಿಂದ ಜಟೆ ಎಂದೆಂದಿಗೂ ಬಿಚ್ಚುತ್ತಿರಲಿಲ್ಲ.

ಆಲದ ಮರಗಳಲ್ಲಿ ಕೊಂಬೆಗಳು ಬಹಳ ಅಗಲವಾಗಿ ಬೆಳೆಯುತ್ತವೆ. ಈ ಕೊಂಬೆಗಳಿಂದ ನೆಲಕ್ಕೆ ನೇರವಾಗಿ ಕೆಲವು 'ಬೀಳಲು' ಗಳೆಂಬ ಬೇರುಗಳು ಇಳಿದು ಅವು ನೆಲದ ತನಕ ಮುಟ್ಟಿ ಅನಂತರ ಭೂಮಿಯೊಳಗೆ ಹೋಗುತ್ತವೆ. ಇಂತಹ ಬೇರುಗಳು ದಪ್ಪ ದಪ್ಪ ಕಂಬಗಳಂತೆ ಮರದ ಟೊಂಗೆಗಳನ್ನು ಎತ್ತಿ ಹಿಡಿಯುತ್ತವೆ.

ಕಲ್ಕತ್ತಾ ನಗರದ ಒಂದು ಉದ್ಯಾನವನದಲ್ಲಿ ಅತಿ ದೊಡ್ಡ ಆಲದ ಮರವೊಂದು ಇದೆ. ಆ ಮರಕ್ಕೆ ೮೫೧ ಬೀಳಲು ಬೇರುಗಳಿವೆ. ಅದರ ವಯಸ್ಸು ೧೮೬ ವರ್ಷಗಳೆಂದು ನಿರ್ಧರಿಸಲ್ಪಟ್ಟಿದೆ. ಮರದ ಮೇಲ್ಭಾಗದ ಸುತ್ತಳತೆ ೧೮೦೦ ಅಡಿಗಳಿವೆಯಂತೆ. ಮದ್ರಾಸಿನ ಅಡೆಯಾರಿನಲ್ಲಿ ಇಂಥದೇ ಅತಿ ವಿಸ್ತಾರವಾದ ಇನ್ನೊಂದು ಆಲದ ಮರವುಂಟು.

ಹಿಂದಿನ ಕಾಲದಲ್ಲಿ ಕೆಲವು ಋಷಿಗಳು ಕಠೋರವಾದ ತಪಸ್ಸನ್ನು ಮಾಡುವಾಗ, ಆಲದ ಮರದ ಬೀಳಲುಗಳನ್ನು ಕೊರಳಿಗೆ ಸುತ್ತಿಕೊಂಡು, ತಮ್ಮ ದೇಹವನ್ನು ನೆಲದಮೇಲಕ್ಕೆ ತೂಗಾಡುವಂತೆ ಮಾಡಿಕೊಳ್ಳುತ್ತಿದ್ದರು ಎಂದು



ಕೇಳುತ್ತೇವೆ. ಅವರು ಇಂದ್ರಿಯ ನಿಗ್ರಹ ಮಾಡಲು ಇದೊಂದು ಸಾಧನವೆಂದು ತಿಳಿದಿದ್ದರು. ಸೂರ್ಯಶತಕದ ಕರ್ತನಾದ ಮಯೂರ ಕವಿ ಕುಷ್ಠರೋಗದಿಂದ ಬಳಲಿದಾಗ ಹೀಗೆ ಜೋಂಡುತ್ತ ತನ್ನ ಸೂರ್ಯಶತಕವನ್ನು ರಚಿಸಿ ಸೂರ್ಯನನ್ನು ಸಂತೋಷಪಡಿಸಿ ರೋಗಮುಕ್ತನಾದನಂತೆ ಆಲದ ಮರವೇ ಒಂದು ಭವ್ಯ ದೇವ ಮಂದಿರವೆಂತಲೂ ತೂಗಾಡುತ್ತಿದ್ದ ತಮ್ಮ ದೇಹವು ಒಂದು ನಂದಾದೀಪ ಎಂತಲೂ ಅವರ ಕಲ್ಪನೆ ಇದ್ದ ಹಾಗೆ ಕಾಣುತ್ತದೆ. ದಕ್ಷಿಣ ಭಾರತದಲ್ಲಿ ಇವತ್ತಿಗೂ ಕೆಲವು ನಿಷ್ಠಾವಂತ ವೈಷ್ಣವ ಬ್ರಾಹ್ಮಣರು ಆಲದ ಮರದ ಎಲೆಯಲ್ಲಿ ಊಟ ಮಾಡುವುದಿಲ್ಲ ಏಕೆಂದರೆ ಆ ಎಲೆಯಲ್ಲಿ ಶ್ರೀಕೃಷ್ಣನು ಮಲಗಿರುವನೆಂದು ಅವರ ಧಾರ್ಮಿಕ ಕಲ್ಪನೆ.

ಪುರಾಣಗಳಲ್ಲಿ ಆಲದ ಮರಕ್ಕೆ ಸಂಬಂಧಿಸಿದ ವಿಷಯಗಳೂ ನಂಬಿಕೆಗಳೂ ಕಂಡು ಬರುತ್ತವೆ.

ಸತ್ಯವಾನನಿಗೆ ಆಲದ ಮರದ ಕೆಳಗೇ ಹೋದ ಜೀವ ಮತ್ತೆ ಬಂದುದರಿಂದ ಸಾವಿತ್ರಿಯು ಅದನ್ನು ವಿಶೇಷವಾಗಿ ಪೂಜಿಸುತ್ತಿದ್ದಳಂತೆ. ಅಂದಿನಿಂದ ಇಂದಿನವರೆಗೂ ನಮ್ಮ ದೇಶದಲ್ಲಿ ಸ್ತ್ರೀಯರು ತಮ್ಮತಮ್ಮ ಪತಿಗಳಿಗೆ ದೀರ್ಘಾಯುಷ್ಯವುಂಟಾಗಲೆಂದು ಆಲದ ಮರವನ್ನು ಪೂಜಿಸುವ ವಾಡಿಕೆಯಿದೆ. ಸಾಂಪ್ರದಾಯಕ ಮತ್ತು ಧಾರ್ಮಿಕ ರೀತಿಯಲ್ಲಿ ಮೇ ಮತ್ತು ಜೂನ್ ತಿಂಗಳಲ್ಲಿ ಕೆಲವು ದಿನಗಳ ವರೆಗೆ ಸ್ತ್ರೀಯರು ಉಪವಾಸ ಮಾಡಿ ಆಲದ ಮರಕ್ಕೆ ಪ್ರದಕ್ಷಿಣೆ ಹಾಕುತ್ತಾರೆ; ಮತ್ತು ದುಡ್ಡು ತೆಂಗಿನ ಕಾಯಿ, ಗೆಜ್ಜೆವಸ್ತ್ರ, ಹಣ್ಣು, ಅಡಿಕೆ, ಎಲೆ, ಬಾಳೆಹಣ್ಣು ಇವುಗಳನ್ನು ಮುಂದೆ ಇಟ್ಟು ದೀಪ ಹಚ್ಚಿ ಕೈಮುಗಿಯುತ್ತಾರೆ. ಪ್ರದಕ್ಷಿಣೆ ಹಾಕುತ್ತಾರೆ. ತಮ್ಮ ಮನೋಭೀಷ್ಟಗಳು ಈಡೇರಲಿ ಎಂದು ಪ್ರಾರ್ಥಿಸುತ್ತಾರೆ. ವಟ ಸಾವಿತ್ರಿ ವ್ರತವೆಂದು ಇದು ಪ್ರಸಿದ್ಧವಾಗಿದೆ.

ಮುತ್ತುಗದ ಮರವಾದರೂ ಅಷ್ಟೇ ಆಶ್ಚರ್ಯಕರವಾಗಿರುತ್ತದೆ.

ವಿಶ್ವಾಮಿತ್ರನು ವಸಿಷ್ಠಮಹರ್ಷಿಗಳ ಜೊತೆಯಲ್ಲಿ ಕದನವಾಡಿದ ಒಂದು ಪ್ರಸಂಗದಲ್ಲಿ ವಸಿಷ್ಠಮಹರ್ಷಿಗಳು, ಮುತ್ತುಗದ ಮರದ ಟೊಂಗೆಯನ್ನು ಬ್ರಹ್ಮದಂಡ ಎಂದು ಕರೆದು ಅದನ್ನು ಅಡ್ಡ ಹಿಡಿದರಂತೆ. ಆಗ ವಿಶ್ವಾಮಿತ್ರನು ಬಿಟ್ಟ ಮಹಾಸ್ತ್ರಗಳೆಲ್ಲ ವ್ಯರ್ಥವಾಗಿ ವಿಫಲವಾದವು. ಕಡೆಗೆ ವಿಶ್ವಾಮಿತ್ರನು ತನ್ನ ಬ್ರಹ್ಮಾಸ್ತ್ರವನ್ನೂ ಬಿಟ್ಟನಂತೆ. ಆದರೆ ಆ ಮುತ್ತುಗದಮರದ ಟೊಂಗೆ ಅರ್ಥಾತ್ 'ಬ್ರಹ್ಮದಂಡವು' ಬ್ರಹ್ಮಾಸ್ತ್ರವನ್ನೂ ನುಂಗಿಬಿಟ್ಟಿತು !

ಈ ಒಂದು ನಂಬಿಕೆಯಿಂದ 'ಉಪನಯನ ಕಾಲದಲ್ಲಿ ವಟುಗಳಿಗೆ ಮುತ್ತುಗದ ಮರದ ಟೊಂಗೆಯನ್ನು ಬ್ರಹ್ಮದಂಡವೆಂದು ವಿಧಿವತ್ತಾಗಿ ಕೊಡುವುದುಂಟು. ವಸಿಷ್ಠ ಮಹರ್ಷಿಗಳಿಗೆ ಇದ್ದಂತಹ ಬ್ರಹ್ಮತೇಜಸ್ಸು ಮತ್ತು ಬ್ರಹ್ಮಬಲ ವಟುಗಳಿಗೆ ಉಂಟಾಗಲೆಂದು ಗುರುಗಳು ಉಪದೇಶಮಾಡುವ ಪದ್ಧತಿ ಇಂದಿಗೂ ಇದೆ.

ದೇಶ ದೇಶಕ್ಕೊಂದು ಇತಿಹಾಸವಿದ್ದಂತೆ ವೃಕ್ಷ ವೃಕ್ಷಕ್ಕೂ ಇತಿಹಾಸವಿದೆ. ತಪ್ಪೇನು ?

ಭಾರ ಅರ್ಧ ತೊಲೆಯಾದರೂ
ಅದ್ಭುತ ಇಂದ್ರಿಯ

# ಕಣ್ಣು





ತೂಕಕ್ಕೆ ತೂಕ ಲೆಕ್ಕ ಮಾಡಿದರೆ ನಮ್ಮ ಕಣ್ಣು ಪ್ರಪಂಚದಲ್ಲೇ ಅತಿ ಸೂಕ್ಷ್ಮವೂ ಜಟಿಲವೂ ಆದ ಯಂತ್ರವೆಂದು ಹೇಳಬೇಕು. ತೂಗಿದರೆ ಮನುಷ್ಯನ ಕಣ್ಣು ಏಳು ಗ್ರಾಂ—ಅಂದರೆ ಸುಮಾರು ಕಾಲು ಔಂಸ್, ಅರ್ಥಾತ್ ಅರ್ಧ ತೊಲೆಗಿಂತ ಸ್ವಲ್ಪ ಜಾಸ್ತಿ-ಆಗಬಹುದು. ಆದರೆ ನಮ್ಮ ಪ್ರಪಂಚಾನುಭವಗಳಲ್ಲಿ ನೂರಕ್ಕೆ ತೊಂಭತ್ತು ಭಾಗ ಈ ಹಗುರು ಇಂದ್ರಿಯದ ಮೂಲಕವೇ ಆಗುತ್ತದೆ. ಒಬ್ಬ ಲೇಖಕ ಹೇಳಿದ ಹಾಗೆ "ನೋಟವೇ ನಾವು."

ಕಣ್ಣುಗಳ ಅದ್ಭುತವನ್ನು ಅರಿಯಲು ಕೆಲವೇ ನಿದರ್ಶನಗಳು ಸಾಕು. ರಾತ್ರಿ ನೀವು ತಾರೆಗಳನ್ನು ನೋಡುತ್ತೀರಲ್ಲ, ಅವುಗಳಲ್ಲಿ ಕೆಲವು [illegible] ಕೋಟಿ ಮೈಲು ದೂರದಲ್ಲಿವೆ. ಆದರೂ ನಿಮ್ಮ ಕಣ್ಣುಗಳು ಅವನ್ನು ನೋಡಬಲ್ಲವು. ಕತ್ತಲಲ್ಲಿ ಕಣ್ಣುಗಳ ಶಕ್ತಿ ಒಂದು ಲಕ್ಷ ಪಟ್ಟು ಹೆಚ್ಚಾಗುತ್ತದೆ. [illegible] ಬೆಳಕಿಗಿಂತ ಒಂದು ಸಾವಿರ ಪಾಲು ಮಂದವಾದ ಬೆಳಕೂ ನಿಮಗೆ ಕಾಣಿಸುತ್ತದೆ; ಹಾಗೆಯೇ ೧೦೦ ಕೋಟಿ ಮೇಣ ಬತ್ತಿಗಳನ್ನು ಸೇರಿಸಿದರಾಗುವ ಅಗಾಧ ಬೆಳಕಿನಲ್ಲಿಯೂ ಅದೇ ಕಣ್ಣು ನೋಡಬಲ್ಲದು.

ಆದರೂ ವಿಚಿತ್ರವೆನಿಸೀತು, ಆದರೆ ನಿಜ, ನೀವು ನಿಮ್ಮ ಕಣ್ಣುಗಳಿಂದ ನೋಡುವುದಿಲ್ಲ—ಮಿದುಳಿನಿಂದ ನೋಡುತ್ತೀರಿ. ಕಣ್ಣುಗಳು ಬರಿ ಕೆಮರಾದ ಲೆನ್ಸಿನ ಹಾಗೆ ಬೆಳಕನ್ನು ಒಳಗೆ ತೆಗೆದುಕೊಳ್ಳುವ ಸಾಧನಗಳು ಮಾತ್ರ. ಒಳಗೆ ಹೊಕ್ಕ ಪ್ರಕಾಶ ಮಿದುಳಿನ ಒಂದು ಭಾಗವನ್ನು ತಲಪಿದ ಕೂಡಲೆ ಅದು ಫೊಟೊಗ್ರಾಫಿನ ಪ್ಲೇಟ್ ಅಥವಾ ಫಿಲ್ಮಿನ ಹಾಗೆ ಹೊರಗಿಂದ ಬಂದ ಚಿತ್ರವನ್ನು ಗ್ರಹಿಸಿಕೊಳ್ಳುತ್ತದೆ.

ಆದ್ದರಿಂದ ಕಣ್ಣಿಗೆ ಶ್ರಮವಾಗಿದೆ ಎಂಬ ಹೇಳಿಕೆಯಲ್ಲಿ ಅರ್ಥವೇ ಇಲ್ಲೆಂದು ತಜ್ಞರು ಹೇಳುತ್ತಾರೆ. ಫೋಟೊ ತೆಗೆದುತೆಗೆದು ಕೆಮರಾಕ್ಕೆ ಹೇಗೆ ಶ್ರಮವಾಗುವುದು ಅಸಾಧ್ಯವೋ ಹಾಗೆ ನೋಡಿ ನೋಡಿ ಕಣ್ಣಿಗೆ ಶ್ರಮವಾಗುವುದೂ ಅಸಾಧ್ಯ. ಕಣ್ಣಿಗೆ ಆಯಾಸವಾಗಿದೆ ಅನ್ನುವುದರ ಅರ್ಥ ನಿಮ್ಮ ಕಣ್ಣಿನ ರಚನೆಯಲ್ಲೇ ಏನೋ ಚಿಲ್ಲರೆ ದೋಷವಿದೆ ಎಂದಾಗಬಹುದು. ಅಥವಾ ನೋಡಿನೋಡಿ ನಿಮ್ಮ ಮಿದುಳಿನ ಭಾಗಕ್ಕೆ ಶ್ರಮವಾಗಬಹುದು ಹೊರತು ಕಣ್ಣಿಗೆ ಶ್ರಮವಾಗುವುದು ಸುಳ್ಳು.

ಆದ್ದರಿಂದ ಆಧುನಿಕ ಯುಗದ ಸಿನೆಮಾ ಮೊದಲಾದವುಗಳಿಂದ ಮನುಷ್ಯರ ಕಣ್ಣು ಕೆಡುತ್ತದೆ ಎಂದು ಯಾರಾದರೂ ಹೇಳಿದರೆ ನಂಬಬೇಡಿ. ಆಧುನಿಕ ನಾಗರಿಕತೆಯ ಗಾಳಿ ಕೂಡ ಬಡಿಯದ ಆಸ್ಟ್ರೇಲಿಯದ ಮೂಲ ನಿವಾಸಿಗಳ ಕಣ್ಣು ನಾಗರಿಕರಾದ ನಮ್ಮ ಕಣ್ಣುಗಳಿಗಿಂತ ಸೂಕ್ಷ್ಮವಾಗಿಲ್ಲೆಂದು ಮಾನವ ಶಾಸ್ತ್ರಜ್ಞರು ಹೇಳುತ್ತಾರೆ.

‘ಕೊಲಿಯರ್ಸ್'ನಿಂದ ರೂಪಾಂತರ

ಕಾರಣವೇನಿದ್ದರೂ ಶಸ್ತ್ರ ಕ್ರಿಯೆಯಿಂದ ಮೋತೀಬಿಂದುವನ್ನು ಯಶಸ್ವಿಯಾಗಿ ನಿವಾರಿಸಲು ಶಕ್ಯವಾಗುತ್ತದೆ. ಮಂಜಾದ ದೃಷ್ಟಿಯನ್ನು ತೆಗೆದು ವಿಶಿಷ್ಟ ಕನ್ನಡಕಗಳನ್ನು ಡಾಕ್ಟರರು ಕೊಡುತ್ತಾರೆ. ಹೀಗೆ ಸರಿಪಡಿಸಿದ ಕಣ್ಣು ತೀರ ಹತ್ತಿರದ ಪದಾರ್ಥವನ್ನು ನೋಡಲಾರದು ಮತ್ತು ಸರಿಯಾಗಿರುವ ಇನ್ನೊಂದು ಕಣ್ಣಿನ ಸಂಗಡ ಸಹಕರಿಸಲಾರದು ಎಂಬುದೊಂದು ಕಷ್ಟ.

ಮಕ್ಕಳಿಗೆ ಬರುವ ಕಣ್ಣಿನ ರೋಗಗಳಲ್ಲಿ ಫೈಬ್ರೊಪ್ಲಾಸಿಯಾ ಒಂದು ದೊಡ್ಡ ಸಮಸ್ಯೆಯಾಗಿದೆ. ಇದು ಬಹುತರವಾಗಿ ತಿಂಗಳು ತುಂಬುವ ಮೊದಲೇ ಹುಟ್ಟುವ ಮಕ್ಕಳನ್ನು ಪೀಡಿಸುತ್ತದೆ. ಇಂಥ ಮಕ್ಕಳು ಹುಟ್ಟುವಾಗ ದೃಷ್ಟಿ ಸರಿಯಾಗಿದ್ದರೂ ಮುಂದೆ ಕಣ್ಣುಗುಡ್ಡೆ ಬಾತು ನಾಲ್ಕು ತಿಂಗಳ ಹೊತ್ತಿಗೆ ಕಣ್ಣು ಹೋಗಿಬಿಡಬಹುದು.

ಈ ರೋಗದ ಕಾರಣಪರಂಪರೆ ಇನ್ನೂ ಗೊತ್ತಾಗಿಲ್ಲ. ಡಾಕ್ಟರರು ಅದರ ಶೋಧದಲ್ಲಿ ಇದ್ದಾರೆ.

ಹಸುಗೂಸುಗಳ ಕಣ್ಣುಗಳಿಗೆ ಬರುವ ಇನ್ನೊಂದು ಮಾರಿಯೆಂದರೆ, ಉಪದಂಶ ( ಸಿಫಿಲಿಸ್ ) ಮೊದಲಾದ ರೋಗಗಳುಳ್ಳ ತಾಯಿಂದಿರಿಂದ ದಾಟಿದ ರೋಗಾಣುಗಳಿಂದ ಬರುವ ಕುರುಡುತನ. ಆದರೆ ಸಿಲ್ವರ್ ನೈಟ್ರೇಟ್ ಬಿಂದುಗಳು, ಪೆನಿಸಿಲಿನ್ ಮೊದಲಾದವುಗಳ ಸಹಾಯದಿಂದ ಈಗ ಈ ಪೀಡೆ ಹಿಡಿತಕ್ಕೆ ಬಂದಿದೆ.

ಮೆಳ್ಳೆಗಣ್ಣು ಮಕ್ಕಳಿಗಿರುವ ಮತ್ತೊಂದು ಕಣ್ಣಿನ ದೋಷ. ಈಗ "ಕಣ್ಣಿನ ವ್ಯಾಯಾಮ" ದಿಂದಲೂ ಯೋಗ್ಯ ಕನ್ನಡಕಗಳಿಂದಲೂ ಕೆಲವೇಳೆ ಸರಳ ಶಸ್ತ್ರಕ್ರಿಯೆಯಿಂದಲೂ ಈ ಪೀಡೆಯನ್ನು ತೊಲಗಿಸಲು ಶಕ್ಯವಾಗಿದೆ. ಆದರೆ ಮೆಳ್ಳೆಗಣ್ಣು ತಾನಾಗಿ ಸರಿಯಾಗುವುದೆಂದು ನಂಬಿ ಸುಮ್ಮನಿದ್ದರೆ ಅದು ಚಿರಸ್ಥಾಯಿಯಾಗದಿರದು.

ವರ್ಣಾಂಧತೆಯೆಂಬೊಂದು ವಿಚಿತ್ರ ದೃಷ್ಟಿದೋಷವಿದೆ. ಇದುಳ್ಳವರಿಗೆ ಕೆಲ ಕೆಲ ಬಣ್ಣಗಳನ್ನು ಸರಿಯಾಗಿ ಗುರುತಿಸಲು ಬಾರದು. ಇದು ಹೆಚ್ಚಾಗಿ ವಂಶಪರಂಪರಾಗತವಾಗಿ ಬಂದ ದೋಷವಾಗಿರುತ್ತದೆ. ಅದಕ್ಕೆ ಪರಿಹಾರವಿಲ್ಲ. ನಮ್ಮ ಮಿದುಳು ಬಣ್ಣಗಳನ್ನು ಹೇಗೆ ಗುರುತಿಸುತ್ತದೆಂದು ವಿಜ್ಞಾನಿಗಳಿಗೆ ಗೊತ್ತಿಲ್ಲ. ಅನೇಕ ಪ್ರಾಣಿಗಳಿಗೆ ಬಣ್ಣಗಳ ಭೇದವೇ ಕಾಣಿಸುವುದಿಲ್ಲೆಂದು ಮಾತ್ರ ಅವರು ಬಲ್ಲರು.

ಇನ್ನೊಂದು ಕಣ್ಣಿನ ರೋಗ ರಾತ್ರ್ಯಂಧತೆ. ಇದುಳ್ಳವರಿಗೆ ರಾತ್ರಿ ಕಣ್ಣು ಕಾಣುವುದಿಲ್ಲ. ಕಣ್ಣಿನ ರೆಟಿನಾದಲ್ಲಿ ಮಂದಪ್ರಕಾಶಕ್ಕೆ ಬೇರೆ, ತೀವ್ರ ಪ್ರಕಾಶಕ್ಕೆ ಬೇರೆ ಗ್ರಾಹಕೇಂದ್ರಿಯಗಳಿವೆ. ಮೊದಲನೆಯವು ಸೂಕ್ಷ್ಮವಾದ ಕೋಲು (rods) ಗಳಂತೆಯೂ, ಎರಡನೆಯವು ಶಂಕು (cones) ಗಳಂತೆಯೂ ಇರುತ್ತವೆ. ರಾತ್ರಿಯಲ್ಲಿ ನಮ್ಮ ದೃಷ್ಟಿ ಈ ಕೋಲುಗಳ ಸಹಾಯದಿಂದ ಬೆಳಕನ್ನು ಗುರುತಿಸುತ್ತದೆ. ಅ- ಅನ್ನಾಂಗ (ವಿಟಾಮಿನ್)ದ ಸಹಾಯವಿಲ್ಲದೆ ಈ ಕೋಲುಗಳು ಸರಿಯಾಗಿ ಕೆಲಸ ಮಾಡುವುದಿಲ್ಲ. ಆದ್ದರಿಂದ ಅ- ಅನ್ನಾಂಗದ ಕೊರತೆಯಿಂದಲೇ ರಾತ್ರ್ಯಂಧತೆ ಬರುವುದೆಂದು ನಿಷ್ಪನ್ನವಾಗುತ್ತದೆ.

ನಿಮ್ಮ ಕಣ್ಣಿನ ರಕ್ಷಣೆಗೆ ಈ ಕೆಳಗಿನ ಸೂತ್ರಗಳು ನೆರವಾಗಬಲ್ಲವು :

ಅಪಾಯದ ಕೆಲಸದಲ್ಲಿ ತೊಡಗಿದಾಗ ಕಣ್ಣುಗಳಿಗೆ ರಕ್ಷಕ ಕನ್ನಡಕ ಹಾಕಿಕೊಳ್ಳಿರಿ.

ಮಕ್ಕಳಿಗೆ ಅಪಾಯಕರ ಆಟಿಕೆಗಳನ್ನು ಕೊಡಬೇಡಿರಿ.

ಕಣ್ಣುಗಳನ್ನು ಕೈಯಿಂದಾಗಲಿ ಅಸ್ವಚ್ಛಕರವಸ್ತ್ರದಿಂದಾಗಲಿ ಒರಸಬೇಡಿರಿ.

ಬಿಸಿಲುಕನ್ನಡಕ ಬಿಸಿಲಲ್ಲಿ ಒಳ್ಳೇ ರಕ್ಷಣೆ ಕೊಡುವುದು. ಆದರೆ ರಾತ್ರಿ ಅದನ್ನೆಂದೂ ಹಾಕಿಕೊಳ್ಳಬೇಡಿರಿ.

ಸರಿಯಾದ ಬೆಳಕಿದ್ದರೆ ಹಾಸಿಗೆಯಲ್ಲಿ ಓದಲು ಅಡ್ಡಿಯಿಲ್ಲ. ಇಡೀ ಕೋಣೆಗೆ ಬಂದೇ ಸಮನೆ ಬೆಳಕಿದ್ದಲ್ಲಿ ಓದಿರಿ. ಓದುವ ಸ್ಥಳಕ್ಕಷ್ಟೇ ಬೆಳಕು ಬೀಳುವಂತಿಟ್ಟು ಓದುವುದು ಒಳಿತಲ್ಲ.

ಎಲ್ಲಕ್ಕಿಂತ ಹೆಚ್ಚಾಗಿ ನಿಮ್ಮ ಮೈ ಮನಸುಗಳೆರಡನ್ನು ಆರೋಗ್ಯವಾಗಿಟ್ಟಿರಿ.

ಅದೇ ಪ್ರಕಾರ ನಿಮ್ಮ ಕಣ್ಣಿಗೆ ಸರಿಹೋಗದ ಕನ್ನಡಕ ಹಾಕಿಕೊಂಡರೆ ಕಣ್ಣು ಕೆಡುವುದೆಂಬುದೂ ಅಜ್ಜಿ ಕಥೆಯೇ. ಅಂಥ ಕನ್ನಡಕಗಳು ತ್ರಾಸದಾಯಕವಾದಾವು ಹೊರತು ಅವುಗಳಿಂದ ಕಣ್ಣಿಗೆ ಅಪಾಯವಾದೀತೆಂಬುದು ನಿರಾಧಾರ.

ಸರಿಯಾದ ಕನ್ನಡಕ ಹಾಕಿಕೊಂಡರೆ ಕೆಟ್ಟ ಕಣ್ಣು ಸರಿಯಾದೀತೆಂಬುದೂ ಸುಳ್ಳು. ದೂರ ದೃಷ್ಟಿ ಅಥವಾ ಸಮೀಪದೃಷ್ಟಿಯ ದೋಷದಿಂದ ಇಲ್ಲವೆ ಕಣ್ಣುಗೊಂಬೆಯ ಆಕೃತಿಯ ದೋಷದಿಂದ ಸರಿಯಾಗಿ ಕಾಣಿಸದಿದ್ದವರ ಮಿದುಳಿನ ಪರದೆಯ ಮೇಲೆ ಸ್ಪಷ್ಟವಾದ ದೃಶ್ಯ ಬೀಳುವಂತೆ ಮಾಡಲು ಕನ್ನಡಕ ನೆರವಾಗುತ್ತದಷ್ಟೇ. ಮೇಲೆ ಹೇಳಿದ ಯಾವ ದೋಷಗಳನ್ನೂ **ಗುಣಪಡಿಸಲು** ಸಾಧ್ಯವಿಲ್ಲ. ಕನ್ನಡಕಗಳು ಕಣ್ಣಿನ ಊರುಗೋಲುಗಳು ಮಾತ್ರ.

ಕಣ್ಣುಗೊಂಬೆ (Cornea) ಇದೆಯಲ್ಲ, ಅದೊಂದು ಅಪರೂಪ ವಸ್ತು. ರಕ್ತಸಂಚಾರದ ನೆರವಿಲ್ಲದೇ ಅದು ಜೀವಿಸುತ್ತದೆ. ಅದರಲ್ಲಿ ರಕ್ತನಾಳಗಳಿದ್ದರೆ ಬೆಳಕಿಗೆ ತಡೆಯಾಗಿ ಬಿಡಬಹುದಲ್ಲವೆ? ಆದರೆ ರಕ್ತವಿಲ್ಲದೆ ಅದು ಹೇಗೆ ಜೀವಂತವಾಗಿ ಉಳಿಯುತ್ತದೆಂಬುದು ಮಾತ್ರ ಡಾಕ್ಟರರಿಗೆ ಗೊತ್ತಿಲ್ಲ. ಬಹುಶಃ ಕಣ್ಣೀರಿನಿಂದ ಅದಕ್ಕೆ ಆಹಾರ ಸಿಗುತ್ತಿರಬೇಕು. ಕಣ್ಣೀರಿನಲ್ಲಿ ಉಪ್ಪು, ಸಕ್ಕರೆ ಮತ್ತು ಇತರ ಆಹಾರ ದ್ರವ್ಯಗಳು ಕರಗಿರುತ್ತವೆ.

ಆಧುನಿಕ ಶಸ್ತ್ರಚಿಕಿತ್ಸಾ ವಿದ್ಯೆಯ ಅದ್ಭುತಗಳಲ್ಲೊಂದೆಂದರೆ, ಸತ್ತವರ ಕಣ್ಣುಗೊಂಬೆಯನ್ನು ತೆಗೆದು ಕಣ್ಣು ಸರಿಯಾಗಿಲ್ಲದ ಜೀವಂತ ಮನುಷ್ಯರಿಗೆ ಹಚ್ಚುವುದಾಗಿದೆ. ಆದರೆ ಕಣ್ಣು ಕೆಟ್ಟವರೆಲ್ಲ ಡಾ. ಮೋದಿಯವರ ಕಡೆ ಹೋಗಿ ಹೊಸ ಕಣ್ಣು ಹಚ್ಚಿಕೊಂಡು ಬಂದೇವೆಂದು ತಿಳಿದಿದ್ದರೆ ಅದು ಬಯಲಾಸೆಯೇ. ಅನೇಕ ಸೂಕ್ಷ್ಮ ನರನಾಡಿಗಳಿಂದ ಕೂಡಿದ ಇಡೀ ಕಣ್ಣನ್ನು ಹೊಸದಾಗಿ ಹಚ್ಚಬಲ್ಲ ಸರ್ಜನ್ ಇನ್ನೂ ಹುಟ್ಟಿಲ್ಲ. ಡಾ. ಮೋದಿಯವರಂಥ ಕುಶಲರು ಮಾಡಬಲ್ಲ ಕಾರ್ಯವೆಂದರೆ ಸತ್ತವನ ಕಣ್ಣುಗೊಂಬೆಯ ಸ್ವಚ್ಛವಾದ ಒಂದು ಭಾಗವನ್ನು ಕತ್ತರಿಸಿ ಜೀವಂತ ಮನುಷ್ಯನ ಕಣ್ಣಿಗೆ ಹಚ್ಚುವುದು ಮಾತ್ರ.

ಈ ಶಸ್ತ್ರ ಚಿಕಿತ್ಸೆ ಕೂಡ ಯಾವಾಗಲೂ ಯಶಸ್ವಿಯಾಗುತ್ತದೆಂದಲ್ಲ. ನೂರಕ್ಕೆಪ್ಪತ್ತೈದು ಪ್ರಕರಣಗಳಲ್ಲಿ ಹೊಸ ದೃಷ್ಟಿಯೂ ಬರಬರುತ್ತ ಮಂಜಾಗುತ್ತದೆ. ೨೫ ಪ್ರಕರಣಗಳಷ್ಟೇ ಯಶಸ್ವಿಯಾಗುತ್ತವೆ. ಹೀಗೇಕಾಗುತ್ತದೆಂದು ಸರಿಯಾಗಿ ತಿಳಿದಿಲ್ಲ.

ಈ ಸಮಸ್ಯೆಯನ್ನು ಡಾಕ್ಟರರು ಬೇಗನೇ ಪರಿಹರಿಸಬಹುದು. ಮೊಲಗಳಿಗೆ ಪ್ಲಾಸ್ಟಿಕ್ಕಿನ ಕಣ್ಣುಗುಡ್ಡೆ ಹಚ್ಚಿ ಡಾಕ್ಟರರು ಆಗಲೇ ತಕ್ಕಮಟ್ಟಿನ ಯಶ ಸಂಪಾದಿಸಿದ್ದಾರೆ. ಆದರೆ ಮನುಷ್ಯನಿಗೆ ಇದರ ಪ್ರಯೋಜನ ಸಿಗಲು ಇನ್ನೂ ಸಮಯಬೇಕು.

ಕಣ್ಣು ತನ್ನ ರಕ್ಷಣೆಗೆ ತಾನೇ ಔಷಧಗಳನ್ನು ಸೃಷ್ಟಿಸಿಕೊಳ್ಳುತ್ತದೆ. ಕಣ್ಣೀರೇ ಆ ಔಷಧ. ಅದರಲ್ಲಿ ಕ್ರಿಮಿನಾಶಕ ಶಕ್ತಿಯಿದೆ. ಆದರೂ ಕಣ್ಣು ಹಲವು ಬೇನೆಗಳಿಗೆ ಗುರಿಯಾಗುತ್ತದೆ.

ಕಣ್ಣಿಗೆ ಬರುವ ರೋಗಗಳಲ್ಲಿ ಅತಿ ಭಯಂಕರವಾದುದೆಂದರೆ ಗ್ಲುಕೋಮಾ. ಈ ನಿಗೂಢ ಬೇನೆಯಿಂದ ಕಣ್ಣುಗುಡ್ಡೆ ಗಟ್ಟಿಯಾಗಿಬಿಡುತ್ತದೆ. ಒಮ್ಮೆ ಹೀಗೆ ನಷ್ಟವಾದ ದೃಷ್ಟಿಯನ್ನು ಏನು ಮಾಡಿದರೂ ಸರಿಪಡಿಸುವುದಸಾಧ್ಯ. ಆದರೆ ಪ್ರಾರಂಭಿಕ ಅವಸ್ಥೆಗಳಲ್ಲಿ ಕಣ್ಣಿಗೆ ಮಯೋಟಿಕ (miotic) ಔಷಧಗಳನ್ನು ಹಾಕಿಯೋ ಶಸ್ತ್ರ ಚಿಕಿತ್ಸೆಯಿಂದಲೋ ರೋಗವನ್ನು ತಡೆಯಲು ಸಾಧ್ಯವುಂಟು.

ಕಟರಾಕ್ಟ ಎಂಬ ಕಣ್ಣಿನ ರೋಗ ಗ್ಲುಕೋಮಾಕ್ಕಿಂತಲೂ ಹೆಚ್ಚು ಪ್ರಸಾರದಲ್ಲಿದೆ. ಆದರೆ ಅದಕ್ಕೆ ಸುಲಭವಾಗಿ ಚಿಕಿತ್ಸೆ ಮಾಡಬಹುದು. ಗ್ಲುಕೋಮಾ ಮಧ್ಯವಯಸ್ಸಿನಲ್ಲಿ ಬರುವ ರೋಗವಾದರೆ ಕಟರಾಕ್ಟ ಬೇಕಾದಾಗ, ಹುಟ್ಟುವ ಮೊದಲು ಕೂಡ, ಬರಬಲ್ಲದು. ಆದರೂ ಮುದುಕರು ಅದರಿಂದ ಬಳಲುವುದು ಹೆಚ್ಚು. ಕಣ್ಣಿಗೆ ಆದ ಅಪಘಾತ, ಮಾನಸಿಕ ಆಘಾತ, ಬೇರೆ ರೋಗ, ಪರಮಾಣು ವಿಸರಣ ಮೊದಲಾದವು ಇದಕ್ಕೆ ಕಾರಣವಾಗಬಹುದು.



# ಆಧುನಿಕ

# ಹದಿಬದೆಯ ಧರ್ಮ

ರಾ. ಶಿವರಾಮಯ್ಯ

ಮುದ್ದು ಅಂಬ,

ಮೊಟ್ಟಮೊದಲನೆಯದಾಗಿ, ನಿನಗೆ ನಿನ್ನ ಗಂಡನನ್ನು ಕಂಡರೆ ಇಷ್ಟ ಎಂಬುದನ್ನು ಆತನಿಗೆ ಮನವರಿಕೆ ಮಾಡಿಕೊಡು. ವೈವಾಹಿಕ ಜೀವನದಲ್ಲಿ, ಆತ ಕೆಲಸದಿಂದ ಹಿಂದಿರುಗಿ ಬಂದಾಗ ನಿನ್ನ ಮುಖದ ಮೇಲೆ ಕಂಡುಬರುವ ನೋಟವೇ ಆತನಿಗೆ ಪ್ರಾಯಶಃ ಎಲ್ಲ ನೋಟಗಳಿಗಿಂತಲೂ ಪ್ರಿಯವಾದ ನೋಟವಾಗಿದ್ದೀತು. ನಿನ್ನ ಅತ್ಯಂತ ಪ್ರಿಯ ಸ್ನೇಹಿತರು ಬಂದಾಗ ನೀನು ಇದಿರುಗೊಳ್ಳುವ ಹರ್ಷಯುತ ನೋಟದಿಂದ ಅವನನ್ನು ಸ್ವಾಗತಿಸಿದ್ದಾದರೆ ಆತನಿಗೆ ತಾನು ಪ್ರೀತಿಪಾತ್ರನಾದ ವ್ಯಕ್ತಿ ಎನಿಸಿ, ನಿನ್ನನ್ನು ಇನ್ನೂ ಅಧಿಕವಾಗಿ ಪ್ರೇಮಿಸುತ್ತಾನೆ.

ನಿನ್ನ ಮನೆಗೆಲಸದ ಒತ್ತಡದಲ್ಲಿ, ಉತ್ತಮ ಗೃಹಿಣಿಯಾಗುವ ಅವಸರದಲ್ಲಿ, ಅವನನ್ನು ಮಾತನಾಡಿಸಲು ನಿನಗೆ ವ್ಯವಧಾನ ಇಲ್ಲವಾದರೆ, ನಿನ್ನಲ್ಲಿ ಆತನನ್ನು ಕುರಿತಾದ ಮಾನವೀಯ ಭಾವನೆ ಲುಪ್ತವಾದಂತೆಯೇ! ಗೃಹಿಣಿಯಾಗಿ ಆದರ್ಶ ಜೀವನ ನಡೆಸುತ್ತಾ, ಸಾಂಸಾರಿಕ ಜವಾಬ್ದಾರಿಯನ್ನು ಯಶಸ್ವಿಯಾಗಿ ನಿರ್ವಹಿಸುತ್ತಾ ಗಂಡಂದಿರಲ್ಲಿ ಅಪಾರ ಪ್ರೇಮವನ್ನು ಇಟ್ಟುಕೊಂಡಿರುವ ಎಷ್ಟೋ ಮಂದಿ ಇದ್ದಾರೆ: ಆದರೆ ಆ ಗಂಡಂದಿರಿಗೆ ಮನಸ್ಸಿಗೆ ಸಂತೋಷ ಇರುವುದಿಲ್ಲ. ಕಾರಣ ಇಷ್ಟೆ: ತಮ್ಮನ್ನು ಕಂಡರೆ ತಮ್ಮ ಹೆಂಡತಿಯರಿಗೆ ಸೇರಿಕೆ ಇಲ್ಲ ಎಂದು ಅವರಿಗೆ ಭಾವನೆಯುಂಟಾಗಿರುತ್ತದೆ.

ಈ ವ್ಯವಹಾರ ಇಬ್ಬಗೆಯದು. ಈ ನಾಣ್ಯಕ್ಕೆ ಇನ್ನೊಂದು ಮುಖವಿದೆ. ನಿನಗೆ ಆತನ ಪ್ರೀತಿ ಬೇಕಾಗಿದೆ ಎಂದು ಆತ ಅರಿಯುವಂತೆ ಮಾಡಬೇಕು. ಒಬ್ಬ ಮನುಷ್ಯನ ಸ್ವಾಭಿಮಾನವನ್ನು ಬೆಳೆಸಲು ಇದಕ್ಕಿಂತ ಪರಿಣಾಮಕಾರಿಯಾದ ಉಪಾಯವಿಲ್ಲ.

ನೀನು ಎಚ್ಚರಿಕೆಯಿಂದರಬೇಕಾದ ಇನ್ನೊಂದು ಸೂಕ್ಷ್ಮ ವಿಷಯವೆಂದರೆ: ಆತನ ಕೆಲಸದ ವಿಷಯ ನೀನು ಹೇಗೆ ಮಾತನಾಡುವಿ ಎಂಬುದು. ಅವನು ತನ್ನ ಉದ್ಯೋಗದ ಕ್ಷೇತ್ರದಲ್ಲಿ ಮುಂದುವರಿಯಬಹುದೆಂದೂ ಇನ್ನೂ ಹೆಚ್ಚಿನ ಅಭ್ಯುದಯದ ಸಾಮರ್ಥ್ಯ ಅವನಲ್ಲಿದೆಯೆಂದೂ ನೀವಿಬ್ಬರೂ ಆಶೋತ್ತರ ತಳೆದಿರಬಹುದು. ಆದರೆ, ಎಂದಾದರೂ ಆತನ ಜೀವನೋಪಾಯದ ಬಗ್ಗೆ ನಿನಗೆ ನಾಚಿಕೆಯಾಗುತ್ತಿದೆಯೆಂಬುದಾಗಿ ಆತನಿಗೆ ಸೂಚನೆ ಕೊಟ್ಟೆಯೋ ತೊಂದರೆಗೆ ಆಮಂತ್ರಣವಿತ್ತಂತೆ! ಎಲ್ಲದಕ್ಕಿಂತ ಹೆಚ್ಚಾಗಿ

'ರೆಡ್‌ಬುಕ್ಕ್'ನಿಂದ ರೂಪಾಂತರ

ಆತನಿಗಿಂತ ಇತರರು ಎಷ್ಟು ಮೇಲಾಗಿದ್ದಾರೆಂದು ಅವನಿಗೆ ಸೂಚಿಸುವ ಹವ್ಯಾಸಕ್ಕೆ ಬೀಳಬೇಡ.

ಮನೆಗೆ ಬಂದ ಗಂಡನ ಮಾತುಕತೆಗಳಿಗ ಗಮನ ಕೊಡು. ನೀನೂ ಆತನಿಂದ ಇದನ್ನೇ ನಿರೀಕ್ಷಿಸುತ್ತೀಯ! ನಿನಗೆ ಜಡವೆನಿಸಬಹುದೇನೋ. ಆದರೆ ಆತನ ವ್ಯಾವಹಾರಿಕ ವಿಷಯಗಳಲ್ಲಿ ನಿನಗಿರುವ ಅಭಿರುಚಿಯಿಂದ ಆತನು ತನ್ನ ಮೇಲೆ ನಿನಗಿರುವ ಆಸಕ್ತಿಯನ್ನು ಅಳೆಯಬಹುದು. ಆತನ ಮಾತುಕಥೆಗಳು ನಿನಗೆ ಬೇಡವೆನಿಸಿದರೆ ಆತನನ್ನು ನೀನು 'ಸಪ್ಪೆ', 'ಮಂಕು' ಎಂಬುದಾಗಿ ಭಾವಿಸಿದ್ದೀಯೆಂದು ತಿಳಿದುಕೊಳ್ಳುತ್ತಾನೆ. ತನ್ನ ಸಮಸ್ಯೆಗಳನ್ನು ಕುರಿತು ಚರ್ಚಿಸಬಲ್ಲಂಥ ವಿಶ್ವಸನೀಯ ವ್ಯಕ್ತಿಯ ಅಗತ್ಯ ಆತನಿಗಿದೆ. ಯಾವೊಬ್ಬನನ್ನೂ ಆತನ ಉದ್ಯೋಗದಿಂದ ಬೇರ್ಪಡಿಸಲು ಸಾಧ್ಯವಿಲ್ಲ. ಆದ್ದರಿಂದ ಎರಡರೊಂದಿಗೂ ಸಹಾನುಭೂತಿಯಿಂದಿರು.

ಯಾವಾಗ ಮದುವೆಯಾಗಿ ಗೃಹಿಣಿಯಾದೆಯೋ ಆಗ ಸ್ವಂತ ಆಕಾಂಕ್ಷೆಗಳಲ್ಲಿ ಕೆಲವಾದರೂ ಕೈಬಿಟ್ಟಿರತಕ್ಕಂಥ ಪ್ರಸಂಗವೇ ಜಾಸ್ತಿ. ನಿನಗೆ ಅಂತಹ ತ್ಯಾಗ ಅಸಾಧ್ಯವೆನಿಸಿದರೆ ಮದುವೆಯಾಗಲೇಬೇಡ. ಎಷ್ಟೋ ನಾರೀಕೂಟಗಳಲ್ಲಿ ಮದುವೆಯಾದ್ದರಿಂದ ತಾವು ಬಿಟ್ಟುಕೊಟ್ಟ ಮಹತ್ವಾಕಾಂಕ್ಷೆಗಳನ್ನು ಕುರಿತು ಹೆಂಗಸರು ವ್ಯಥೆಪಡುವುದುಂಟು. ನೀನೂ ಅದೇ ರೀತಿ ಅಭಿಪ್ರಾಯಪಡುವುದಾದರೆ ಮದುವೆಯಾಗಬೇಡ.

ಗಂಡಸಿನ ದೃಷ್ಟಿಯಲ್ಲಿ ಹೆಂಡತಿಯೆನಿಸಿಕೊಂಡವಳು ಮನೆವಾರ್ತೆ ನಡೆಸಿಕೊಂಡು ಹೋಗುತ್ತಾ, ಸಂಸಾರ ಹಿತವನ್ನು ಲಕ್ಷಿಸುತ್ತಾ, ಪ್ರೇಮಮೂರ್ತಿಯಾಗಿ, ಸಹಚಾರಿಣಿಯಾಗಿ, ಸಹಭಾಗಿನಿಯಾಗಿರಬೇಕು. ಕೆಲವೊಂದು ಸಂದರ್ಭದಲ್ಲಿ ಗಂಡ ಹೆಂಡತಿಬ್ಬರೂ ಕೆಲಸ ಮಾಡುತ್ತಿದ್ದು ಸುಖವಾಗಿಯೇ ಇರಬಹುದು. ನಿನ್ನ ವಿಷಯವೂ ಹೀಗಾದರೆ, ಭೇಷ್! ಆದರೆ, ಜ್ಞಾಪಕದಲ್ಲಿರಲಿ: ನಿನ್ನ ಗಂಡ ಮದುವೆಯಿಂದ ಅಪೇಕ್ಷಿಸುವುದು ಬರಿಯ ಹೆಣ್ಣು ಸಹಜೀವಿಯನ್ನಲ್ಲ, ಗೃಹಿಣಿಯನ್ನು.

ಹೆಂಗಸರಿಗೆ ಕೆಲಸಕ್ಕೆ ಬಾರದೆನಿಸುವ ಎಷ್ಟೋ ವಿಷಯಗಳು ಗಂಡಸರಿಗೆ ಮುಖ್ಯವೆನಿಸುತ್ತವೆ. ಉದಾಹರಣೆಗೆ, ನಿನ್ನಗಂಡ ಮೆದುವಾಗಿ ಸುಮ್ಮನಿರುತ್ತಾನೆಂದಿಟ್ಟುಕೊಳ್ಳೋಣ. ಇದರ ಅರ್ಥ ಅವನು ಕೋಪಿಸಿಕೊಂಡಿದ್ದಾನೆಂದಲ್ಲ. ನೀನು ಆತನನ್ನು ಏಕೆ ಕೋಪದಿಂದಿದ್ದೀರೆಂದು ಕೇಳುವವರೆಗೆ ಆತ ನಿನ್ನ ಮೇಲೆ ಕೋಪಗೊಂಡಿರುವುದಿಲ್ಲ. ಆತನ ನೋಟಗಳ, ಗೊಣಗಾಟಗಳ, ಹುಡುಗಾಟಗಳ, ಅನಿರೀಕ್ಷಿತ ಲಕ್ಷ್ಯ-ನಿರ್ಲಕ್ಷ್ಯಗಳ ವಿಶೇಷ ಅರ್ಥಗಳನ್ನು ನೀನು ಅರಿಯಬೇಕು.

ಗಂಡನ ಶಕ್ತಿ-ದೌರ್ಬಲ್ಯ, ಜಂಭ-ಅನುಮಾನಗಳ ವಿಚಿತ್ರ ಸಮ್ಮಿಲನದೊಂದಿಗೆ ಏಗುವುದು ಸುಲಭವಲ್ಲ. ಅನುಕ್ರಮವಾಗಿ ಅವನು ನಿನ್ನನ್ನು ಸೆಳೆದಪ್ಪಬಹುದು, ದೂರಬಹುದು, ದೂಷಿಸಬಹುದು, ಹೊಗಳಬಹುದು. ತಾನು ಮಹಾಧೀರನೆಂದು ನಿನ್ನ ಮೇಲೆ ಬಿಂಬಿಸಲು ಯತ್ನಿಸಬಹುದು. ಅಥವಾ ನಿನ್ನ ಗಮನ ಸೆಳೆಯಲು ಹೊಂಚುಹಾಕಬಹುದು ಆತನನ್ನು ಎಂದಾದರೂ ಸಂತೋಷದಿಂದಿಡಲು ಸಾಧ್ಯವೆ? ಪ್ರಯತ್ನಿಸಿದರೂ ಏನು ಫಲ? ಹೀಗೆಲ್ಲಾ ನಿನಗೆ ಎನಿಸೀತು. ಸೋಮವಾರ ನಿನ್ನನ್ನು ವೇಶ್ಯೆಯಂತೆ ಕಂಡವನು ಮಂಗಳವಾರ ತಾಯಂತೆ ಕಾಣಬಹುದು. ಬುಧವಾರ ಪ್ರೇಮದಿಂದ ಕಂಡರೆ ಗುರುವಾರ ದ್ವೇಷದಿಂದ ಕಾಣಬಹುದು. ಶುಕ್ರವಾರ ನಿನ್ನ ಇರುವಿಕೆಯನ್ನೇ ಗಮನಿಸದಿರುವಂತೆ ನಿನಗೆ ಭಾಸವಾಗಬಹುದು. ಶನಿವಾರ ನಿನ್ನನ್ನು ನಿನ್ನ ಪಾಡಿಗೆ ಒಂದು ಕ್ಷಣವಾದರೂ ಬಿಡದಿದ್ದರೆ ಕಿರಿಚಿಕೊಳ್ಳುವಂತೆ ನಿನಗೆ ಆಗಬಹುದು. ನೀನು ಅವನ ವಿಷಯ ಏನು ಅಭಿಪ್ರಾಯ ಮಾಡಿಕೊಂಡರೂ ಆ ಕ್ಷಣಕ್ಕೋ ಅಥವಾ ಮತ್ತಾವುದಾದರೋ ಕ್ಷಣಕ್ಕೋ ಅದು ಸರಿಯಾಗುತ್ತದೆ.

ಲೈಂಗಿಕ ವಿಷಯಕ್ಕೆ ಬಂದರೆ ಗಂಡನೆಂಬ ವ್ಯಕ್ತಿಯು ಪರನಾರಿಯರನ್ನು ಸೆರಗು ಅಸ್ತವ್ಯಸ್ತವಾಗಿದಾಗ ತಾನೆಷ್ಟು ಕಣ್ಣಿಟ್ಟು ನೋಡಿ

ದರೂ ಅದರಲ್ಲಿ ಪಾಪದ ಲೇಪವಿಲ್ಲ ಎಂದು ಬಗೆಯುತ್ತಾನೆ. ಆದರೆ ತನ್ನ ಹೆಂಡತಿಯನ್ನು ಮಾತ್ರ ತನ್ನ ದುರ್ಬುದ್ಧಿಗಳಾದ ಮಿತ್ರರ ಪಾಪ ದೃಷ್ಟಿಯಿಂದ ಕಾಪಾಡಬಯಸುತ್ತಾನೆ!

ಬಹಳ ಜನ ಹೆಂಗಸರು, ತಮ್ಮ ಗಂಡಂದಿರು ತಮ್ಮ ವಿಷಯದಲ್ಲಿ ಆಸ್ಥೆ ವಹಿಸುವಂತೆ ಮಾಡಲು ತಮ್ಮ ಆಕರ್ಷಣೆಯನ್ನು ಸದಾ ಕಾಪಾಡಿಕೊಳ್ಳಬೇಕೆಂದು ಭಾವಿಸುತ್ತಾರೆ. ಆದರೆ ಅಂಬ, ಗಂಡನು ನಿನ್ನನ್ನು ನಿನ್ನ ಸಹಜ ಸ್ವರೂಪದಲ್ಲೇ ಒಪ್ಪಿಕೊಳ್ಳುವಂತೆ ನೋಡಿಕೋ. ನಿನ್ನ ವೈವಾಹಿಕ ಸಂಬಂಧ ಅನುತ್ಸುಕವಾಗಿ ಭಾಸವಾಗುವ ಸಂದರ್ಭಗಳು ಬಂದಾವು. ಆತನ ಆಸಕ್ತಿ ಕಮ್ಮಿಯಾಯಿತೇ ಎಂದು ನೀನು ಚಕಿತಗೊಳ್ಳಬಹುದು. ಹಿಂದಣ ಪ್ರೇಮಸಿಂಚಿತ ಸರಸ ಸಲ್ಲಾಪಗಳಿಗಾಗಿ ನೀನು ಹಾತೊರೆಯಬಹುದು. ಆದರೆ ಗಂಡನೆನಿಸಿಕೊಂಡವನು ಮದುವೆಯಾದ ಬಳಿಕ ತನ್ನ ಹೆಂಡತಿಯ ಅಖಂಡ ಪ್ರೇಮ ತನಗೇ ಮೀಸಲು ಮತ್ತು ಆ ಸಂಬಂಧದಲ್ಲಿ ಇತರ ಪುರುಷರೊಡನೆ ಸ್ಪರ್ಧೆ ನಿಂತಿದೆ ಎಂಬುದಾಗಿ ತಿಳಿಯುತ್ತಾನೆ. ಇದು ಅಸಡ್ಡೆಯಲ್ಲ.

ಲೈಂಗಿಕ ಸಂಬಂಧದ ರೀತಿ, ಉದ್ದೇಶಗಳನ್ನು ಕುರಿತು ನಿನ್ನ ಗಂಡ ವಿಚಿತ್ರ ಭಾವನೆಗಳನ್ನು ಹೊಂದಿರಬಹುದು. ಹೆಂಡತಿಯೊಡನೆ ಅವನು ದೇಹಸುಖವನ್ನು ಅಪೇಕ್ಷಿಸುವ ಕಾರಣಗಳು ಬೇಕಾದಷ್ಟಿರಬಹುದು. ರಸಿಕತೆ, ಸಂತೋಷ, ದುಃಖ, ಭಯ, ಕೋಪ, ಪ್ರಸನ್ನತೆ, ನಿರಾಶೆ, ಅಸ್ಥಿರ ಪ್ರವೃತ್ತಿ, ಹೀಗೆ ಯಾವ ಕಾರಣದಿಂದಲಾದರೂ ಅವನು ಹೆಂಡತಿಯನ್ನು ರಮಿಸಬಯಸಿಯಾನು. ತನ್ನ ಮನದ ಪ್ರವೃತ್ತಿಯನ್ನು ಸಮಾಧಾನಪಡಿಸಿಕೊಳ್ಳಲು ಮಾತ್ರವೇ ಆತ ನಿನ್ನನ್ನು ಬಯಸುತ್ತಾನೆಂದು ಬಗೆದು ನೀನು ಕೆರಳಬಹುದು. ಆದರೆ, ನಿನ್ನನ್ನು ಅವನು ಯಾವ ಭಾವನೆಯಿಂದ ನೋಡುತ್ತಾನೆಂಬ ಯೋಚನೆಯನ್ನು ಮರೆತು, ನಿನ್ನೊಡನೆ ಸಲೀಸಾಗಿ ವ್ಯವಹರಿಸಲು ಆಸ್ಪದ ಮಾಡಿಕೊಡು.

ಲೈಂಗಿಕ ಸಂಬಂಧದ ಆಶೆ ಎಷ್ಟು ಬಲವತ್ತರವಾಗಿರುತ್ತದೆ ಎಂಬುದನ್ನು ಕಂಡುಹಿಡಿದ ಕೆಲವು ಹೆಂಡಂದಿರು ಅದನ್ನು ವ್ಯಾಪಾರದ ಮಟ್ಟಕ್ಕಿಳಿಸುತ್ತಾರೆ. ಒಂದು ಹೊಸ ಉಡುಗೆ ತೊಡಿಗೆ, ಮತ್ತಾವುದೋ ಅನುಗ್ರಹಕ್ಕಾಗಿ ಅದನ್ನು ಮಾರಹೊರಡುತ್ತಾರೆ. ಕೊಡಕೊಳ್ಳುವ ಪದಾರ್ಥದ ಮಟ್ಟಕ್ಕೆ ಲೈಂಗಿಕ ವಿಷಯ ಬಂದು ನಿಂತರೆ ಅದರ ಬೆಲೆ ಹೋದಂತೆಯೇ. ನಿನ್ನ ಮೌಲ್ಯ ಕಡಮೆಯಾಗುತ್ತಾ ಬಂದು, ಒಂದು ದಿನ ಕೇವಲ ಅವನಿಗಾಗಿಯೇ ಅವನನ್ನು ಮೆಚ್ಚುವಂತಹವಳು ದೊರಕಿದಾಗ ನೀನು ನಿನ್ನ ಗಂಡನನ್ನು ಕಳೆದುಕೊಂಡೀಯೆ!

ನೀನು ಒದಗಿಸುವ ಕೌಟುಂಬಿಕ ಜೀವನದ ಸೌಖ್ಯವು ತನ್ನ ಜೀವನಸಂಗ್ರಾಮಕ್ಕೆ ಒಂದು ಸಾರ್ಥಕತೆಯನ್ನು ತಂದುಕೊಡುತ್ತದೆಂಬ ತಿಳಿವಳಿಕೆಯಿಂದಲೇ ಆತನು ನಿನ್ನನ್ನು ತನ್ನ ಗೃಹಲಕ್ಷ್ಮಿಯಾಗಿ ಮಾಡಬಯಸುತ್ತಾನೆ. ನೀನು ಅವನನ್ನು ಅರ್ಥ ಮಾಡಿಕೊಳ್ಳಲು ಪ್ರಾಮಾಣಿಕವಾಗಿ ಪ್ರಯತ್ನಿಸಿದ್ದೇ ಆದರೆ, ಆ ದುಡಿಯುವ ಜೀವಿಯೊಂದಿಗೆ, ಆ ವೀರನೊಂದಿಗೆ, ಜಂಭಗಾರನೊಂದಿಗೆ, ಅತಿಸೂಕ್ಷ್ಮ ನಿರಂಕುಶ ಜೀವಿಯೊಂದಿಗೆ ಸುಖದಿಂದಿರಲು ಸಾಧ್ಯವಿದೆ.



**ಚಿಂತೆಯೆಂಬುದು ಮನಸಿನಲ್ಲಿ ಹರಿಯುವ ಭಯದ ಚಿಕ್ಕ ಸೆಲೆ. ಪ್ರೋತ್ಸಾಹ ಸಿಕ್ಕಿದರೆ ಅದು ಬೆಳೆದು ಕಾಲುವೆಯಾಗುತ್ತದೆ. ಆ ಮೇಲೆ ಉಳಿದೆಲ್ಲ ವಿಚಾರಗಳೂ ಆ ಕಾಲುವೆಯ ಕಡೆಗೇ ಹರಿಯತೊಡಗುವವು.**

**— ಕೋಚೆ**

ಪ್ರಾಚೀನಕಾಲದಿಂದ ಬಂದ
ಬಿರುದು

# ಮಹಾಮಹೋಪಾಧ್ಯಾಯ

ಮಹಾಮಹೋಪಾಧ್ಯಾಯ ! ಕೇಳಲು ಬಹು ಗಂಭೀರವಾಗಿದೆಯಲ್ಲವೆ ? ಗೌರವ ಸೂಚಕವಾಗಿದೆಯಲ್ಲವೆ ?

ಮಾಸ್ತರ, ಗುರುಜಿ, ಶಿಕ್ಷಕ, ಟೀಚರ ಮುಂತಾದ ಪದಗಳ ಬಳಕೆಯು ಈ ಕಾಲದಲ್ಲಿ ಉಪಾಧ್ಯಾಯ ಎಂಬ ಶಬ್ದವೂ ಅಪರಿಚಿತ ಶಬ್ದಗಳ ಸಾಲಿನಲ್ಲಿ ಸೇರಿಕೊಂಡಂತಾಗಿದೆ. ಮಹಾಮಹೋಪಾಧ್ಯಾಯ ಶಬ್ದವಂತೂ ಅಪರೂಪವಾಗಿ ಕೇಳಿಬರುವದಾದ್ದರಿಂದ ಮೊದಲ ಸಲ ಕಿವಿಗೆ ಬಿದ್ದಾಗ, ಉಪಾಧ್ಯಾಯ ಎಂಬ ಶಬ್ದದ ಪರಿಚಯವಿರುವವರು ಕೂಡ ಮಹಾಮಹೋಪಾಧ್ಯಾಯ ಎಂಬುದು ಉಪಾಧ್ಯಾಯ ಶಬ್ದದ ಇನ್ನೊಂದು ರೂಪ ಎಂದು ಭಾವಿಸಬಹುದಾಗಿದೆ.

ಆದರೆ ಹಾಗಿಲ್ಲ. ಮಹಾಮಹೋಪಾಧ್ಯಾಯ ಎಂಬುದು ಒಂದು ಪದವಿ. ನಮ್ಮಲ್ಲಿ ಬಹಳ ಹಿಂದಿನ ಕಾಲದಿಂದಲೂ ಪರಂಪರಾಗತ ರೀತಿಯಲ್ಲಿ ಶಾಸ್ತ್ರಾಧ್ಯಯನ ಮಾಡಿ ಶ್ರೇಷ್ಠರೆನಿಸಿಕೊಂಡ ಪಂಡಿತರಿಗೆ ಈ ಪದವಿಯನ್ನರ್ಪಿಸಲಾಗುತ್ತಿತ್ತು. ಈ ಪದವಿಗಳನ್ನು ಆಗ ಸರಕಾರದವರು ಕೊಡುತ್ತಿರಲಿಲ್ಲ. ಶಂಕರಾಚಾರ್ಯ ಪೀಠದವರು ಕೊಡುತ್ತಿದ್ದರು.

೧೨ ನೆಯ ಶತಮಾನದ ಮಹಾ ವೈಯಾಕರಣಿ ಕೈಯಟನಿಗೆ ಈ ಪದವಿ ದೊರೆತಿತ್ತು ಎಂದು ಉಲ್ಲೇಖವಿದೆ. ೧೪ ನೆಯ ಶತಮಾನದಲ್ಲಿ "ನ್ಯಾಯಲೀಲಾವತಿ"ಯನ್ನು ಬರೆದ ವಲ್ಲಭಾಚಾರ್ಯ, ೧೫ ನೆಯ ಶತಮಾನದಲ್ಲಿ "ಕಾವ್ಯಪ್ರದೀಪ" ಬರೆದ ಗೋವಿಂದ ಠಾಕೂರರಿಗೆ, ಈ ಪದವಿ ಸಿಕ್ಕ ಉಲ್ಲೇಖವಿದೆ. ಸಂಸ್ಕೃತ ಪಂಚಮಹಾ ಕಾವ್ಯಗಳಿಗೆ ವ್ಯಾಖ್ಯಾನ ಬರೆದು ಪ್ರಖ್ಯಾತರಾದ ದಕ್ಷಿಣ ಭಾರತದ ಮಹಾವಿದ್ವಾಂಸ ಮಲ್ಲಿನಾಥರೂ ಮಹಾಮಹೋಪಾಧ್ಯಾಯರಾಗಿದ್ದರು.

ಭಾರತದಲ್ಲಿ ಬ್ರಿಟಿಶ್ ಪ್ರಭುತ್ವ ಸ್ಥಾಪಿತವಾದನಂತರ ೧೮೮೭ ರಲ್ಲಿ ವಿಕ್ಟೋರಿಯಾ ಮಹಾರಾಣಿಯ ಸಿಂಹಾಸನಾರೋಹಣದ ರಜತೋತ್ಸವ ನಿಮಿತ್ತವಾಗಿ ಬ್ರಿಟಿಶ್ ಸರಕಾರವು ಪ್ರಾಚ್ಯವಿದ್ಯಾ ಪ್ರವೀಣರಾದ ಪಂಡಿತರಿಗೆ "ಮಹಾಮಹೋಪಾಧ್ಯಾಯ" ಪದವಿಯನ್ನರ್ಪಿಸಲು ಪ್ರಾರಂಭಿಸಿತು.

ಹಿಂದುಗಳಿಗೆ ರಾವಸಾಹೇಬ, ರಾವಬಹಾದ್ದೂರ, ದಿವಾಣಬಹಾದ್ದೂರ ಎಂಬ ಪದವಿಗಳನ್ನೂ ಮುಸಲ್ಮಾನರಿಗೆ ಖಾನಸಾಹೇಬ, ಖಾನಬಹಾದ್ದೂರ ಎಂಬ ಪದವಿಗಳನ್ನೂ ಬ್ರಿಟಿಶ್ ಸರಕಾರವು ಕೊಡುತ್ತಿತ್ತು. ಪ್ರತಿವರ್ಷ ನೂತನ ವರ್ಷಾರಂಭದ ನಿಮಿತ್ತ ಅಥವಾ ಅರಸರ ಜನ್ಮದಿನ ಸಂದರ್ಭದಲ್ಲಿ ಇವಕ್ಕೂ ಹೆಚ್ಚಿನ ಪದವಿಗಳಾದ ಸರ್, ಸಿ. ಆಯ್. ಇ., ಎಂ. ಬಿ. ಈ. ಮೊದಲಾದ ಪದವಿಗಳನ್ನು ಕೊಡಲಾಗುತ್ತಿತ್ತು. ಆದರೆ ವಿದ್ವಾಂಸರಿಗಾಗಿ ಇವುಗಳಲ್ಲಿ ಒಂದು ಪದವಿಯೂ ಇರಲಿಲ್ಲ. ಅವರು ಗೌರವಾರ್ಹರಲ್ಲವೇನೊ ಎಂಬ ಪರಿಸ್ಥಿತಿಯಿತ್ತು. ರಾಜ್ಯಾಡಳಿತಕ್ಕೆ ಸಹಾಯ ಸಲ್ಲಿಸುವ ಭಾರತೀಯರ ಸಹಾಯದ ಮಾನದಂಡದಿಂದ ಪದವಿಗಳು ಕೊಡಲ್ಪಡುತ್ತಿದ್ದವು.

ಸರಕಾರ ತಾರತಮ್ಯ ಮಾಡುವದಿಲ್ಲ ಎಂದು ಕಾಣಿಸಿಕೊಡಲೆಂದು ಬ್ರಿಟಿಶ್ ಸರಕಾರವು

'ಅಮೃತ' ದ ಆಧಾರದಿಂದ

ಪೌರಸ್ತ್ಯ ಪಂಡಿತರಿಗೂ ಮಾನ ಸಲ್ಲಿಸುತ್ತದೆ ಎಂಬುದನ್ನು ತೋರಿಸಲೆಂದು ಮೊದಲು ಭಾರತದಲ್ಲಿ ಪ್ರಚಲಿತವಿದ್ದ "ಮಹಾಮಹೋಪಾಧ್ಯಾಯ" ಪದವಿಗಳನ್ನು ಕೊಡಲು ಆರಂಭಿಸಿತು. ಹಿಂದುಗಳಿಗೆ "ಮಹಾಮಹೋಪಾಧ್ಯಾಯ" ಕೊಡತೊಡಗಿದಂತೆ ಪಾರಸಿಗಳಿಗೆ "ದಸ್ತೂರ", ಮುಸಲ್ಮಾನರಿಗೆ "ಮೌಲವಿ" ಎಂಬ ಪದವಿಗಳನ್ನು ಕೊಡತೊಡಗಿದರು.

ಡಾ. ಭಾಂಡಾರಕರರಿಗೆ ಸರಕಾರವು ಈ ಪದವಿ ಕೊಡಮಾಡಿದಾಗ ಅವರು ಅದನ್ನು ನಿರಾಕರಿಸಿ "ಈ ಪದವಿಯನ್ನು ಹಳೆಯ ಪರಂಪರಾಗತ ಪದ್ಧತಿಯಂತೆ ಶಾಸ್ತ್ರಾಧ್ಯಯನ ಮಾಡಿದವರಿಗೆ ಮೀಸಲಾಗಿಡಬೇಕು" ಎಂದು ಹೇಳಿದರು. ಮೊದಲು ಈ ಪದವಿ ಸಿಗುತ್ತಿದ್ದುದು ಇಂಥವರಿಗೇ ಆಗಿತ್ತು.

ಆದರೆ ಈ ಬಗೆಯ ಶಾಸ್ತ್ರಾಧ್ಯಯನ ಮಾಡಿರದ ಆದರೆ ಸಂಸ್ಕೃತದಲ್ಲಿ ಪಾಂಡಿತ್ಯ ಪಡೆದ ಆಂಗ್ಲ ವಿದ್ಯಾ ವಿಭೂಷಿತರಿಗೂ "ಮಹಾಮಹೋಪಾಧ್ಯಾಯ" ಪದವಿ ಕೊಡಲ್ಪಟ್ಟಿತು. ಅಲಂಕಾರ ಶಾಸ್ತ್ರದಲ್ಲಿ ಸಂಶೋಧನೆ ಮಾಡಿದ ಮಹಾಮಹೋಪಾಧ್ಯಾಯ ಪಾಂಡುರಂಗ ವಾಮನ ಕಾಣೆಯವರು ಇದಕ್ಕೊಂದು ಉದಾಹರಣೆ. ಈ ಪದವಿಗೆ ಇವರು ಅರ್ಹರಾಗಿದ್ದರೆಂಬುದು ನಿರ್ವಿವಾದವಾದ ಮಾತು. ಆದರೆ ಅವರು ಪರಂಪರಾಗತವಾಗಿ ಶಾಸ್ತ್ರಾಭ್ಯಾಸ ಮಾಡಿರಲಿಲ್ಲ.

ಕರ್ನಾಟಕದಲ್ಲಿ ಮಹಾಮಹೋಪಾಧ್ಯಾಯ ಪದವಿ ಪಡೆದವರಲ್ಲಿ ಪ್ರಸಿದ್ಧರೆಂದರೆ ದಿ. ಆರ್. ನರಸಿಂಹಾಚಾರ್ಯರು; ಇವರು ಕನ್ನಡ ಸಾಹಿತ್ಯ ಚರಿತೆ, ಕವಿ ಚರಿತೆ ಮುಂತಾದುವನ್ನು ಬರೆದವರು. ದಿ. ಪಂಡಿತ ತಾರಾನಾಥರ ಪತ್ನಿ ದಿ. ಡಾ॥ ಸುಮತಿಬಾಯಿಯವರಿಗೂ ಮಹಾಮಹೋಪಾಧ್ಯಾಯರೆಂಬ ಪದವಿ ಇತ್ತು.

ಭಾರತಕ್ಕೆ ಸ್ವಾತಂತ್ರ್ಯ ದೊರೆತ ಬಳಿಕ ನಮ್ಮ ಸರಕಾರವು ಹಳೆಯ ಬಿರುದುಗಳನ್ನೆಲ್ಲ ರದ್ದುಪಡಿಸಿ "ಪದ್ಮಭೂಷಣ" ಮುಂತಾದ ಪ್ರಶಸ್ತಿಗಳನ್ನು ಕೊಡತೊಡಗಿದೆ. ಆದರೆ ಈ ಪ್ರಶಸ್ತಿಗಳಲ್ಲಿ ವಿದ್ವತ್ತಿನ ನಿದರ್ಶಕವಾದುದು ಒಂದೂ ಇಲ್ಲ.

ಕೆಲ ಶಂಕರಾಚಾರ್ಯ ಪೀಠಗಳು ಮಹಾಮಹೋಪಾಧ್ಯಾಯ ಪದವಿಗಳನ್ನು ಕೊಡುತ್ತಿರುವರಾದರೂ ಅವುಗಳಿಗೆ 'ರಾಜಮನ್ನಣೆ' ಯಿರುವದಿಲ್ಲ. ದೇವಾಲಯಗಳಲ್ಲಿಯ ಪ್ರವಚನಕಾರರಿಗೂ ಜನರು ಈ ಪದವಿ ಕೊಡತೊಡಗಿದ್ದಾರೆ. ಇದರಿಂದ ಈ ಪದವಿಯ ಮಹತಿಗೆ ಕುಂದುಂಟಾಗಿದೆ. ಕಾಯದೆಯಿಂದ ಇದನ್ನು ತಡೆಗಟ್ಟುವದು ಒಳ್ಳೆಯದಾದೀತು.

ಭಾರತದ ಹೊರಗೆ ಕೂಡ ಮಹಾಮಹೋಪಾಧ್ಯಾಯ ಪದವಿ ಪಡೆದ ಸಂಸ್ಕೃತ ಪಂಡಿತರೊಬ್ಬರಿದ್ದಾರೆ. ಬುದ್ಧ ಜಯಂತಿ ಉತ್ಸವಕ್ಕಾಗಿ ಜಾವಾದಿಂದ ಅಲ್ಲಿಯ ಮಹಾಮಹೋಪಾಧ್ಯಾಯ ಡಾ. ಪೋರ್ಬತಯಾರಕ ಎಂಬವರು ಬಂದಿದ್ದರು. ಇವರು ಜಾವಾದಲ್ಲಿರುವ ಓರ್ವರೇ ಓರ್ವ ಸಂಸ್ಕೃತ ಪಂಡಿತರಾಗಿದ್ದಾರೆ. ಅಲ್ಲಿ ಸಂಸ್ಕೃತ ಶಿಕ್ಷಣದ ಯಾವ ಬಗೆಯ ಅನುಕೂಲವಿರದಿದ್ದರೂ ಇವರು ಸಂಸ್ಕೃತದಲ್ಲಿ ಪ್ರಾವೀಣ್ಯ ಪಡೆದುದು ಕೌತುಕಾಸ್ಪದವಾದದ್ದು.

ಇವರು ೧೮೮೪ ರಲ್ಲಿ ಜಾವಾದ ಸೋಲಿ ನಗರದಲ್ಲಿ ಹುಟ್ಟಿದರು. ಇವರದು ಕುಲೀನ ಮನೆತನ. ತಾರುಣ್ಯಕ್ಕೆ ಬರುವ ಮೊದಲೇ ಇವರು ಜಾವಾದ ಪ್ರಾಚೀನ ಕವಿವಾಙ್ಮಯದ ಅಭ್ಯಾಸವನ್ನು ಮುಗಿಸಿದ್ದರು. ಈ ವಾಙ್ಮಯದ ತಳಹದಿ ಸಂಸ್ಕೃತ. ಜಾವಾದಲ್ಲಿ ಒಂದು ಕಾಲದಲ್ಲಿ ಸಂಸ್ಕೃತ ಭಾಷೆ ಪ್ರಚಲಿತವಿದ್ದಿರಬೇಕು ಎಂದು ಇವರಿಗೆ ಈ ಅಭ್ಯಾಸದಿಂದ ಅನಿಸಿತು. ಸಂಸ್ಕೃತವನ್ನು ಕಲಿಯಬೇಕೆಂಬ ಮನಸ್ಸಾಯಿತು.

ಅವರು ಜಕಾರ್ತಾದಲ್ಲಿರುತ್ತಿದ್ದ ಡಾ. ಕ್ರೋಮ ಎಂಬ ಡಚ್ ಸಂಸ್ಕೃತ ಪಂಡಿತರಲ್ಲಿ ಸಂಸ್ಕೃತ ಕಲಿತರು.

ಇಂದು ಜಾವಾದಲ್ಲಿಯ ಎರಡು ವಿಶ್ವವಿದ್ಯಾಲಯಗಳಲ್ಲಿ ೫೦೦ ವಿದ್ಯಾರ್ಥಿಗಳು ಮಹಾಮಹೋಪಾಧ್ಯಾಯ ಪೋರ್ಬತಯಾರಕರಿಂದ ಸಂಸ್ಕೃತ ಶಿಕ್ಷಣ ಪಡೆಯುತ್ತಿದ್ದಾರೆ.



**ಕೆಲವರು ಸಮಾಜದಲ್ಲಿ ತೂಕ ಹೆಚ್ಚಿಸಿಕೊಳ್ಳಲೆಂದು ಉಪವಾಸ ಹೂಡುತ್ತಾರೆ. ಆದರೆ ಇಲ್ಲೊಬ್ಬರು ತೂಕ ಕಡಿಮೆ ಮಾಡಿಕೊಳ್ಳಲು ಉಪವಾಸ ಮಾಡಿದರು.**

# ನನ್ನ ಉಪವಾಸ

'ಕಿರ್ಲೋಸ್ಕರ' ದಿಂದ

**ಪು. ಲ. ದೇಶಪಾಂಡೆ**

ಸುಖನಿವಾಸ ಚಾಳಿನಲ್ಲಿ ಯಾವದೂ ರಹಸ್ಯವಾಗುಳಿಯುವದಿಲ್ಲ. ಶ್ಯಾಮರಾವ ಕುಲಕರ್ಣಿಯವರು ಯಾವಾಗ ತಮ್ಮ ಮಗಳ ಜಾತಕವನ್ನು ಪೆಟ್ಟಿಗೆಯಿಂದ ತೆಗೆದರು, ಯಾವಾಗ ಕಿಸೆಯಲ್ಲಿ ಹಾಕಿಕೊಂಡರು ಮತ್ತು ಗೋವಿಂದರಾವ ಜೋಶಿಯವರ ಮನೆಗೆ ಯಾವಾಗ ಒಯ್ದರು ಎನ್ನುವ ಮಾತು ಅವರ ಪತ್ನಿಗೆ ತಿಳಿಯುವ ಮೊದಲೇ ನಮ್ಮ ಶ್ರೀಮತಿಯವರಿಗೆ ತಿಳಿದು ಹೋಯಿತು. ಚಾಳಿನ ಗವಯಿ ಶಾಂತಾರಾಮರಿಗೆ ಯಾವ ರಾಗದ 'ತಾನು' ಸರಿಯಾಗಿ ಬರುವದಿಲ್ಲ ಎಂಬ ಮಾತು "ಗಾಯನ ಪ್ರಾರಂಭವಾಯಿತು, ಗಾಯನ ಮುಗಿಯಿತು" ಎಂದಿಷ್ಟೇ ಗಾಯನದ ವಿಚಾರದಲ್ಲಿ ಜ್ಞಾನವುಳ್ಳ ಗುಂಡಣ್ಣನವರಿಗೆ ಕೂಡ ತಿಳಿದಿರುತ್ತದೆ. ಮಲ್ಲಮ್ಮನವರ ಕೈಬಳೆಗಳು ಒತ್ತೆ ಬಿದ್ದಿರುವ ಸಮಾಚಾರ ಒತ್ತೆ ಕಾಗದದ ಮೇಲಿನ ಮಸಿ ಆರುವ



ಮೊದಲೇ ಚಾಳಿನ ಸ್ತ್ರೀಯರ ಬಾಯಲ್ಲಿ ಓಡಾಡಿ ಹಳೆಯದಾಗಿರುತ್ತದೆ. ನ್ಯೂಗಜಕರ್ಣ ಫಾರ್ಮಸಿಯ ಒಡೆಯರ ಮಗಳು ಹೇಮಾಂಗಿನಿ ದ್ವಾರಕಾನಾಥ ಗುಪ್ತರ ಮಗನಿಗೆ ಬರೆದ ಪ್ರೇಮಪತ್ರವು ಆತನ ಕೈ ಸೇರುವ ಮೊದಲೇ ಕಾಶೀನಾಥರ ಮಗ ಆ ಪತ್ರದ ವಿಷಯನ್ನು ಬಾಯಿಪಾಠ ಮಾಡಿದ ಕವಿತೆಯಂತೆ ಇತರರೆದುರು ಸರ-ಸರ ಅಂದು ತೋರಿಸಿದ.

ನಿಜವಾಗಿಯೂ ನನ್ನ ಉಪವಾಸದ ಸಿರ್ಧಾರವನ್ನು ನಾನು ನನ್ನ ಮನಸ್ಸಿನ ವಿನಾ ಇನ್ನಾರಿಗೂ ಹೇಳಿರಲಿಲ್ಲ. ಆದರೆ ಉಪವಾಸ ಪ್ರಾರಂಭಿಸಿ ಇನ್ನೂ ನಾಲ್ಕು ತಾಸು ಕಳೆಯಿತೋ ಇಲ್ಲವೋ- ಸುರುವಾಗಿಬಿಟ್ಟಿತು ಕೋಲಾಹಲ.

"ಶಾಸ್ತ್ರಿಸಾಬ್, (ಚಾಳಿನವರು ಏನೂ ಕಾರಣವಿಲ್ಲದೆ ನನಗೆ ಶಾಸ್ತ್ರಿ ಎನ್ನುತ್ತಾರೆ. "ಶಾಸ್ತ್ರಿ"ಗಳ ಲಕ್ಷಣವೊಂದೂ ನನ್ನಲ್ಲಿಲ್ಲ. ನಾನೊಬ್ಬ ಟೆಲಿಫೋನ ಆಪರೇಟರ. ಬೂಟಪ್ಯಾಂಟ ಹಾಕುವದಿಲ್ಲವೆಂದ ಮಾತ್ರಕ್ಕೆ "ಶಾಸ್ತ್ರಿ" ಎಂದು ಕರೆಯಬೇಕೇನು!) ಸಾಲಾ, ನಿಮ್ದು ಏನ್ ಅಕ್ಕಲ್ ಕೆಟ್ಟಿದಾವೇನ್? ನೀವ್ ಏನ್ ತಿಳಕೊಂಡಿದಾವ್? ನಿಮ್ದು ಬಾಸ್ (Boss) ನೀವ್ ಫಾಸ್ಟ (ಉಪವಾಸ) ಮಾಡಿದಾವ್ ಅಂತ್ ಛುಟ್ಟಿ (ರಜಾ) ಕೊಡ್ತಿದಾವ್ ಕ್ಯಾ?" ಸೋಕಾಜಿ ಮಾರವಾಡಿಯವರು ಹೇಳಿದರು.

"ಅಲ್ಲರೀ ಶೇಡಜಿ. ನನ್ನದಷ್ಟು ಕೇಳಕೊಳ್ಳಿರಿ," ನಾಲ್ಕು ತಾಸುಗಳ ಉಪವಾಸದಿಂದ ಕ್ಷೀಣವಾದ ಸ್ವರದಲ್ಲಿ ನಾನು ಸೋಕಾಜಿಯವರಿಗೆ ವಿವರಣೆ ಕೊಡತೊಡಗಿದೆ.

ಅವರು ಕೇಳಬೇಕಲ್ಲ. "ಭಲೇ ಆದಮಿ, ಸಾಲಾ ಫಾಸ್ಟಿನಿಂದ ಏನ್ ಆಗ್ತಿದಾವ್‌ರೀ? ಛುಟ್ಟಿ ಬೇಕಾಗಿದಾವ್ ಕ್ಯಾ? ನಮ್ದು ಕಝಿನ್ ಡಾಕ್ಟರ ಅದೀದಾವ್. ಫಸ್ಟಕ್ಲಾಸ್ ಮೆಡಿಕಲ್ ಸರ್ಟಿಫಿಕೇಟ ಕೊಡಸ್ತಿದಾವ್. ಬೇಕಾದಷ್ಟು ರಜಾ ಸಿಗ್ತಿದಾವ್. ಈ ಸಾಲಾ ಉಪವಾಸ! ಛೀ ಛೀ. ಏಕದಂ ನಾಟ್ ನೆಸ್ಸಸರಿ. ಬಿಟ್ಟಬೀಡ್ ಶಾಸ್ತ್ರಿ ಸಾಬ್."

"ಆದರೆ ನನ್ನದಷ್ಟು . . ."

"ಅರೇ, ಕ್ಯಾ ಕೇಳ್ತಿದಾವರೇ? ಫಸ್ಟಕ್ಲಾಸ್ ಸಂಡೇ ಅದಿದಾವ್, ಗ್ರ್ಯಾಂಡ್ ಫೀಸ್ಟ ಹೊಡ್ದು ಸಾಲಾ ನಿದ್ದಿ ಮಾಡು. ಉಪವಾಸಾ ಗಿಪವಾಸಾ ಛೋಡ್‌ದೇವ್."

ಸುಮಾರು ಒಂದೂವರೆ ತಾಸಿನ ವರೆಗೆ ನನಗೆ ಬಾಯಿ ಬಿಡಲೂ ಅವಕಾಶವನ್ನೀಯದೆ ಸೋಕಾಜ ಬಡಬಡಿಸಿ ಹೋದ.

ಆ ಮೇಲೆ ಚಾಳಿನ ನಟಶಾರ್ದೂಲ ಗಿರಿಯಪ್ಪನವರು ಬಂದರು. ಅವರಂತೂ ನಾಟಕೀಯವಾಗಿ, "ನೀವು ತಿಳಿದವರು. ನಮ್ಮಂಥವರೇನು ಹೇಳಬೇಕು?" ಎನ್ನುವ ಧಾಟಿಯಲ್ಲಿ ಪ್ರಾರಂಭಿಸಿ ನನ್ನ ಬೆನ್ನಮೇಲೆ ಕೈಯಾಡಿಸುತ್ತ "ಶಾಸ್ತ್ರಿಗಳೇ, ನನ್ನ ಮಾತು ಕೇಳಿರಿ. ಎರಡು ತುತ್ತು ಊಟ ಮಾಡಿರಿ" ಎಂದರು.

"ಆದರೆ—"

"ಆದರೆ ಇಲ್ಲ, ಗೀದರೆ ಇಲ್ಲ. ನಾವಿಬ್ಬರೂ ಈ ಚಾಳಿನಲ್ಲಿ ಇಷ್ಟು ವರ್ಷ ಅಣ್ಣ ತಮ್ಮಂದಿರಂತೆ ಬಾಳಿದ್ದೇವೆ. ನನ್ನ ಹೆಂಡತಿ ಇದೇ ಈಗ ನೀವು ಉಪವಾಸ ಪ್ರಾರಂಭಿಸಿದ ಸುದ್ದಿ ತಿಳಿಸಿದಳು. ಊಟಕ್ಕೆ ಕೂತಿದ್ದವ ಹಾಗೆಯೆ ಎದ್ದು ಬಂದೆ. ಅಲ್ಲರೀ, ಶಾಸ್ತ್ರಿಗಳೇ, ನೀವು ಊಟ ಮಾಡದಿದ್ದರೆ ಇನ್ನಾರು ಊಟ ಮಾಡಬೇಕು? ನನ್ನ ಮಾತು ಕೇಳಿರಿ. ಕುಲಕರ್ಣಿಯವರ ಮಗನ ಮುಂಜಿಯ ನೆನಪು ಮಾಡಿಕೊಳ್ಳಿರಿ. ಅಂದು ಐವತ್ತೈದು ಜಿಲೇಬಿ ತಿನ್ನಲಿಲ್ಲವೇ ನೀವು! (ಈ ಮಾತನ್ನು ಅನ್ನುವಾಗ ಗಿರಿಯಪ್ಪನವರ ಕಂಠ ತುಂಬಿಬಂತು. ಅದನ್ನು ಕಂಡು ಬಾಗಿಲ ಮರೆಯಲ್ಲಿ ಕುಳಿತು ನಮ್ಮ ಸಂವಾದವನ್ನಾಲಿಸುತ್ತಿದ್ದ ನನ್ನ ಶ್ರೀಮತಿ ಸೆರಗಿನಿಂದ ತನ್ನ ಕಣ್ಣೊರಿಸಿಕೊಂಡಳು.) ಅದೇನಿಲ್ಲ. ನೀವು ಊಟ ಮಾಡಲೇಬೇಕು. ಅಲ್ಲರೀ, ಆ ಭೀಮಣ್ಣನ ಮಾತನ್ನು ಇಷ್ಟೊಂದು ಮನಸ್ಸಿಗೆ ಹಚ್ಚಿಕೊಳ್ಳುವದೆಂದರೇನು?"

"ಭೀಮಣ್ಣನ ಮಾತು! ಏನು...." ಎಂದು ನಾನನ್ನುವಷ್ಟರಲ್ಲಿ ಗಿರಿಯಪ್ಪನವರು "ಭೀಮಣ್ಣನ ಮಾತು!" ಎಂದು ಉಸಿರುಗರೆದರು.

"ತಿಳಿದದರ್ರೀ ನನಗೆ, ತಿಳಿದದೆ. ಅಲ್ಲರೀ, ಯಃಕಶ್ಚಿತ ತಗಡಿನ ಡಬ್ಬಿಯ ಕಳವು ಎಂದರೆ ಏನು ದೊಡ್ಡ ಮಾತು? ಸಾಯುವಾಗ ನಾವೆಲ್ಲ ಈ ವಸ್ತುಗಳನ್ನು ನಮ್ಮ ಸಂಗಡ ಒಯ್ಯುತ್ತೇವೆಯೆ? ಯಾರೂ ಸಂಗಡ ಬಾಹೋರಿಲ್ಲ, ಎಂದು ದಾಸರು ಹಾಡಿಲ್ಲವೇ?"

ತಗಡಿನ ಡಬ್ಬಿ! ಕಳವು! ನನಗೆ ಇದೇನು ಗಾಡಬಂಗಾಲಿ ಎಂದು ತಿಳಿಯಲಿಲ್ಲ.

"ಶಾಸ್ತ್ರಿಗಳೇ, ನೀವೇನೂ ಮನಸ್ಸಿಗೆ ಹಚ್ಚಿಕೊಳ್ಳಬೇಡಿರಿ. ನಿಮ್ಮ ಮೇಲೆ ಕಳವಿನ ಅರೋಪವೆಂದರೇನು? ಶುದ್ಧ ಹುಡುಗಾಟಿಕೆ. ಭೀಮಣ್ಣನವರಿಗೆ ಬೇಕಾದರೆ ಒಂದರ ಬದಲು ನೂರು ತಗಡಿನ ಡಬ್ಬಿಗಳನ್ನು ನಾನು ತಂದುಕೊಡುತ್ತೇನೆ. ನೀವು ಮಾತ್ರ ಉಪವಾಸವನ್ನು ಬಿಡಿರಿ. ಅನ್ನಬ್ರಹ್ಮನ ಉಪೇಕ್ಷೆ ಮಾಡಬಾರದು ಹಾಗೆ."

"ಆದರೆ ನನ್ನದಷ್ಟು ಕೇಳುತ್ತೀರೇನು?"

"ನನಗೆ ಕೇಳುವದೂ ಹೇಳುವದೂ ಬೇಕಾಗಿಲ್ಲ. ನೀವು ಹೊಟ್ಟೆತುಂಬ ಉಂಡು ತೇಗುವದನ್ನು ನೋಡಬೇಕಾಗಿದೆ. ಊಟ ಮಾಡಿರಿ. ಶಾಸ್ತ್ರಿಗಳೇ, ಉಪವಾಸ ಮಾಡಿ ನೀವು ದೇಹ ದಂಡಿಸುವದನ್ನು ನಾನು ಈ ಕಣ್ಣುಗಳಿಂದ ನೋಡಲಾರೆ. ನಿಮಗೇನಾದರೂ ಆದರೆ.."

ಗಿರಿಯಪ್ಪನವರ ದುಃಖಾವೇಗವನ್ನು ತಡೆಯುವದು ನನಗೆ ಸಾಧ್ಯವಾಗಲಿಲ್ಲ. ಕೊನೆಗೆ ಅವರ ರಾವಣನ ಪಾತ್ರದ ವಿಚಾರವನ್ನು ಎತ್ತಿದಾಗ ಅವರು ನಾಲ್ಕು ಮಾತು ಆ ವಿಷಯವಾಗಿ ಮಾತಾಡಿದರು. ಆದರೆ ಮತ್ತೆ ಗಾಡಿ ಮೊದಲಿನ ಹಳಿಗೇ ಬಂತು. "ಬಿಡಿರಿ. ಹೀಗೆ ಮಾಡಬೇಡಿರಿ ಶಾಸ್ತ್ರಿಗಳೇ."

ಏನು ಮಾಡಬೇಕೆಂದು ನನಗೆ ತಿಳಿಯಲಿಲ್ಲ. ನಾನು ಕಣ್ಣು ಮುಚ್ಚಿಕೊಂಡು ಸ್ವಸ್ಥ ಕುಳಿತೆ. ಗಿರಿಯಪ್ಪನವರು ಸುಮಾರು ಮುಕ್ಕಾಲು ತಾಸಿನವರೆಗೆ ನನ್ನದೇನನ್ನೂ ಕೇಳಿಕೊಳ್ಳದೆ ಬಡಬಡಿಸಿದರು. ಅವರ ಸ್ವರ ಮೇಲೇರಿ ಆಕಾಶಕ್ಕೆ ಮುಟ್ಟಿ ಮತ್ತೆ ಕೆಳಗೆ ಪಾತಾಳಕ್ಕಿಳಿಯುತ್ತಿತ್ತು. ಅವರ ಧ್ವನಿ ನನ್ನ ಉಪವಾಸದ ವಾರ್ತೆಯನ್ನು ಇಡೀ ಚಾಳಿಗೆ ಮುಟ್ಟಿಸಿತು. ಚಾಳಿನ ಜನ ಒಬ್ಬೊಬ್ಬರಾಗಿ ಬರತೊಡಗಿದರು. ನನ್ನ ಮನೆ ತುಂಬಿಹೋಯಿತು.

ನಾನು ಮಾತಾಡಲು ಬಾಯಿ ತೆರೆದೊಡನೆ "ಛೆ! ಛೆ! ನೀವು ಮಾತಾಡಬೇಡಿರಿ, ನಿಮಗೆ ಆಯಾಸವಾಗುತ್ತದೆ" ಎಂದು ಎಲ್ಲರೂ ಒಟ್ಟಿಗೆ ಅನ್ನತೊಡಗಿದರು.

"ಯಾರಾದರೂ ಉಪವಾಸ ಮಾಡಿದ ಸುದ್ದಿ ಕೇಳಿದರೆ ನನ್ನ ಎದೆ ಡಬಡಬ ಹೊಡೆದುಕೊಳ್ಳುತ್ತದೆ. ನಮ್ಮ ಊರಿನಲ್ಲಿ ಒಬ್ಬ ಉಪವಾಸ ಮಾಡಿ ಸತ್ತದ್ದನ್ನು ನಾನು ಕಣ್ಣಾರೆ ಕಂಡಿದ್ದೇನೆ. ಶಾಸ್ತ್ರಿಗಳೇ, ಉಪವಾಸ ಮಾಡಬೇಡಿರಿ. ನನಗೆ ಸಂಕಟವಾಗುತ್ತದೆ" ಹನುಮಂತಪ್ಪನವರು ಹೇಳಿದರು.

ನಾನು ಸ್ವಸ್ಥ ಕಣ್ಣುಮುಚ್ಚಿ ಬಿದ್ದುಕೊಂಡಿದ್ದೆ. ನಾನು ಇನ್ನೇನನ್ನೂ ಮಾಡಲಾರದವನಾಗಿದ್ದೆ. ನೆರೆದ ಜನರು ನಾನಾ ವಿಧವಾದ ಮುಖಮುದ್ರೆಗಳನ್ನು ಧರಿಸಿ ನನ್ನನ್ನು ನೋಡುತ್ತ ನಿಂತಿದ್ದರು.

"ವಿಷ್ಣೂನ ಅಪ್ಪ ಸಾಯುತ್ತಾನೇನೋ, ರಾಮು?" ಯಾವನೋ ಹುಡುಗ ಕೇಳಿದ್ದು ನನಗೆ ಕೇಳಿಸಿತು.

ಹೊಸದಾಗಿ ಬಂದ ಪ್ರತಿಯೊಬ್ಬನೂ "ಶಾಸ್ತ್ರಿಗಳು ಸ್ವಸ್ಥ ಮಲಗಿಕೊಳ್ಳಲಿ" ಎಂದು ತಾನೇ ಗದ್ದಲಮಾಡುತ್ತಿದ್ದ. ನಾನು ತಂದಿದ್ದ ಬೀಡಿ ಕಟ್ಟಿನಲ್ಲಿ ಒಂದನ್ನೂ ನನಗಾಗಿ ಉಳಿಸಲಿಲ್ಲ ಈ ಸಹಾನುಭೂತಿ ಪ್ರದರ್ಶಕರು. ನಾನು ಮಾತಾಡಲು ಬಾಯಿತೆರೆದರೆ "ಛೆ! ಛೆ! ಆಯಾಸ ಮಾಡಿಕೊಳ್ಳಬೇಡಿ. ಸ್ವಸ್ಥ ಬಿದ್ದುಕೊಳ್ಳಿ" ಎನ್ನುತ್ತಿದ್ದರು.

ನಾನು ತಡೆಯಲಾರದೆ ಕೂಗಿದೆ: "ಕೇಳಿರಿ ನಾನು ಉಪವಾಸ ಪ್ರಾರಂಭಿಸಿರುವದು. . . ."

"ಬಿಡಿರಿ. ಬಿಡಿರಿ. ಉಪವಾಸ ಬಿಡಿರಿ"

ಹತ್ತಿಪ್ಪತ್ತು ಕಂಠಗಳು ಒಮ್ಮೆಲೆ ಅಬ್ಬರಿಸಿದವು.

ಒಳಗೆ ನೆರೆದ ಸ್ತ್ರೀಯರಿಗೆ ನನ್ನ ಸೌಭಾಗ್ಯವತಿ ಏನೇನು ಹೇಳುತ್ತಿದ್ದಳೊ ಏನೋ? ಹೊರಬಿದ್ದು ಹೋಗುವಾಗ ಪ್ರತಿಯೊಬ್ಬಳೂ "ಇದೇ ಈತನ ಕೊನೆಯ ದರ್ಶನ'' ಎನ್ನುವಂತೆ ನನ್ನ ಕಡೆ ನೋಡಿ ಹೋಗುತ್ತಿದ್ದಳು. ಸ್ತ್ರೀಯರು ನನ್ನನ್ನು ಕಣ್ಣೆತ್ತಿ ನೋಡಿದ್ದರ ಅನುಭವ ನನಗೆ ಜನ್ಮದಲ್ಲಿ ಇದೀಗ ಮೊದಲನೆಯ ಸಲ ಆಗತೊಡಗಿತ್ತು.

ಮೊಸಳೆಯ ಬಾಯಿಗೆ ಸಿಕ್ಕು ಒದ್ದಾಡುತ್ತಿದ್ದ ಗಜೇಂದ್ರನ ಬಿಡುಗಡೆಗಾಗಿ ಮಹಾವಿಷ್ಣು ಧಾವಿಸಿ ಬಂದಂತೆ ತಬಲಜಿ ವೆಂಕಪ್ಪನವರು ತಮ್ಮ ಮಧುರ ಕಂಠದ ಪತ್ನಿ ಸುಶೀಲಾಬಾಯಿಯೊಡನೆ ಬಂದರು.

"ಶಾಸ್ತ್ರಿಗಳೇ, ಒಂದು ದೇವರ ನಾಮ ಹಾಡುವ ಇಚ್ಛೆಯಾಗಿದೆ" ಎಂದು ವೆಂಕಪ್ಪನವರು ನನ್ನ ಮಂಚದ ಕಾಲಿನ ಹತ್ತರ ಕುಳಿತರು. ತಬಲಾ ಬಡಿದರು. ಸುಶೀಲಾಬಾಯಿ "ಯಾರು ಕೈ ಬಿಟ್ಟರು ನೀಯೆನ್ನ ಬಿಡದಿರೊ ನಾರಾಯಣಾ ನಾರಾಯಣಾ" ಎಂದು ಪ್ರಾರಂಭಿಸಿದರು. ಅವರು ಪುರಂದರ ವಿಠ್ಠಲಾ ಎಂದು ಉಚ್ಚರಿಸುವ ಹೊತ್ತಿಗೆ ನನ್ನ ಮನೆ ನಿರ್ಜನವಾಗಿತ್ತು. ಅಂದರೆ ಮಂಚದ ಮೇಲೆ ನಾನು, ಒಳಗೆ ನನ್ನ ಅರ್ಧಾಂಗಿ, ಮಂಚದ ಹತ್ತರ ನೆಲದ ಮೇಲೆ ವೆಂಕಪ್ಪ ಮತ್ತು ಸುಶೀಲಾಬಾಯಿ ಇಷ್ಟೇ ಜನ ಉಳಿದಿದ್ದೆವು. ಸಂಗೀತದ ಅದ್ಭುತ ಶಕ್ತಿಯ ವಿಚಾರವನ್ನು ನಾನು ಪ್ರತ್ಯಕ್ಷ ಕಂಡೆ.

ದೇವರ ನಾಮ ಪಠನ ಎಷ್ಟೊತ್ತಿಗೆ ಮುಗಿಯಿತೊ ನನಗೆ ಗೊತ್ತಾಗಲಿಲ್ಲ. ನಾನು ಕಣ್ಣು ಬಿಟ್ಟಾಗ ರಾತ್ರಿ ೧೦॥ ಗಂಟೆಯಾಗಿತ್ತು.

ಮೊದಲನೆಯ ದಿನದ ಉಪವಾಸದಲ್ಲಿ ನಾನು ಕೇವಲ ಕಾಫಿ, ಬಾಳೆಹಣ್ಣು, ಎರಡು ಮೋಸಂಬಿ, ಶೇಂಗಾ, ಶೇಂಗಾದಿಂದ ಪಿತ್ಥ ಕೆಣಕಬಾರದೆಂದು ನಿಂಬೆ ಹಣ್ಣಿನ ಪಾನಕ, ಕಾಫಿಯಿಂದ ಮಲಬದ್ಧತೆಯಾಗಬಾರದೆಂದು ಹಾಲು ಇಷ್ಟನ್ನು ಮಾತ್ರ ಸೇವಿಸಿದೆ.

ಎರಡನೆಯ ದಿನ ಮುಂಜಾನೆ ಚಾಳಿನ ಹಸ್ತ ಪತ್ರಿಕೆ "ಚಾಳಿನ ನಾಡಿ"ಯ ಸಂಪಾದಕರಾದ ಸಾಹಿತಿ ಚಂದ್ರಶೇಖರರು ನನ್ನ ಬಳಿಗೆ ಬಂದು ಅಂದಿನ ಸಂಚಿಕೆಯನ್ನು ನನ್ನ ಕೈಗಿತ್ತರು.

"ಶಾಸ್ತ್ರಿಗಳೇ, ಉಪವಾಸ ವಿಶೇಷಾಂಕ" ಎಂದು ಚಂದ್ರಶೇಖರರು ಹೇಳಿದರು. "ಚಾಳಿನ ನಾಡಿ"ಯ ಸಾದಾ ಅಂಕ ಇದು ವರೆಗೂ ಹೊರಟೇ ಇಲ್ಲ. ಇಂದು ಸ್ವಚ್ಛತಾ ವಿಶೇಷಾಂಕ, ನಾಳೆ ಗಣಪತಿ ಉತ್ಸವಾಂಕ, ನಾಡದು ವಿವಾಹ ಮಹೋತ್ಸವಾಂಕ ಹೀಗೆ ಪ್ರತಿನಿತ್ಯವೂ ವಿಶೇಷಾಂಕಗಳೇ ಹೊರಡುತ್ತಿದ್ದವು.

ಉಪವಾಸ ವಿಶೇಷಾಂಕದ ಮೊದಲನೆಯ ಪುಟದಲ್ಲೆ "ಚಾಳಿನಲ್ಲಿ ಐಕ್ಯ ಸಾಧಿಸಲು ಶಾಸ್ತ್ರಿಗಳ ಆಮರಣ ಉಪವಾಸ" ಎಂಬ ದಪ್ಪಕ್ಷರಗಳ ತಲೆ ಬರಹ ಕಂಡು ನಾನು ದಿಙ್ಮೂಢನಾದೆ. ಹದಿನೆಂಟು ತಾಸುಗಳ ಉಪವಾಸದ ನಂತರ ನನ್ನಲ್ಲಿ ಉಳಿದಿದ್ದ ಶಕ್ತಿಯೆಲ್ಲವನ್ನೂ ಒಟ್ಟುಗೂಡಿಸಿ "ಸಂಪಾದಕರೇ" ಎಂದು ಕೂಗಿದೆ.

ಇಂಥ ಕೂಗನ್ನು ನಿತ್ಯವೂ ಕೇಳಿ ರೂಢಿಯಾಗಿದ್ದ ಚಂದ್ರಶೇಖರರು ಶಾಂತಚಿತ್ತದಿಂದ "ಏನು ?'' ಎಂದು ಕೇಳಿದರು.

"ಚಾಳಿನ ಐಕ್ಯಕ್ಕಾಗಿ ನಾನು ಉಪವಾಸ ಮಾಡುತ್ತಿರುವೆನೆಂದು ಹೇಳಿದ ಕತ್ತೆ ಯಾರು?"

"ಎಲ್ಲರೂ."

"ಅವರೆಲ್ಲ ಶುದ್ಧ ಕತ್ತೆಗಳು."

"ಅಂದರೆ, ಚಾಳಿನಲ್ಲಿಯ ಜಾತೀಯತೆಯ ವಿರುದ್ಧ ನೀವು ಉಪವಾಸಶಸ್ತ್ರ ಎತ್ತಿದ್ದೀರೆಂದು ಒಬ್ಬರು, ನಿಮ್ಮ ರಜೆ ಮಂಜೂರಾಗಲಿಲ್ಲವೆಂದು ಉಪವಾಸ ಮಾಡಿದ್ದೀರೆಂದು ಇನ್ನೊಬ್ಬರು, ಭೀಮಣ್ಣನವರ ತಗಡಿನ ಡಬ್ಬಿ ಕದ್ದ ಆರೋಪ ನಿಮ್ಮ ಮೇಲೆ ಬಂದದ್ದರಿಂದ..."

"ಹೀಗೆ ಹೇಳಿದವರೆಲ್ಲ ಹೇಳಿ ಮಾಡಿಸಿದ ಮೂರ್ಖರು. ನಾನು ಉಪವಾಸ . . . ."

"ಸರಿ. ನಾಳಿನ ಸಂಚಿಕೆಯಲ್ಲಿ ನಿಮ್ಮ ವಿವರಣೆ ಪ್ರಕಟಿಸುತ್ತೇನೆ."

"ಏನೂ ಅಗತ್ಯವಿಲ್ಲ. ನಾನು ಉಪವಾಸ

ಮಾಡಿದ್ದು ನನ್ನ ತೂಕ ಕಡಿಮೆ ಮಾಡಿಕೊಳ್ಳುವದಕ್ಕಾಗಿ."

"ಅಂ!"

"ಹೌದು."

"ಆದರೆ ಸಮಾಜದಲ್ಲಿ ತಮ್ಮ ತೂಕ ಹೆಚ್ಚಿಸಿಕೊಳ್ಳಲು ಜನ ಉಪವಾಸ ಮಾಡುತ್ತಾರೆಂದು ನಾನು ಕೇಳಿದ್ದೆ. ಹೀಗಿದ್ದು....."

"ಎರಡನೆಯವರ ಮಾತು ನನಗೆ ಬೇಡ. ಇದನ್ನೋದಿ" ಎಂದು ಒಂದು ಕಾರ್ಡನ್ನು ಚಂದ್ರಶೇಖರರ ಕೈಗೆ ನಾನು ಕೊಟ್ಟೆ.

"ನೀವು ಬಹಳ ಒಂದು ಬುದ್ಧಿವಂತರು" ಚಂದ್ರಶೇಖರರು ಓದತೊಡಗಿದರು.

"ಅದನ್ನೇನು ಓದುತ್ತೀರಿ ನಿಮ್ಮ ತಲೆ. ತೂಕ ಓದಿರಿ."

"೧೩ ಸ್ಟೋನ್ ೧೩ ಪೌಂಡು."

"ಅಂದರೆ ೧೮೧ ಪೌಂಡು ತಿಳಿಯಿತೆ? ನನ್ನ ತೂಕ ೧೮೧ ಪೌಂಡು. ಇದರಿಂದ ಮುಂದೆ ನನಗೆ ಮಧುಮೇಹ ಆಗಬಹುದು. ಬ್ಲಡ್ ಪ್ರೆಶರ್ ಆಗಬಹುದು, ಹಾರ್ಟ ಟ್ರಬಲ್ ಆಗಬಹುದು. ಒಮ್ಮಿಂದೊಮ್ಮೆ ನಾನು ಸತ್ತರೆ ಆಗ ಈ ಚಾಳು ನನ್ನ ಸಹಾಯಕ್ಕೆ ಬರುತ್ತದೆಯೆ?"

"ಯಾಕಿಲ್ಲ? ಗೌಡರ ಮುದುಕಿ ಸತ್ತಾಗ..."

"ನಡಿ ಇಲ್ಲಿಂದ."

"ಸಿಟ್ಟಾಗಬೇಡಿ ಶಾಸ್ತ್ರಿಗಳೇ, ಮೊದಲೇ ನೀವು ಜನರಿಗೆ ವಿವರಿಸಿ ಯಾಕೆ ಹೇಳಲಿಲ್ಲ?"

"ಕೇಳುವ ತಾಳ್ಮೆ ಇರಬೇಕಲ್ಲ ಮಕ್ಕಳಿಗೆ?"

ಅಂತೂ ನನ್ನ ಉಪವಾಸದ ನಿಜ ಕಾರಣ ಚಾಳಿಗೆ ತಿಳಿಯಿತು. "ಇಲ್ಲದ ಉಪದ್ವ್ಯಾಪ", "ಅಂಗೈ ತೋರಿಸಿ ಅವಲಕ್ಷಣ ಹೇಳಿಸಿಕೊಳ್ಳುತ್ತಾನೆ", "ಧೈರ್ಯ ಸಾಲಲಿಲ್ಲ, ತೂಕದ ನೆವ ಬಂತು" ಎಂಬಿತ್ಯಾದಿ ಟೀಕೆಗಳು ಬಂದವು.

ಎರಡು ತಿಂಗಳಲ್ಲಿ ಐವತ್ತು ಪೌಂಡು ತೂಕ ಕಡಿಮೆ ಮಾಡಿ ತೋರಿಸಿದರೇ ನಾನು ಮೀಸೆ ಹೊತ್ತ ಗಂಡಸು ಎಂದು ಹೆಂಡತಿಯ ಎದುರು ಭೀಷ್ಮಪ್ರತಿಜ್ಞೆ ಮಾಡಿ ನಾನು ಆಹಾರಶಾಸ್ತ್ರದ ಪುಸ್ತಕಗಳನ್ನು ಮಗಚಿ ಹಾಕತೊಡಗಿದೆ. ಯಾವದನ್ನೇ ತಾಟಿಗೆ ಬಡಿಸಲಿ, ಅದರಲ್ಲಿ ನನಗೆ ಕೇವಲ "ಕ್ಯಾಲರಿ"ಗಳೇ ಕಾಣತೊಡಗಿದವು.

ತೂಕ ಕಡಿಮೆ ಮಾಡುವ ಶಾಸ್ತ್ರದಲ್ಲಿ ಪಾರಂಗತರಾದ ಹತ್ತಾರು ಜನರು ನನಗೆ ನಿತ್ಯ ಭೆಟ್ಟಿಯಾಗತೊಡಗಿದರು. ನನ್ನ ಉಪವಾಸದ ಉಪಹಾಸ ಗೈದ ನನ್ನ ಚಾಳಿನವರು ಕೂಡ ನನಗೆ "ಪಥ್ಯ"ದ ಸಲಹೆ ಕೊಡತೊಡಗಿದರು.

"ಸಾಲಾ ಬಟಾಟಾ ಬಿಟ್ಟಬೇಡ" ಸೋಕಾಜಿ.

"ಅನ್ನ ವರ್ಜ್ಯ" ಗಿರಿಯಪ್ಪನವರು.

"ಎಲ್ಲಾ ಸುಳ್ಳರೀ. ಮುಖ್ಯ ಸಕ್ಕರೆ ಎಂಬ ಶಬ್ದವನ್ನು ಕೂಡ ಸನಿಹಕ್ಕೆ ಬರಗೊಡಬಾರದು" ಮತ್ತೊಬ್ಬ ಮಹಾಶಯರು.

"ಉಪ್ಪು ಬಿಡಿರಿ."

"ತುಪ್ಪ-ಬೆಣ್ಣೆಗೆ ಬಹಿಷ್ಕಾರ ಹಾಕಿರಿ."

"ಬೀಡಿ ಬೇಡ."

"ಕರಿದ ಪದಾರ್ಥಕೆ ಸಲಾಮು ಹೊಡೆಯಿರಿ."

ಎಲ್ಲಕ್ಕೂ ಕಳಸವಿಟ್ಟಂತೆ ಒಬ್ಬರು "ಶಾಸ್ತ್ರಿಗಳೇ, ನೌಕರಿ ಬಿಟ್ಟುಬಿಡಿರಿ. ಅಂದರೆ ನಿಮ್ಮ ತೂಕ ಕಡಿಮೆಯಾಗುವದು" ಎಂದರು.

"ಏನಂತೀರಿ ನೀವು?" ನಾನು ಕೇಳಿದೆ.

"ಖರೇ ಅಂತೇನಿ. ದಿನವಿಡೀ ಖುರ್ಚಿಯಲ್ಲಿ ಕುಳಿತು ತೂಕ ಹೆಚ್ಚಾಗುತ್ತದೆ. ಖುರ್ಚಿ ನೌಕರಿ ಬಿಟ್ಟು ಅಡ್ಡಾಡುವ ನೌಕರಿ ಹಿಡಿಯಿರಿ."

ಹೆಂಡತಿಯನ್ನು ಬಿಡಿರಿ ಎಂದು ಮಾತ್ರ ಪುಣ್ಯಕ್ಕೆ ಯಾರೂ ಹೇಳಲಿಲ್ಲ.

ನಾನು ಮಾತ್ರ ನನ್ನ ವಿಚಾರದಂತೆಯೆ ನಡೆದುಕೊಳ್ಳಲು ನಿರ್ಧರಿಸಿ ಪಥ್ಯ ಪ್ರಾರಂಭಿಸಿದೆ.

ಸಕ್ಕರೆಯಲ್ಲಿ ಬಹಳ ಕ್ಯಾಲರಿಗಳಿರುವವೆಂದು ಮೊದಲು ಸಕ್ಕರೆ ಶೂನ್ಯ ಚಹ ಕುಡಿಯಲು ಪ್ರಾರಂಭಿಸಿದೆ. ಮನೆಯಲ್ಲಿ "ಸಕ್ಕರೆಗೆ ಪ್ರವೇಶವಿಲ್ಲ" ಬೋರ್ಡು ಹಚ್ಚಿದೆ. ಅನ್ನವನ್ನು ಪೂರ್ಣ ಬಿಡುವದು ಕಠಿಣವಾದ್ದರಿಂದ ಮೊದಲಿನ ಸಾರು ಅನ್ನ, ಕೊನೆಯ ಮೊಸರು ಅನ್ನ ಇಟ್ಟುಕೊಂಡು ನಡುವಿನ ಅನ್ನ ಬಿಟ್ಟೆ.

ಮೊದಲನೆ ದಿನ ನಿರ್ವಿಘ್ನವಾಗಿ ಸಾಗಿತು.

ಎರಡನೆಯ ದಿನ ಒಂದು ಚಹ ಪಾರ್ಟಿಗೆ ಹೋಗುವ ಹೊತ್ತು ಬಂತು. ನನ್ನ ನಿರ್ಧಾರ ತಿಳಿಸಿದೆ. ಆದರೆ ನನ್ನ ಸ್ನೇಹಿತರು, "ತಿನ್ನುವದಕ್ಕೂ ತೂಕಕ್ಕೂ ಎಲ್ಲಿಯ ಸಂಬಂಧ ಬಿಡಿರಿ" ಎಂದರು. ಅವರ ವಾದರ ಪ್ರಭಾವವೊ, ಎದುರಿನ ತಿಂಡಿಯ ಮೋಹವೊ ಅಂತೂ ನನ್ನ ಪ್ರತಿಜ್ಞಾಭಂಗವಾಯಿತು.

ನನ್ನ ಆಫೀಸಿನ ಸ್ನೇಹಿತರು "ಓಡು, ವ್ಯಾಯಾಮಮಾಡು"ಎಂದಿತ್ಯಾದಿ ಸಲಹೆಇತ್ತರು.

ನನ್ನ ಸೌಭಾಗ್ಯವತಿ ಮಾತ್ರ ನನ್ನ 'ಪಥ್ಯದ' ಬಗ್ಗೆ ವಿಶೇಷ ಆಸ್ಥೆ ವಹಿಸಿದ್ದಳು. ಪಡುವಲಕಾಯಿ, ಬೆಂಡೆಕಾಯಿ, ಚವಳಿಕಾಯಿಗಳನ್ನು ಬರೇ ಬೇಯಿಸಿ ಉಪ್ಪು ಖಾರ ಹಾಕದೆ ನನಗೆ ಬಡಿಸತೊಡಗಿದಳು.

ಸಕ್ಕರೆಯಿಲ್ಲದ ಚಹ ಬಹಳ ಕಹಿಯಾಗಿರುತ್ತದೆ ಎಂಬ ಅನುಭವ ಬಂದದ್ದು ನಾಲ್ಕೈದು ದಿನಗಳ ಮೇಲೆ. ಮೊದಲನೆ ದಿನ ಕಹಿಯಾಗಲಿಲ್ಲ, ಇಂದು ಹೀಗೇಕೆ? ಎಂದು ಅರ್ಧಾಂಗಿಯನ್ನು ಕೇಳಿದಾಗ "ಇದ್ದಷ್ಟು ಸಕ್ಕರೆ ತೀರುವವರೆಗೆ ಕಹಿ ಚಹ ಏಕೆ ಕುಡಿಸಲಿ ಎಂದು ಬಿಟ್ಟಿದ್ದೆ" ಎಂದಳು.

"ಅಂ! ಅಂದರೆ ಎಷ್ಟು ಲಕ್ಷ ಕ್ಯಾಲರಿಗಳು ನನ್ನ ಹೊಟ್ಟೆಯಲ್ಲಿ ಹೋದವೋ ಏನೋ! ನನ್ನ ತೂಕ ಏನು ಕಡಿಮೆಯಾಗುತ್ತದೆ ಮಣ್ಣು, ಹೀಗಾದರೆ?"

"ಆಗದಿದ್ದರೆ ಇಲ್ಲ. ಯಾರ ಮನೆಯಿಂದಲೂ ಕದ್ದುತಂದು ನೀವೇನೂ ತಿನ್ನುವದಿಲ್ಲ" ಎಂದೆಂದು ಅವಳು ಮಕ್ಕಳಿಗೆಂದು ಮಾಡಿದ್ದ ಉಂಡೆಯೊಂದನ್ನು ನನ್ನ ಎದುರು ಇಟ್ಟಳು.

ಕಹಿ ಚಹ ಕುಡಿದರೂ ಉಂಡೆಯ ರೂಪದಲ್ಲಿ ಎಷ್ಟೋ ಕ್ಯಾಲರಿಗಳು ನನ್ನ ಹೊಟ್ಟೆ ಸೇರಿದವು.

ನೆರೆಮನೆಯ ಶ್ಯಾಮರಾಯ ನನ್ನನ್ನು ಒಂದು ದಿನ ಬದಿಗೆ ಕರೆದು, "ಅಲ್ಲರೀ, ಇದನ್ನೇನು ಕೇಳುತ್ತೇನೆ? ನಿಮ್ಮ ಮನೆಯಲ್ಲಿ ಪಥ್ಯದ ಅಡಿಗೆಯಂತೆ. ಇದರಿಂದೆಲ್ಲಾ ತೂಕ ಕಡಿಮೆಯಾಗುವದೇನು? ಅದಕೆ ನಿಗ್ರಹ, ಮನೋನಿಗ್ರಹ ಬೇಕು. ನೀವು ಮಾತಾಡುವದನ್ನು ಬಿಡಿರಿ."

"ಮಾತಾಡುವದಕ್ಕೂ . . . "

"ಅದೇ: ನಿಮಗೆ ಬುದ್ಧಿಯಿಲ್ಲೆನ್ನುವದು. ಅದು ಸಂಯಮವನ್ನೂ ಕಲಿಸುತ್ತದೆ. . . ."

"ಅಲ್ಲರೀ, ನಾನು ಟೆಲಿಫೋನ ಆಪರೇಟರ. ಇಡೀ ದಿನ ಮಾತಾಡಬೇಕಾಗುತ್ತದೆ."

"ನಿಮ್ಮ ತೂಕ ಕಡಿಮೆಯಾಗುವದಿಲ್ಲ."

ಇನ್ನೇನಿಲ್ಲ, ಕಠಿಣ ವ್ರತ ಕೈಕೊಳ್ಳಬೇಕೆಂದು ನಾನು ಕೇವಲ ಹಣ್ಣು ಹಂಪಲುಗಳ ಮೇಲೆ ಜೀವಿಸತೊಡಗಿದೆ. ಆಫೀಸಿನಿಂದ ಮನೆಯವರೆಗೆ ಓಡುತ್ತ ಬರತೊಡಗಿದೆ. ನನ್ನಲ್ಲಾಗುವ ಬದಲಾವಣೆ ನನಗೇ ತಿಳಿಯತೊಡಗಿತು.

ಒಂದು ತಿಂಗಳ ಮೇಲೆ ೨೦-೨೫ ಪೌಂಡಾದರೂ ತೂಕ ಕಡಿಮೆಯಾಗಿರಬೇಕು ಎಂಬ ವಿಶ್ವಾಸದಿಂದ ತಕ್ಕಡಿ ಏರಿದೆ. ೧೯೯ ಪೌಂಡು



ಪುಸ್ತಕ ವಿಭಾಗ




# ಕನ್ನಡಿಗರ ಕರ್ಮಕಥೆ

ವೆಂಕಟೇಶ ತಿರಕೋ ಕುಲಕರಣಿ ಗಳಗನಾಥ

ದಿ. ಗಳಗನಾಥರ ಕಾದಂಬರಿಗಳು ಕನ್ನಡದ ಹಳೆಯ ಪೀಳಿಗೆಯ ಪ್ರೀತಿಗೆ ಪಾತ್ರವಾದವು. ಅವರ ಗಂಡುಕನ್ನಡ ಶೈಲಿ ಓದುಗರ ಹೃದಯದಲ್ಲಿ ಕೆಚ್ಚು ಹುಟ್ಟಿಸಿ ರಾಷ್ಟ್ರೀಯ ಪುನರುಜ್ಜೀವನಕ್ಕೆ ತನ್ನ ಪಾಲಿನ ಸೇವೆ ಸಲ್ಲಿಸಿತು. ಕನ್ನಡಿಗರ ಇತಿಹಾಸವನ್ನು ವಸ್ತುವಾಗಿಟ್ಟುಕೊಂಡು ಅವರು ಬರೆದ ಅನೇಕ ಸ್ವತಂತ್ರ ಕಾದಂಬರಿಗಳು ಅವರ ಕಲ್ಪಕತೆಗೆ ಸಾಕ್ಷಿಯಾಗಿವೆ. ವಿಜಯನಗರದ ದುರಂತ ಕಥೆಯನ್ನು ಕುರಿತ ಈ ಕಾದಂಬರಿ ಗಳಗನಾಥರ ಉತ್ತಮ ಕೃತಿಗಳಲ್ಲೊಂದಾಗಿದ್ದು ಅದರ ಸಂಗ್ರಹವನ್ನು, ಗಳಗನಾಥರ ಶಬ್ದಗಳಲ್ಲಿಯೇ, ಶ್ರೀ. ಶ್ರೀನಿವಾಸ ಹಾವನೂರರು ಇಲ್ಲಿ ಮಾಡಿದ್ದಾರೆ.

ವಿಜಯನಗರದ ಕೃಷ್ಣದೇವರಾಯನ ಕಾಲದಲ್ಲಿ ರಾಮರಾಜನೆಂಬ ಮಹಾಪ್ರತಾಪಿಯಾದ ಸರ್ದಾರನು ಬೇಟೆಗಾಗಿ ಸಂಜೆಯ ಸಮಯದಲ್ಲಿ ಮುದಗಲ್ಲಿನ ಹತ್ತಿರದ ಅರಣ್ಯವನ್ನು ಕುರಿತು ಸಾಗಿದ್ದನು. ಆ ಅರಣ್ಯವು ಹುಲಿಕರಡಿಗಳು ಸೇರುವಷ್ಟು ಗಹನವಾದದ್ದಿಲ್ಲ. ಆದರೆ ತಪ್ಪಿಸಿಕೊಂಡುಬಂದ ಒಂದು ಹುಲಿಯು ಪೆಳೆಗಳಲ್ಲಿ ಸೇರಿಕೊಂಡು ದನಕರುಗಳಿಗೆ ಉಪದ್ರವ ಕೊಡುತ್ತಿತ್ತು. ಏರಿಕೆಯ ರಕ್ತದ ನಮ್ಮ ಆ ತರುಣ ಸರದಾರನು ತಾನೇ ಆ ಹುಲಿಯನ್ನು ಕೊಲ್ಲುವೆನೆಂದು ಒಬ್ಬನೇ ನಡೆದಿದ್ದನು. ಒಂದು ಕುರಿಯನ್ನು ಗಿಡದ ಬೊಡ್ಡೆಗೆ ಕಟ್ಟಿಸಿ ತಾನು ಗಿಡವನ್ನೇರಿ ಕುಳಿತುಕೊಂಡನು.

ಅದೇವೇಳೆಗೆ ಓರ್ವ ಸುಂದರಿಯು ಒಂದುಸಣ್ಣ ಬಿಂದಿಗೆಯನ್ನು ಬಗಲಲ್ಲಿ ಇಟ್ಟುಕೊಂಡು ನದಿಯ ನೀರಿಗೆ ಹೊರಟಿದ್ದಳು. ಆಕೆಯ ಪರಿವಾರವು ಸ್ವಲ್ಪ ದೂರ ಒಂದು ಗಿಡದ ಬುಡದಲ್ಲಿ ಇಳಿದುಕೊಂಡು ವಿಶ್ರಮಿಸುತ್ತಲಿತ್ತು. ತರುಣಿಯು ಮುಸಲ್ಮಾನಳಾಗಿದ್ದರೂ ಇನ್ನೂ ಲಗ್ನವಾಗದೆ ಇದ್ದುದ್ದರಿಂದ ಗೋಷೆಗೆ ಒಳಗಾಗಿದ್ದಿಲ್ಲ.

ಆ ತರುಣಿಯು ಕುರಿಯ ಬಳಿಗೆ ಬಂದು "ಯಾವ ದುಷ್ಟನು ನಿನ್ನನ್ನು ಇಲ್ಲಿ ಕಟ್ಟಿದ್ದಾನೆ! ನಿಲ್ಲು, ನಾನು ನಿನ್ನನ್ನು ಈಗ ಬಿಟ್ಟುಬಿಡುತ್ತೇನೆ" ಎಂದು ನುಡಿಯುತ್ತ ಅದರ ಕೊರಳ ಹಗ್ಗವನ್ನು ಬಿಚ್ಚಹೋದಳು. ಆಕೆಯ ಪ್ರಯತ್ನಕ್ಕೆ ಪ್ರತಿಬಂಧ ಮಾಡುವದೊತ್ತಟ್ಟಿಗುಳಿದು ರಾಮರಾಜನು ಆಕೆಯ ಚಲನವಲನವನ್ನೂಹಾವಭಾವಗಳನ್ನೂ ನೋಡುವುದರಲ್ಲಿ ಮಗ್ನನಾಗಿ ಹೋದನು. ಅಷ್ಟರಲ್ಲಿ ಆ ಭಯಂಕರವಾದ ಹುಲಿಯು ಗುರುಗುಟ್ಟುವುದು ರಾಮರಾಜನಿಗೆ ಕೇಳಿಸಿತು. ಇನ್ನು ಈ ಹುಲಿಯು ಕುರಿಯ ವಾಸನೆಯಿಂದ ಇತ್ತಕಡೆಗೇ ಬಂದು ಕುರಿಯ ಮೇಲಾಗಲಿ, ಸುಂದರಿಯ ಮೇಲಾಗಲಿ ಹಾರಿ ಪ್ರಾಣಹರಣ ಮಾಡುವ ದೆಂದು ರಾಮರಾಜನು ತಿಳಿದನು. ಆ ರಮಣಿಯೊ ಬ್ಬಳು ಅಲ್ಲಿ ಇರದಿದ್ದರೆ ಆತನು ಗುಂಡು ಹಾ ಕ್ಷಣದಲ್ಲಿ ಹುಲಿಯನ್ನು ಕೊಲ್ಲುತ್ತಿದ್ದನು.

ನೋಡನೋಡುವಷ್ಟರಲ್ಲಿ ಹುಲಿಯು ಕುರಿ ಯನ್ನು ಹಿಡಿಯಿತು. ಇನ್ನು ಗುಂಡುಹಾಕುವದ ಅಶಕ್ಯವೆಂದು ತಿಳಿದು ರಾಮರಾಜನು ತನ್ನಕಠ ರಿಯನ್ನು ಕೈಯಲ್ಲಿ ತಕ್ಕೊಂಡು, ಕೆಳಗೆ ಧುಮು ಹುಲಿಯ ಹೊಟ್ಟೆಯ ಬುಡದಲ್ಲಿ ಸೇರಿದನು ಹುಲಿಯು ಕುರಿಯನ್ನು ಬಿಟ್ಟುಕೊಟ್ಟು ರಾಮ ರಾಜನ ಮೇಲೆ ಏರಿಬಂದಿತು. ಆದರೆ ಅವ ಕಠಾರಿಯ ಆಯಕಟ್ಟಿನ ಹೊಡೆತಗಳಿಗೆ ಈಡಾ ಗದೆ ಆಕ್ರೋಶ ಮಾಡುತ್ತ ನೆಲಕ್ಕುರುಳಿತು ರಾಮರಾಜನು ನಿತ್ರಾಣವಾಗಿದ್ದ ಹುಲಿಯ ಗೊಡವೆಯನ್ನು ಬಿಟ್ಟು ಮೂರ್ಛೆ ಹೋಗಿದ್ದ ಆ ಯವನ ಸುಂದರಿಯ ಕಡೆಗೆ ತಿರುಗಿದನು ಅವಳನ್ನು ಎತ್ತಿ ತನ್ನ ಕುದುರೆಯ ಮೇಲೆ ಹಾ ಓಡಿಸುತ್ತ ಸಾಗಿದ ರಾಮರಾಜನು ವಿಜಯನಗ ದಿಂದ ಕೆಲವು ಹರದಾರಿಗಳ ಮೇಲಿದ್ದ ಕುಂ ವನೆಂಬ ತನ್ನ ಉದ್ಯಾನಮಂದಿರಕ್ಕೆ ಬಂದನು.

ತುಸು ಹೊತ್ತಿನಮೇಲೆ ಆಕೆಯು ಶೈತ್ಯೋ ಚಾರಗಳಿಂದ ಕಣ್ದೆರೆದು ನೋಡಿದಾಗ ತಾನ ಮಚ್ಛರದಾನಿಯನ್ನು ಹಾಕಿದ ಒಂದು ಪಲ್ಲಂಗ ಮೇಲೆ ಮಲಗಿದ್ದು, ಬಳಿಯಲ್ಲಿ ಒಬ್ಬ ಸುಂದ ತರುಣನು ಕುಳಿತಿರುವನೆಂದು ಆಕೆಗೆ ಗೊತ್ತಾ ಯಿತು. ಚಟ್ಟನೆ ಎದ್ದುನಿಂತಳು.

ಅದಕ್ಕೆ ರಾಮರಾಜನು ಅಚ್ಚ ಫಾರಸಿ ಭಾಷೆಯಿಂದ "ತಾವು ಏಳಬಾರದು. ಹುಲಿಯ ಭಯವಾಗಲಿ ಬೇರೆ ಯಾತರ ಭಯವಾಗಲಿ ಇಲ್ಲ ಇರುವದಿಲ್ಲ" ಎಂಬುದಾಗಿ ಅವಳಿಗೆ ತನ್ನ ಬಗ ವಿವರಗಳನ್ನು ತಿಳಿಸಿದನು.

ಆ ತರುಣಿಯೂ ದೊಡ್ಡ ಸರದಾರನ ಮಗಳ ದ್ದಳು. ಒತ್ತಟ್ಟಿಗೆ ಕೃತಜ್ಞತೆ ಮತ್ತೊತ್ತಟ್ಟಿ

ಪ್ರೇಮ. ಇನ್ನೊತ್ತಟ್ಟಿಗೆ ಕುಲೀನತೆ. ಈ ಮೂರರ ಜಗ್ಗಾಟದಲ್ಲಿ ಆಕೆಯು ಗಾಸಿಯಾಗ ತೊಡಗಿದಳು. ಜೀವದ ಹಂಗು ಇಲ್ಲದೆ ತನ್ನನ್ನು ಹುಲಿಯ ಬಾಯೊಳಗಿಂದ ಬಿಡಿಸಿದ ಕೃತಜ್ಞತೆಗೆ ರಾಮರಾಜನ ಸೌಜನ್ಯ, ಸುಂದರರೂಪ, ಶೌರ್ಯ ಸಾಹಸಗಳು ಜೋಡಾಗಲು ತಾರುಣ್ಯದ ಸ್ವಾಭಾವಿಕ ಧರ್ಮಕ್ಕನುಸರಿಸಿ ಆ ಸುಂದರಿಯ ಹೃದಯದಲ್ಲಿ ಪ್ರೇಮೋದಯವಾಯಿತು. ಆ ಪ್ರೇಮಕ್ಕೆ ರಾಮರಾಜನ ಸವಿಮಾತು ಹಾಗೂ ಬೇಡಿಕೆಗಳಿಂದ ಕಳೆಯೇರಿ ಆ ತರುಣಿಯು ರಾಮರಾಜನ ಕೈಸೇರಬೇಕೆನ್ನುವದರೊಳಗಾಗಿ ಕುಲೀನತೆಯು ಆಕೆಯನ್ನು ಹಿಂದಕ್ಕೆ ಜಗ್ಗುತ್ತಿತ್ತು.

ಕೊನೆಗೆ ರಾಮರಾಜನು ಅವಳ ಅಪೇಕ್ಷೆಯ ಮೇರೆಗೆ ಆಕೆಯ ದಾಸಿಯಾದ ಮಾರ್ಜೀನೆಯೊಬ್ಬಳನ್ನೇ ಹೊರಡಿಸಿಕೊಂಡು ಬಂದನು. ಮಾರ್ಜೀನೆಯು ಅವರಿಬ್ಬರ ಪ್ರೇಮಬಂಧ ನಾಟಕದ ಪ್ರಥಮಾಂಕವನ್ನು ನೋಡಿ ಆಶ್ಚರ್ಯಪಟ್ಟಳು. ಇದರ ಪರಿಣಾಮವು ಚನ್ನಾಗಿ ಆಗಲಿಕ್ಕಿಲ್ಲವೆಂದು ಬೋಧಿಸಹೋದಳು. ಆದರೆ ಮೆಹರಜಾನಳು "ಪಠಾಣ ತರುಣಿಯರು ಒಬ್ಬ ಪುರುಷನಲ್ಲಿ ಮನಸಿಟ್ಟಬಳಿಕ ಅನ್ಯಪುರುಷರನ್ನು ಪಿತೃಸಮಾನರೆಂತಲೇ ತಿಳಿಯುವರು. ನನಗೆ ಹಿಂದೂಪತಿ ಪತಿಯಾಗಬೇಕೆಂಬು ಅಲ್ಲಾನ ಸಂಕೇತವಿದ್ದಂತೆ ತೋರುತ್ತದೆ. ಅವರೇ ನನ್ನ ಪ್ರಾಣೇಶ್ವರರು" ಎಂದು ಉತ್ತರ ಕೊಟ್ಟಳು.

ರಾಮರಾಜನಾದರೂ ಪ್ರಾಯದ ಸೊಕ್ಕಿನಲ್ಲಿ ನಿಗ್ರಹದಿಂದ ನಡೆಯದೆ ಮನಸ್ಸನ್ನು ಹರಿಬಿಟ್ಟದ್ದರಿಂದ ಎಂಥ ಘನವಾದ ಸಾಮ್ರಾಜ್ಯದ ಲಯಕ್ಕೆ ಕಾರಣನಾದನೆಂಬವನ್ನು ಇಲ್ಲಿ ಬರೆಯುವ ದುಃಖದ ಪ್ರಸಂಗವು ನಮಗೊದಗಿದೆ. ರಾಮರಾಜನು ಪ್ರೇಮದ ಭರದಲ್ಲಿ ಹಿಂದುಮುಂದಿನ ವಿಚಾರವಿಲ್ಲದೆ ಮೆಹರ್ಜಾನಳಿಗೆ ಹಲವು ವಚನಗಳನ್ನು ಕೊಟ್ಟಿದ್ದನು. ತನ್ನನ್ನು ಮುಖ್ಯಪತ್ನಿಯನ್ನಾಗಿ ಮಾಡಿಕೊಳ್ಳುವನೆಂದು ಆಕೆಯು ದೃಢವಾಗಿ ನಂಬಿದ್ದಳು. ಶಕುಂತಲೆಯು ಕಣ್ವಾಶ್ರಮದಲ್ಲಿ ದುಷ್ಯಂತನ ಪಾಣಿಗ್ರಹಣ ಮಾಡಿದ ಕಥೆಯನ್ನು ಸವಿ ಮಾತಿನ ರಾಮರಾಜನು ಅವಳ ಮುಂದೆ ಹೇಳಿದನು. ಕಡೆಗೆ ಅವರಿಬ್ಬರ ಗುಪ್ತ ಪಾಣಿಗ್ರಹಣವಾಗಿ ದಾಂಪತ್ಯ ಸುಖಾನುಭವಕ್ಕೆ ಆರಂಭವಾಯಿತು.

ವಿಜಯನಗರ ರಾಜ್ಯಸ್ಥಾಪನೆಯಾಗಿ ೩೦೦ ವರ್ಷಗಳಾಗಿ ಹೋದದ್ದರಿಂದ ಕನ್ನಡಿಗರಲ್ಲಿ ಸತ್ವಕ್ಕಿಂತ ವಿಷಯಲೋಲುಪತೆಯೂ ಸೌಜನ್ಯಕ್ಕಿಂತ ಮದಾಂಧತೆಯೂ ಪೌರುಷಕ್ಕಿಂತ ಡಾಂಭಿಕತೆಯೂ ಸತ್ಯಕ್ಕಿಂತ ಮೋಸಗಾರಿಕೆಯೂ ವಿಶೇಷವಾಗಿದ್ದವು. ರಾಮರಾಜನಲ್ಲಿ ಹಲವು ಸದ್ಗುಣಗಳಿದ್ದರೂ ಆತನು ಈ ರಾಷ್ಟ್ರೀಯ ರೋಗದಿಂದ ಮುಕ್ತನಿದ್ದಿಲ್ಲ. ಅದರ ಎಲ್ಲ ಲಕ್ಷಣಗಳೂ ರಾಮರಾಜನಲ್ಲಿದ್ದುವಲ್ಲದೆ ಆ ರೋಗದ ಹೆಚ್ಚುವಿಕೆಗೆ ಕಾರಣವಾದ ಮಹತ್ವಾಕಾಂಕ್ಷೆಯು ಅವನಲ್ಲಿ ವಾಸಿಸುತ್ತಿತ್ತು.

ಇತ್ತ ರಾಮರಾಜನ ಧೈರ್ಯ ಸಾಹಸ ರಾಜಕಾರಣ ಕುಶಲತೆ ಇವುಗಳಿಗೆ ಮೆಚ್ಚಿ ಕೃಷ್ಣದೇವರಾಜನು ಆತನನ್ನು ದೊಡ್ಡಪದವಿಗೇರಿಸುತ್ತ ನಡೆದನು. ಕಡೆಗೆ ಆತನು ತನ್ನ ಮಗಳನ್ನು ರಾಮರಾಜನಿಗೆ ಕೊಟ್ಟು, ಅವನಿಗೆ ಮಂತ್ರಿ ಪದವನ್ನು ಕೊಡಬೇಕೆಂದು ಯೋಚಿಸಿದನು. ಅದರಿಂದ ರಾಮರಾಜನ ಬಾಯಲ್ಲಿ ಜುಳುಜುಳು ನೀರು ಬರಹತ್ತಿತು. ಆದ್ದರಿಂದ ತನ್ನ ಮಂತ್ರಿ ಪದವಿಗೆ ತೊಂದರೆ ಬಂದೀತೆಂದು ಕುಂಜವನದಲ್ಲಿರುವ ತನ್ನ ಪ್ರಿಯತಮೆಯ ಬಳಿಗೆ ಆಗೊಮ್ಮೆ ಈಗೊಮ್ಮೆ ಕಳವಿನಿಂದ ಬರತೊಡಗಿದನು.

ಈ ಸ್ಥಿತಿಯು ಮೆಹರಜಾನಳಿಗೆ ಹೇಗೆ ಸರಿಬರಬೇಕು? ಆದರೆ ಆಕೆಯು ವಿಕಲ್ಪವನ್ನೆಣಿಸಿರಲಿಲ್ಲ. ಒಂದು ದಿನ ಆಕೆಯ ಮನಸ್ಸು ತೀರ ಖಿನ್ನವಾಗಿತ್ತು.


ರಾಮರಾಯ

ರಾಮರಾಜನು ಬಾರದೆ ಅಂದಿಗೆ ೮ ದಿನಗಳಾಗಿ ಹೋಗಿದ್ದವು. ಅಂದು ವಸಂತಕಾಲದ ಪೂರ್ಣಿಮೆ. ಮೆಹೆರ್ಜಾನಳು ಒಬ್ಬಳೇ ಕುಳಿತಿರಲಾರದೆ ಕುಂಜವನದ ಪುಷ್ಕರಿಣಿಯ ಕಡೆಗೆ ಸಾಗಿದಳು. ಆಗ ಚಂದ್ರಮಂಡಲವು ಪುಷ್ಕರಿಣಿಯಲ್ಲಿ ಸ್ವಚ್ಛವಾಗಿ ಪ್ರತಿಫಲಿಸಿ, ಅದರ ಮನೋಹರತ್ವಕ್ಕೆ ಕಳೆಯೇರಿತ್ತು. ತುಸುಹೊತ್ತಿನಮೇಲೆ ರಾಮರಾಜನು ಅಲ್ಲಿಗೇ ಬಂದನು. ಅವನನ್ನು ಕಂಡೊಡನೆಯೇ ಓಡಿಬಂದು ಬಿಗಿಯಾಗಿ ಅಪ್ಪಿಕೊಂಡಳು. ಅದರ ಆನಂದಾತಿಶಯದಿಂದ ಕೆಲವು ಹೊತ್ತಿನವರೆಗೆ ಮಾತಾಡಲು ಇಬ್ಬರೂ ಅಸಮರ್ಥರಾಗಿದ್ದರು.

ರಾಮರಾಜ – ನೀನು ಮಂದಿರದಲ್ಲಿಲ್ಲದ್ದರಿಂದ ಕುಂಜವನದಲ್ಲಿ ಹುಡುಕುವ ಮುಂಚೆ ಇಲ್ಲಿಗ ಬಂದೆ. ಆದರೆ ಪುಷ್ಕರಿಣಿಯಲ್ಲಿ ಮೂರು ಚಂದ್ರಗಳು ಎಲ್ಲಿಂದ ಬಂದುವೆಂಬುದು ನನಗೆ ತಿಳಿಯದಾಯಿತು. ಆಕಾಶದಲ್ಲಿಯೊಬ್ಬ, ಪುಷ್ಕರಿಣಿಯ ಜಲದಲ್ಲಿ ಒಬ್ಬ ಮತ್ತು ಈ ದಡದಲ್ಲಿ ಒಬ್ಬ…

ಮೆಹೆರ್ಜಾನ — ಸಾಕು, ಸಾಕು, ಏನಾದರೂ ಬಣ್ಣದ ಮಾತು ಆಡಿ ನನ್ನನ್ನು ರಮಿಸಬೇಡಿರಿ. ಈಗ ಎಂಟು ದಿನ ನನ್ನನ್ನು ಮರೆತದ್ದನ್ನು.

ರಾಮರಾಜ — ಹಾಗಲ್ಲ ಕೃಷ್ಣದೇವರಾಜರು ಚಿಟಿಗಿಗೊಮ್ಮೆ ಮುಟಿಗಿಗೊಮ್ಮೆ ಕರೆಸಿ ಆಲೋಚನೆಗಳನ್ನು ಕೇಳುವರು. ಅವರು ನನಗೆ ರಾಮರಾಜಾ, ನಿನ್ನ ಹಿರಿಯರ ಮಂತ್ರಿಪದವನ್ನು ನಿನಗೆ ಕೊಡಬೇಕೆನ್ನುವ ಹಾಗೆ ತೋರುತ್ತದೆ. ಅದಕ್ಕೂ ಮೊದಲು ಎರಡನೆಯದೇನನ್ನಾದರೂ ನಿನಗೆ ಕೊಡಬೇಕೆಂದು ಮಾಡಿರುವೆನು ಎಂದು ಹೇಳಿದ್ದಾರೆ.

ಮೆಹೆರ್ಜಾನ — ಮಹಾರಾಜರು ನಿಮಗೆ ಎರಡನೆಯದೇನನ್ನು ಕೊಡುವರು?

ಕೃಷ್ಣದೇವರಾಜನು ತನ್ನ ಮಗಳನ್ನು ಕೊಡುತ್ತಾನೆಂದು ಹೇಗೆ ಹೇಳುವದು? ಅದನ್ನು ಮರೆಯಿಸುವದಕ್ಕಾಗಿ ರಾಮರಾಜ— ಪ್ರಿಯೇ, ಹೀಗೆಯೇ ಈ ಅಶೋಕ ವೃಕ್ಷದ ಕೆಳಗೆ ಎಷ್ಟು ಹೊತ್ತು ನಿಂತುಕೊಳ್ಳುವದು? ಇನ್ನು ಮಂದಿರಕ್ಕೆ ಹೋಗೋಣ ನಡೆ.

ಮೆಹೆರ್ಜಾನ — ಇಲ್ಲ, ಇಂದಿನ ರಾತ್ರಿಯನ್ನೆಲ್ಲ ನಿಮ್ಮೊಡನೆ ಕ್ರೀಡಾನೌಕೆಯಲ್ಲಿ ಕುಳಿತು ಪುಷ್ಕರಿಣಿಯಲ್ಲಿಯೇ ವಿಹರಿಸಬೇಕೆಂಬ ಇಚ್ಛೆಯು ನನಗೆ ಆಗಿದೆ.

ಅವಳ ಮನಸ್ಸನ್ನು ನೋಯಿಸಲಾರದೇ ರಾಮರಾಜನು ನೌಕೆಯ ಹಗ್ಗವನ್ನು ಉಚ್ಚಿ ಅದರಲ್ಲಿ ಅವಳನ್ನು ಬದಿಯಲ್ಲಿಯೇ ಕುಳ್ಳಿರಿಸಿಕೊಂಡು ನೌಕೆಯನ್ನು ನಡೆಸಿಕೊಂಡು ಪುಷ್ಕರಿಣಿಯನ್ನು ಸುತ್ತುವರಿಯುತ್ತಿರುವಾಗ ಹೇಳಿದನು:

ರಾಮರಾಜ — ನಾನು ಬೆಳಗಾದ ಕೂಡಲೇ ವಿಜಯನಗರಕ್ಕೆ ಹೋಗಬೇಕಾಗಿದೆಯಲ್ಲ, ಮೆಹೇರ್.

ಮೆಹೆರ್ಜಾನ:— ಏನು? ಬೆಳಗಾದಕೂಡಲೇ ಹೋಗುವಿರಾ? ಒಂದೆರಡು ದಿನವಾದರೂ ಇಲ್ಲಿ ಇರಬೇಕು. ನಾನಂತೂ ನಾಳೆ ಹೋಗಗೊಡುವದಿಲ್ಲ.

ರಾಮರಾಜ :— ಪ್ರಿಯ ಮೆಹೇರ್, ಇನ್ನು ಇಲ್ಲಿಯ ಶೀತ ಹವೆ ನಿನಗೆ ತಡೆಯಲಿಕ್ಕಿಲ್ಲ. ನಡೆ ಮಂದಿರಕ್ಕೆ ಹೋಗೋಣ, ಎಂದು ನುಡಿದು ಆಕೆಯನ್ನು ಕರೆದುಕೊಂಡು ನಡೆದನು. ಮಂದಿರದ ಪಾವಟಿಗೆಗಳನ್ನು ಹತ್ತುವಾಗ ಮೆಹೆರ್ಜಾನಳು ಕಣ್ಣೀರು ಸುರಿಸುತ್ತ ರಾಮರಾಜನನ್ನು ಬಿಗಿಯಾಗಿ ಅಪ್ಪಿಕೊಂಡು, "ಪ್ರಿಯಕರಾ, ಈ ಕುಂಜವನದಿಂದ ಹಾಗೂ ಪುಷ್ಕರಿಣಿಯಿಂದ ಒದಗಿದ ಇಂದಿನಂಥ ಸುಖವು ಇನ್ನು ತಿರುಗಿ ನನಗೆ ಲಭಿಸಲಾರದೆಂದು ತೋರುತ್ತದೆ. ಆದ್ದರಿಂದ ಆ ಪುಷ್ಕರಿಣಿಯಲ್ಲಿ ಮುಳುಗಿ ಹೋಗಿದ್ದರೆ ನೆಟ್ಟಗಾಗುತ್ತಿತ್ತು" ಎಂದಳು.

ಕೂಡಲೇ ರಾಮರಾಜನ ಹೃದಯವು ಕಂಪಿಸಹತ್ತಿತು. ಅವನು ಶೂರನಿದ್ದರೂ ಅಪಮೃತ್ಯುವಿಗೆ ಹೆದರುತ್ತಿದ್ದನು. ಆಕೆಯನ್ನು ಶಯನಗೃಹಕ್ಕೆ ಕರೆದೊಯ್ದು ಪಲ್ಲಂಗದ ಮೇಲೆ ಮಲಗಿಸಿದನು. ತನಗೆ ನಿದ್ದೆ ಹತ್ತಿದ ಬಳಿಕ ರಾಮರಾಜನು ಹೇಳದೇ ಕೇಳದೇ ವಿಜಯನಗರಕ್ಕೆ ಹೋಗಬಹುದೆಂದು ಶಂಕಿಸಿ, ಆಕೆಯು ರಾಮರಾಜನ ಬಲಗೈಯನ್ನು ತನ್ನ ಎರಡೂ ಕೈಗಳಿಂದ ಗಟ್ಟಿಯಾಗಿ ಹಿಡಕೊಂಡಳು. ನಿದ್ದೆ ಮಾಡಬಾರದೆಂಬ ನಿಶ್ಚ

ಯೆಂಬ ಆಕೆಯು ಕಣ್ಣು ತೆರೆದು ಮಲಗಿಕೊಂಡಳು. ಆದರೆ ಆ ವಿಶಾಲಾಕ್ಷಿಯು ಮೇಲೆ ಸ್ವಲ್ಪ ಹೊತ್ತಿನಲ್ಲಿಯೆ ನಿದ್ದೆಯ ಅಮಲು ಕೂತು ಗಡದ್ದು ನಿದ್ದೆ ಮಾಡಹತ್ತಿದಳು.

ಕೂಡಲೇ ರಾಮರಾಜನು ಮೇಲಕ್ಕೆದ್ದು ವಿಜಯನಗರಕ್ಕೆ ಹೊರಡುವ ತಯಾರಿಯಲ್ಲಿ ಮಾರ್ಜೀನೆಯ ಬಳಿಗೆ ಬಂದನು. ಅದನ್ನು ಕಂಡು ಮಾರ್ಜೀನೆಯು ಚಟ್ಟನೇ ಎದ್ದು "ಇದೇನು ಮಹಾರಾಜರು ಹೊರಟುಬಿಟ್ಟರೇನು? ಅವಳ ಅನುಮತಿಯನ್ನು ಪಡೆದು ನಾಳೆ ಹೋಗಬೇಕು. ಅದರಲ್ಲಿಯಂತೂ ಒಂದು ಗುಪ್ತವಾದ ಸಂಗತಿಯನ್ನು ನಿಮ್ಮ ಮುಂದೆ ಹೇಳಬೇಕು ಎಂದು ಒಂದು ತಿಂಗಳಿಂದ ಆತುರಪಟ್ಟು ಕಡೆಗೆ ಲಜ್ಜೆಯಿಂದ ಅದನ್ನು ಹೇಳಲಾರದವಳಾಗಿದ್ದಾಳೆ."

ತಾನು ಹೇಳುವ ಗುಪ್ತಮಾತುಗಳನ್ನು ಕೇಳಿ ರಾಮರಾಜನು ಸಂತೋಷಬಟ್ಟು ಈಗಲೇ ವಿಜಯನಗರಕ್ಕೆ ಹೊರಟದ್ದನ್ನು ರಹಿತಮಾಡುವನೆಂದು ತಿಳಿದು — ಮಹಾರಾಜ, ಮೆಹೆರ್ಜಾನಳು ಈಗ ನಾಲ್ಕು ತಿಂಗಳ ಗರ್ಭಿಣಿ ಇದ್ದಾಳೆ, ಎಂದು ನುಡಿದು ಅವನ ಸಂತೋಷದ ಭಾವವನ್ನು ತಿಳಿದುಕೊಳ್ಳುವುದಕ್ಕಾಗಿ ಅವನ ಮುಖವನ್ನು ನೋಡತೊಡಗಿದಳು. ಆದರೆ ಆತನು ಉಪಚಾರಕ್ಕಾದರೂ ಒಂದು ಒಳ್ಳೆಯ ಮಾತನಾಡದೇ ಅರಗಿನ ಮುದ್ರೆಹಾಕಿದ ಎರಡು ಚೀಲಗಳನ್ನು ಅವಳ ಕೈಯಲ್ಲಿ ಕೊಟ್ಟು ಅಲ್ಲಿಂದ ಹೊರಬಿದ್ದನು. ಆತನ ಮಂತ್ರಿಪದದ ಹವ್ಯಾಸಕ್ಕೆ ಮೆಹೆರ್ಜಾನಳ ಗರ್ಭವೊಂದು ದೊಡ್ಡ ವಿಘ್ನವಾಗಿಯೇ ಕಂಡಿತು.

ರಾಮರಾಜನಾದರೋ ಆ ಪತ್ರದಲ್ಲಿ ಬಹಳ ವಿಷಯವನ್ನು ಬರೆದಿದ್ದಿಲ್ಲ. ಕೃಷ್ಣರಾಜರು ತಮ್ಮ ಮಗಳನ್ನು ಕೊಟ್ಟು ಆ ಮುಂದೆ ಮಂತ್ರಿಪದವಿಯನ್ನು ಕೊಡಲಿರುವ ವಿಚಾರವನ್ನು ಬರೆದು ಆ ವಿವಾಹದವರೆಗೆ ಕೆಲವು ದಿನ ಆಕೆಯು ಅಜ್ಞಾತವಾಗಿರಬೇಕೆಂದೂ ಕುಂಜವನಕ್ಕೆ ತನಗೆ ಕೆಲವು ಕಾಲ ಬರಲಿಕ್ಕಾಗುವುದಿಲ್ಲವೆಂದೂ ಒಕ್ಕಣಿಸಿದ್ದನು. ಆದರೆ ತನ್ನನ್ನೆ ಪಟ್ಟದ ರಾಣಿಯನ್ನಾಗಿ ಮಾಡುವೆನೆಂದು ಭರವಸೆ ಪಡೆದಿದ್ದ ಅವಳಿಗೆ ಇದು ಹೇಗೆ ಸರಿಕಾಣಬೇಕು? ಆಕೆಯ ತಂದೆಯಾದ ಖಾನ ಜಮಾನಖಾನನು ಗೋವಳಕೊಂಡದ ದರ್ಬಾರದಲ್ಲಿ ಒಬ್ಬ ಸರದಾರನಿದ್ದನು. ಮೆಹೆರ್ಜಾನಳು ಬಹು ಲಾವಣ್ಯವತಿಯೂ ಸದ್ಗುಣಿಯೂ ಆದ್ದರಿಂದ ಬಹುಜನ ತರುಣ ಸರದಾರರು ಆಕೆಯನ್ನು ಲಗ್ನವಾಗಲಿಚ್ಛಿಸಿದ್ದರು. ಆದರೆ ಖಾನನು ಅಹಮ್ಮದನಗರದ ಬಾದಶಹನ ಮನೆತನದೊಡನೆ ಸಂಬಂಧ ಮಾಡಬೇಕೆಂಬ ಮಹತ್ವಾಕಾಂಕ್ಷೆಯಿಂದ ಇಷ್ಟು ದಿನ ಅವಳ ಮದುವೆಯನ್ನು ಮಾಡದೇ ಬಿಟ್ಟಿದ್ದನು.

ಮೆಹೆರ್ಜಾನಳು "ಇನ್ನು ಈ ಕುಂಜವನದಲ್ಲಿ ನಿಂತು ನೀರು ಸಹಿತ ಕುಡಿಯಲಿಕ್ಕಿಲ್ಲ. ಪ್ರಸಂಗ ಬಂದಾಗ ಇದರ ಸೇಡು ತೀರಿಸಿಕೊಂಡರೇ ನಾನು ಪಠಾಣ ಜಾತಿಯಲ್ಲಿ ಹುಟ್ಟಿದವಳು. ನಾನು ಮಾಡಿದ ಅಪರಾಧಕ್ಕಾಗಿ ಇಂದಿನಿಂದ ವಿಷಯ ಸುಖದ ಆಶೆಯನ್ನು ಬಿಡುವೆನು" ಎಂದು ಪ್ರತಿಜ್ಞೆ ಮಾಡಿ, ಮಾರ್ಜೀನೆಯನ್ನು ಕರೆದುಕೊಂಡು ಹೊರಟುಬಿಟ್ಟಳು.

ಮೆಹರ್ಜಾನಳು ತಾನಾಗಿ ಹೋದದ್ದರಿಂದ ತನ್ನ ಮಂತ್ರಿ ಪದವಿಯ ಪ್ರಾಪ್ತಿಗಾಗಿ ಒದಗಿದ್ದೊಂದು ವಿಘ್ನ ನಿವಾರಣೆಯಾಯಿತೆಂದು ಅವನಿಗೆ ಮೊದಲು ಅನಿಸಿತು. ಆದರೆ ಮೆಹರ್ಜಾನಳ ಒಂದೊಂದೇ ಪ್ರೇಮದ ಕೃತಿಗಳ ಸ್ಮರಣವಾಗಿ ಆತನ ಮನಸ್ಸು ಮತ್ತೆ ಅಸ್ವಸ್ಥವಾಯಿತು. ಭ್ರಮಿಷ್ಟನಂತೆ ಕುಂಜವನಕ್ಕೆ ಎಡತಾಕಿದನು. ಅವರನ್ನು ಹುಡುಕಿಸಲಿಕ್ಕೆ ಆಳುಗಳನ್ನು ಕಳಿಸಿದನು.

ಆದರೆ ದಿನಗಳು ಹೋದಂತೆ ಆ ಮಹತ್ವಾಕಾಂಕ್ಷೀ ತರುಣನಿಗೆ ಮೆಹೆರ್ಜಾನಳ ಹಳವಂಡವು ಕಡಿಮೆಯಾಗತೊಡಗಿತು. ತಮ್ಮ ಮಗಳನ್ನು ರಾಮರಾಜನಿಗೆ ಲಗ್ನ ಮಾಡಿಕೊಟ್ಟ ಕೆಲವು ದಿನಗಳಲ್ಲಿಯೆ ಕೃಷ್ಣದೇವರಾಜರು ಅಕಸ್ಮಾತ್ ಬೇನೆಬಿದ್ದರು. ಆಗ ರಾಮರಾಜನನ್ನು ತಮ್ಮ ಬಳಿಯಲ್ಲಿಯೆ ಕುಳ್ಳಿರಿಸಿಕೊಂಡು ರಾಜ್ಯಭಾರವನ್ನು ನಡಸತೊಡಗಿದರು. ಇದರ ಲಾಭ

ವನ್ನು ಅವನು ಚೆನ್ನಾಗಿ ಮಾಡಿಕೊಂಡನು. ರಾಯರ ಪ್ರಕೃತಿಯು ಕೆಡುತ್ತ ಹೋದಂತೆ ರಾಮರಾಜನು ಸ್ವತಂತ್ರ ರೀತಿಯಿಂದಲೇ ರಾಜ್ಯ ಕಾರಭಾರವನ್ನು ನಡಸತೊಡಗಿದನು. ಅವರು ತೀರಿಕೊಂಡ ಮೇಲೆ ಅವರ ಪೂರ್ವ ಅನುಮತಿಯಿಂದ ಅಚ್ಯುತರಾಯನು ಸಿಂಹಾಸನವನ್ನೇರಿದನು.

ರಾಮರಾಜನು ವಿಜಯನಗರ ರಾಜ್ಯದಲ್ಲಿ ವ್ಯವಹರಿಸಿದ ಕಾಲವು ಬಹು ದೀರ್ಘವಾದದ್ದು. ಆತನ ಆಳಿಕೆಯ ಆರಂಭವು ವಿಜಯನಗರ ರಾಜ್ಯದ ಅತ್ಯುತ್ಕರ್ಷದ ಆರಂಭವಾಗಿದ್ದು, ಆತನ ಆಳಿಕೆಯ, ಸಮಾಪ್ತಿಯು ಆ ರಾಜ್ಯದ ವಿಧ್ವಂಸದ ಪರಮಾವಧಿಯಾಗಿರುವದು. ಆತನ ದೀರ್ಘಕಾಲದ ಆಳಿಕೆಯಲ್ಲಿ ಬಾಮನೀ ರಾಜ್ಯದ ನಾಲ್ಕು ಶಾಖೆಗಳಲ್ಲಿಯೂ ಇಬ್ಬರಿಬ್ಬರಾದರೂ ಬಾದಶಹರು ಆಗಿಹೋದರು.

ರಾಮರಾಜನ ತಂತ್ರಗಳು ಕೃಷ್ಣದೇವರಾಜರ ಮರಣದಿಂದ ಅಂದರೆ ೧೫೩೦ ನೇ ಇಸವಿಯಿಂದ ಪ್ರಾರಂಭವಾದವು. ಮುಂದಿನ ೧೩ ವರ್ಷಗಳಲ್ಲಿ ಕೆಲವು ಕಾಲ ಅಜ್ಞಾತವಾಸದಲ್ಲಿಯೂ ಕಳೆಯುವ ಪ್ರಸಂಗ ಅವನಿಗೆ ಬಂದಿತ್ತು. ಅಚ್ಯುತರಾಯನು ಮರಣಹೊಂದಿದ ನಂತರ ಆತನ ಅಣ್ಣನ ಮಗನಾದ ಸದಾಶಿವರಾಯನನ್ನು ರಾಮರಾಜನು ಪಟ್ಟಕ್ಕೆ ಕುಳ್ಳಿರಿಸಿದನು. ಸದಾಶಿವರಾಯನು ಸೆರೆಯಾಳಿನಂತೆ ಜೀವಿಸಿದನು. ರಾಮರಾಜನೇ ನಿಜವಾದ ರಾಜನಾಗಿದ್ದನು. ಬಾಮನೀ ಬಾದಶಹರ ಮಗ್ಗಲು ಮುರಿಯಬೇಕೆಂದು ಅವರ ಅಂತಃಸ್ಥ ಕಲಹಗಳ ಉಪಯೋಗ ಮಾಡಿಕೊಂಡು, ಒಮ್ಮೆ ಒಬ್ಬನಿಗೂ ಮತ್ತೊಮ್ಮೆ ಮತ್ತೊಬ್ಬನಿಗೂ ಸಹಾಯ ಮಾಡುತ್ತ ವಿಜಯನಗರದ ವೈಭವವನ್ನೂ ದರ್ಪವನ್ನೂ ಹೆಚ್ಚಿಸಿದನು.

ವಿಜಾಪುರದವರ ಮೇಲಂತೂ ರಾಮರಾಜನ ಸಿಟ್ಟು ಬಹಳವಿತ್ತು. ೧೫೫೭ ರಲ್ಲಿ ಅಲ್ಲಿ ಆದಿಲಶಹನು ಪಟ್ಟವೇರಿದ ನಂತರ ಆ ಬಾದಶಹನು ರಾಮರಾಜನಿಂದ ಸಹಾಯ ಪಡೆದಿದ್ದರೂ ರಾಮರಾಜನನ್ನು ಮಣ್ಣುಗೂಡಿಸುವ ಯತ್ನದಲ್ಲಿ ಇದ್ದನು. ಅದಕ್ಕಾಗಿ ಅವನು ಎರಡು ಬಗೆಯ ತಂತ್ರಗಳನ್ನು ಹೂಡಿದನು. ಆ ತಂತ್ರಗಳಲ್ಲಿ ಒಂದನೆಯದು, ಉಳಿದ ಮೂವರು ಬಾದಶಹರೊಡನೆ ಐಕ್ಯವನ್ನು ಬೆಳಸಿಕೊಂಡು, ರಾಮರಾಜನನ್ನು ನಾಶಗೊಳಿಸಬೇಕೆಂದು ಆಲೋಚಿಸುವುದು. ಇತ್ತ ರಾಮರಾಜನ ಕಡೆಗೆ ವಕೀಲನನ್ನು ಕಳಿಸಿ ನಾನು, ನೀನು ಕೂಡಿ ಉಳಿದ ಮೂವರು ಬಾದಶಹರನ್ನು ನಾಶಗೊಳಿಸಿ ರಾಜ್ಯವನ್ನು ಹಂಚಿಕೊಳ್ಳೋಣವೆಂದು ಆಲೋಚಿಸುವುದು ಎರಡನೆಯ ತಂತ್ರವು.

ಆ ಪ್ರಕಾರ ರಣಮಸ್ತಖಾನನೆಂಬ ಒಬ್ಬ ಹೊಸ ವಕೀಲನು ರಾಮರಾಜನ ದರ್ಬಾರಕ್ಕೆ ಬಂದನು. ರಾಮರಾಜನು ಆ ವಕೀಲನ ಸುಂದರ ರೂಪವನ್ನೂ ತೇಜಸ್ಸನ್ನೂ ತಾರುಣ್ಯವನ್ನೂ ನೋಡಿ ಸಮಾಧಾನಪಟ್ಟನು. ಮತ್ತು ಅವನಿಗೆ ಕುಂಜವನದಲ್ಲಿ ಇರಗೊಟ್ಟನು. ರಣಮಸ್ತಖಾನನ ಪರಿವಾರವೇನೂ ದೊಡ್ಡದಿರಲಿಲ್ಲ. ಅವನ ತಾಯಿಯು ಕುಂಜವನದ ಬಂಗಲೆಯೊಳಗಿನ ಒಂದು ಕೋಣೆಯಲ್ಲಿ ಸಾಧುಸ್ತ್ರೀಯಂತೆ ಇರುತ್ತಿದ್ದಳು.

ರಣಮಸ್ತಖಾನನಿಗೆ ಆತನ ತಾಯಿಯು ಬಹು ವಂದ್ಯಳಾಗಿದ್ದಳು. ಒಂದು ದಿನ ಆಕೆಯು ಅವನನ್ನು ಕರೆಯಿಸಿ, ವಿಜಯನಗರದ ಕಡೆಯವರು ವಿಜಾಪುರದಿಂದ ಅಹಮದನಗರಕ್ಕೆ ಹೊರಟಿದ್ದ ಕೆಲವು ಸ್ತ್ರೀಯರನ್ನೂ ಅವರ ಪರಿವಾರದವರನ್ನೂ ಸೆರೆಹಿಡಿದುಕೊಂಡು ಒಯ್ದಿದ್ದಾರೆಂಬ ಸುದ್ದಿಯನ್ನು ಹೇಳಿ ಅವರನ್ನು ಬಿಡಿಸಿಕೊಂಡು ಬರಬೇಕೆಂದು ಕಳಕಳಿಯಿಂದ ಹೇಳಿದಳು. ಕೂಡಲೇ ರಣಮಸ್ತಖಾನನು "ಮಾಸಾಹೇಬ, ಅವರು ಸುರಕ್ಷಿತ ಬರುವವರೆಗೆ ನಾನು ಅನ್ನಗ್ರಹಣ ಮಾಡುವದಿಲ್ಲ" ಎಂದು ನುಡಿದು ವಿಜಯನಗರಕ್ಕೆ ಹೊರಟುಬಿಟ್ಟನು.

ಖಾನನು ಬಂದಾಗ ರಾಮರಾಜನು ತನ್ನ ವಾಡೆಯಲ್ಲಿ ಕುಳಿತಿದ್ದನು. ಅವನಿಗೆ ವಿಷಯವೆಲ್ಲ ತಿಳಿದಿತ್ತು. ಬಂದ ಖಾನನಿಗೆ ಕುಳಿತುಕೊಳ್ಳಲಿಕ್ಕೆ

ಸನ್ನೆ ಮಾಡಲು, ಆವನು ನಿಂತುಕೊಂಡೇ "ನಾನು ಕುಳಿತುಕೊಳ್ಳುವದಕ್ಕಾಗಿ ಬಂದಿರುವದಿಲ್ಲ. ನಾನು ಬಂದ ಕೆಲಸವಾದರೆ ಆಯಿತು. ಆ ಸ್ತ್ರೀಯರ ವಿಡಂಬನೆ ಮಾಡಬೇಡಿರಿ. ಅವರನ್ನಷ್ಟು ನಮಗೆ ಒಪ್ಪಿಸಿರಿ. ಹಿಂದುಗಡೆ ಬೇಕಾದಷ್ಟು ವಿಚಾರಣೆ ನಡೆಯಲಿ " ಎಂದನು.

ಅದಕ್ಕೆ ರಾಮರಾಜನು " ಹಿಂದುಗಳ ರಾಜ್ಯದಲ್ಲಿ ಹೆಂಗಸರ ವಿಡಂಬನೆಯ ಹೆಸರು ತೆಗೆಯಬೇಡಿರಿ. ಯಾರವರು ಅಲ್ಲಿ ? ಅವರೆಲ್ಲರನ್ನು ಕರೆ ತಂದು ನನ್ನ ಮುಂದೆ ನಿಲ್ಲಿಸಿರಿ. ಬಿಜಾಪುರದವರು ನಮ್ಮ ಮಿತ್ರರೆನಿಸಿಕೊಳ್ಳುತ್ತಿದ್ದರೂ ಅವರು ಅಹಮ್ಮದನಗರದವರೊಡನೆ ಒಕ್ಕಟ್ಟು ಬೆಳೆಸಿ ಕಾರ್ಯಸಾಧನೆ ನಡಸುತ್ತಿರುವರೆಂಬ ಸುದ್ದಿಯು ನಮ್ಮ ಕಿವಿಗೆ ಬಂದಿರುತ್ತದೆ. ಹೀಗೆ ಹೆಂಗಸರನ್ನು ಕಳಿಸುವ ನೆವದಿಂದ ಕಾಗದ ಪತ್ರಗಳ ಸಾಗಾಟವಾಗುತ್ತಿರುವದು. ಅದನ್ನಷ್ಟು ಪರೀಕ್ಷಿಸಿ ಆಮೇಲೆ ಬಿಟ್ಟುಬಿಡೋಣ " ಎಂದು ನುಡಿದನು.

ಈ ಮಾತುಗಳನ್ನು ಕೇಳಿ ರಣಮಸ್ತಖಾನನ ಕಣ್ಣುಗಳು ಕೆಂಡದಂತಾದುವು. ದರ್ಬಾರದಲ್ಲಿ ತಮ್ಮ ಸ್ತ್ರೀಯರನ್ನು ಕರೆತರಬಾರದೆಂದು ಎಷ್ಟು ಹೇಳಿದರೂ, ಅಲ್ಲಿ ತನ್ನ ಮಾತು ನಡೆಯದಿದ್ದುದ-ಕ್ಕಾಗಿ ಸಂತಾಪಗೊಂಡನು.

ರಾಮರಾಜನು ರಣಮಸ್ತಖಾನನತ್ತ ಲಕ್ಷ್ಯಕೊಡದೇ, ಅವರ ಕಡೆಗೆ ತಿರುಗಿ " ನಿಮ್ಮ ಬಳಿಯಲ್ಲಿ ರಾಜಕಾರಣದ ಪತ್ರಗಳೇನಾದರೂ ಇದ್ದರೆ ನಮಗೆ ಒಪ್ಪಿಸಿಬಿಡಿರಿ. ಅಂದರೆ ನಾವು ನಿಮ್ಮನ್ನು ಈಗಲೇ ಬಿಟ್ಟುಬಿಡುವೆವು. ನಿಜವಾಗಿ ನೋಡಿ-ದರೆ, ಬಿಜಾಪುರದಿಂದ ಅಹಮ್ಮದನಗರಕ್ಕೆ ಹೋಗುವಾಗ ನಮ್ಮ ಹದ್ದಿನೊಳಗಿಂದಲೇ ಹಾಯ್ದು ಹೋಗುವ ಅಗತ್ಯವಿಲ್ಲ. ಯಾಕೆ ? ಉತ್ತರಕೊಡಿರಿ '' ಎಂದು ಗದರಿಸಿದನು.

ಅದಕ್ಕೆ ಆ ಹಿಡಿದು ತಂದ ಮನುಷ್ಯರಲ್ಲಿ ಒಬ್ಬನು, " ಕಾಗದ ಪತ್ರಗಳೇನೂ ನಮ್ಮಲ್ಲಿರುವದಿಲ್ಲ. ನಮ್ಮ ಒಡೆಯನ ಮಗಳಾದ ಈ ಹೆಣ್ಣುಮಗಳು ಸಂಗನಪಲ್ಲಿಯ ದರಗೆಯ ದರ್ಶನಕ್ಕೆ ಹೋಗಬೇಕೆಂದಿದ್ದರಿಂದ ನಿಮ್ಮ ಹದ್ದಿನಲ್ಲಿ ಹಾಯಬೇಕಾಯಿತು" ಎಂದು ಉತ್ತರಕೊಟ್ಟನು.

" ಸರಿಸರಿ, ಈ ದರಗೆಯು ನಮಗೆ ಆಗದ ಮುಸಲ್ಮಾನರು ಗುಪ್ತಸಂಚುಗಳನ್ನು ಮಾಡಲಿಕ್ಕೆ ಯೋಗ್ಯ ಸ್ಥಳವೇ ಆಗಿದೆ. ಈಗಂತೂ ನಮ್ಮ ಸಂಶಯವು ಮತ್ತಿಷ್ಟು ಹೆಚ್ಚಾಯಿತು. ಈ ಗೋಷೆಯಲ್ಲಿದ್ದವರು ಹೆಣ್ಣು ಮಕ್ಕಳೇ ಇರುವರೋ ಎಂದು ಸಂಶಯ ಬರುತ್ತದೆ. ಆದ್ದರಿಂದ ಈ ಮೂವರೂ ಹೆಂಗಸರು ತಮ್ಮ ತಮ್ಮ ಬುರಕಿಗಳನ್ನು ತೆಗೆದರೆ ಅವರ ಬಿಡುಗಡೆಯಾಗುವದು. ಇಲ್ಲವಾದರೆ ಇಲ್ಲ '' ಎಂದು ರಾಮರಾಜನು ನುಡಿಯಲು, ರಣಮಸ್ತಖಾನನು ಕ್ರುದ್ಧ ಸ್ವರದಿಂದ " ಈ ಸ್ತ್ರೀಯರ ಬುರುಕಿಗಳನ್ನು ನಾನು ಕಾಲತ್ರಯದಲ್ಲಿಯೂ ತೆಗೆಯಗೊಡಲಿಕ್ಕಿಲ್ಲ '' ಎಂದು ಹೇಳಿದನು.

ಆದರೆ ಆಡಿದ ಮಾತನ್ನು ಹಿಂತೆಗೆದುಕೊಳ್ಳುವುದು ರಾಮರಾಜನಂಥವರ ಜೀವನದಲ್ಲಿ ನಡೆಯದ ವಿಷಯವಾಗಿತ್ತು. ಇತ್ತ ರಣಮಸ್ತಖಾನನು ತನ್ನ ಖಡ್ಗವನ್ನು ಒರೆಯಿಂದ ಹಿರಿದು, ಆ ಸ್ತ್ರೀಯರ ಬಳಿಯಲ್ಲಿ ನಿಂತು '' ನೀವು ಬುರಕಿಯನ್ನು ತೆಗೆದುಗಿಗದೀರಿ. ಯಾರು ನಿಮ್ಮನ್ನು ಮುಟ್ಟುತ್ತಾರೋ, ನೋಡುತ್ತೇನೆ" ಎಂದನು.

ಅದಕ್ಕೆ ರಾಮರಾಜನು—ನಿಮ್ಮ ಈ ದುರಾಗ್ರ-ಹವನ್ನು ನೋಡಿದರೆ ಈ ಜನರು ನಿಮ್ಮ ಕಡೆಗೇ ಕಾಗದಪತ್ರಗಳನ್ನು ತೆಗೆದುಕೊಂಡು ಹೊರಟಿರಬೇಕೆಂದು ಸಂಶಯ ಬರುತ್ತದೆ. ಈಗ ನಾನೇ ಕೈಮುಟ್ಟಿ ಅವರ ಬುರುಕೆಯನ್ನು ತೆಗೆಯತ್ತೇನೆ, ಎಂದು ಎದ್ದು ಬರಲು, ಆ ಸ್ತ್ರೀಯರಲ್ಲಿ ಮುಖ್ಯಳಾದ ತರುಣಿಯೊಬ್ಬಳು ಒಮ್ಮೆಲೆ ತನ್ನ ಬುರಕೆಯನ್ನು ಕಳಚಿ ಚೆಲ್ಲಿ, ತನ್ನ ಟೊಂಕದ ಮೇಲೆ ಕೈಯಿಟ್ಟುಕೊಂಡು ಮುಖವೆತ್ತಿ ನಿಂತಳು. ಆಗ ಆಕೆಯ ಮುಖದಿಂದ " ಅರಸಾ ! ನಿನ್ನ ಸಂಶಯವನ್ನು ದೂರ ಮಾಡಿಕೊ. ಆದರೆ ನೀನು ಸೆರಗಿಗೆ ಗಂಟು ಹಾಕಿಕೊ. ಇಂದಿನ ನಿನ್ನ ಈ ಕೃತಿಯ ಪರಿಣಾಮವು ಘೋರವಾಗುವುದು ! ಬಹಳ ಘೋರವಾಗುವುದು !" ಎಂದು ಹೊರಟ ಮಾತುಗಳು ಎಲ್ಲರ ಹೃದಯದಲ್ಲಿ ವಿಷಲಿಪ್ತ ಬಾಣಗಳಂತೆ ನಟ್ಟವು. ಎಲ್ಲರೂ ಭಯದಿಂದ ಆಕೆಯನ್ನು ನೋಡಹತ್ತಿದರು. ರಾಮರಾಜನು

ಕೂಡಲೇ ಅವರೆಲ್ಲರನ್ನು ರಣಮಸ್ತಖಾನನ ವಶ ಮಾಡಿದನು.

ಖಾನನು ಅವರನ್ನೆಲ್ಲ ಕರೆದುಕೊಂಡು ಕುಂಜ ವನದತ್ತ ಹೊರಟಾಗ, ವಿಚಾರದ ಗೊಂದಲದಲ್ಲಿ ಬಿದ್ದಿದ್ದನು. ರಾಮರಾಜನು ಆ ತರುಣಿಯ ಬುರ ಕಿಯನ್ನು ತೆಗೆಸಿ ಅನ್ಯಾಯ ಮಾಡಿದರೂ ಅದೊಂದು ತನ್ನ ಮೇಲೆ ದೊಡ್ಡ ಉಪಕಾರವೇ ಆಯಿತೆಂದು ಭಾವಿಸಿದನು. ಯಾಕಂದರೆ ಆ ತರುಣಿಯು ಅತ್ಯಂತ ರೂಪವತಿಯಾಗಿದ್ದಳು. ಆದರಿಂದ ಆ ತರುಣನ ಮನಸ್ಸು ಸಂಪೂರ್ಣ ಆಕರ್ಷಿತವಾಗಿಹೋಗಿತ್ತು.

ಇತ್ತ ರಾಮರಾಜನು ಬಹಳ ಪಶ್ಚಾತ್ತಾಪಕ್ಕೆ ಒಳಗಾಗಿದ್ದನು. ಅದೇಕೊ ಅವನಿಗೆ ತನ್ನ ಮೆಹೆರ್ಜಾನಳ ನೆನಪಾಯಿತು. ಅದು ಆತನ ತಾರುಣ್ಯದೊಳಗಿನ ಅತ್ಯಂತ ರಮಣೀಯವಾದ ಪ್ರಸಂಗವಾಗಿದ್ದಿತು. ಅವನಿಗೆ ಆ ರಾತ್ರಿ ನಿದ್ರೆ ಹತ್ತದಂತಾಗಲು ಒಬ್ಬನೇ ಕುಂಜವನಕ್ಕೆ ಹೊರಟುಬಿಟ್ಟನು.

ಅವನು ಬೆಳಗ್ಗೆ ಕುಂಜವನವನ್ನು ತಲುಪಿ-ದಾಗ, ಒಂದು ತಾಸು ಹೊತ್ತು ಏರಿತ್ತು. ಅವನು ಬಂದ ಸುದ್ದಿಯನ್ನು ಸೇವಕರು ರಣಮಸ್ತಖಾನ ನಿಗೆ ತಿಳಿಸಲು ಅವನಿಗೆ ಆಶ್ಚರ್ಯವಾಯಿತು.

ಅದನ್ನು ಶಮನ ಮಾಡುವದಕ್ಕಾಗಿ ರಾಮ ರಾಜನು, "ನಾನು ಸಹಜವಾಗಿ ಬಂದೆನು. ಈ ಕುಂಜವನದಲ್ಲಿ ನಾನು ಎಷ್ಟೋ ಸುಖದ ದಿವಸ ಗಳನ್ನು ಕಳೆದಿದ್ದೆನು. ಆದ್ದರಿಂದ ಯಾವಾಗಾದ ರೊಮ್ಮೆ ಇದನ್ನು ನೋಡಬೇಕೆಂಬ ಉತ್ಕಟೇ-ಚ್ಛೆಯು ನನಗೆ ಆಗುತ್ತಿರುತ್ತದೆ" ಎಂದನು.

"ತಾವು ನಿನ್ನಿನ ಪ್ರಸಂಗವನ್ನೆಲ್ಲ ಮರೆತು ಇಂದು ಬಂದದ್ದಕ್ಕಾಗಿ ನನಗೆ ಬಹಳ ಆನಂದ ವಾಗಿದೆ. ನೀವು ಬೇಕಾದಾಗ ಕುಂಜವನಕ್ಕೆ ಬರಬಹುದು" ಎಂದು ವಿನಯದಿಂದ ರಣಮಸ್ತ-ಖಾನನು ಹೇಳಿದನು.

"ನೀವು ಬಹಳ ಸುಜ್ಞರಿರುತ್ತೀರಿ. ನಿಮ್ಮನ್ನು ನೋಡಿ ನನಗೆ ಬಹಳ ಸಂತೋಷವಾಗಿರುತ್ತದೆ. ನಿನ್ನಿನ ಘಟನೆಯ ಬಗ್ಗೆ ನನ್ನಲ್ಲಿ ಏನೂ ಕುಭಾ-ವನೆ ಇರುವುದಿಲ್ಲ. ನಿಮ್ಮೊಡನೆ ಏಕಾಂತದಲ್ಲಿ ಕೆಲವು ಮಾತುಗಳನ್ನು ಆಡಬೇಕಾಗಿದೆ."

ಆದರೆ ರಾಮರಾಜನಿಗೆ ಏಕಾಂತದ ಮಾತು ಗಳನ್ನು ಹೇಳಲಿಕ್ಕೆ ಸಂಕೋಚವಾಗತೊಡಗಿತು. ಆತನಿಗೆ ರಣಮಸ್ತಖಾನನನ್ನು ನೋಡಿ ಒಂದು ಸಂಶಯವು ಉತ್ಪನ್ನವಾಗಿತ್ತು. ಗರ್ಭಿಣಿಯಾದ ಮೆಹೆರ್ಜಾನಳು ತನ್ನನ್ನು ಬಿಟ್ಟು ಹೋಗಿ ಮೂವತ್ತು ವರ್ಷಗಳಾಗುತ್ತ ಬಂದಿದ್ದವು. ಖಾನನ ರೂಪವು ರಾಮರಾಜನ ರೂಪವನ್ನೇ ಹೋಲುತ್ತಿದ್ದಿತು. ಮೇಲಾಗಿ ಮೆಹೆರಜಾನಳ ಮುಖಮುದ್ರೆಯ ಕೆಲವು ಚಿಹ್ನಗಳು ಅವನ ಮುಖದಲ್ಲಿ ತೋರುತ್ತಿದ್ದವು. ನಿನ್ನೆ ರಾತ್ರಿ ಇವೇ ವಿಚಾರಗಳು ಹೊಳೆದು ಕುಂಜವನದಲ್ಲಿ ಮೆಹೆ-ರ್ಜಾನಳು ಇರಬಹುದೆಂಬ ಸಂಶಯದಿಂದ ಹೊರಟು ಬಂದಿದ್ದನು. ಆದರೆ ಆ ಮಾತನ್ನು ಹೇಳದೇ ಬೇರೆ ಮಾತು ಆಡಿ ತಿರುಗಿ ಹೊರಟು ಬಿಟ್ಟನು.

ಆದರೆ ರಣಮಸ್ತಖಾನನ ಮನಸ್ಸನ್ನು ಅಪಹ ರಿಸಿದ್ದ ತರುಣಿ ನೂರಜಹಾನಳು, ರಾಮರಾಜನ ಬರುವಿಕೆಗೆ ಬೇರೆ ಅರ್ಥವನ್ನೇ ಕೊಟ್ಟಳು. ಅವಳು ರಣಮಸ್ತನಿಗೆ ಹೇಳಿದ್ದೇನೆಂದರೆ-"ನವಾಬ ಸಾಹೇಬರೇ, ನಿನ್ನೆ ಆ ದುಷ್ಟ ಹಿಂದೂ ರಾಜನು ಕೂಡಿದ ದರ್ಬಾರದಲ್ಲಿ ಎಲ್ಲ ಗಂಡಸರ ಮುಂದೆ ನನ್ನ ಲಜ್ಜಾಹರಣವನ್ನು ಮಾಡಿದನು. ಆ ನೀಚನು ಅಷ್ಟಕ್ಕೇ ಸುಮ್ಮನಿರದೆ ಇಂದು ಬೆಳಗಿ ನಲ್ಲಿ ನನ್ನನ್ನು ಅಪಹರಿಸುವದಕ್ಕಾಗಿಯೇ ಇಲ್ಲಿಗೆ ಬಂದನು. ಹಿಂದಕ್ಕೆ ಎಂದಾದರೂ ಹೀಗೆ ಬಂದಿ ದ್ದನೆ? ಬರಲಿ. ತಾನು ಯಾತರ ಸಲುವಾಗಿ ಬಂದನೆಂಬುದನ್ನು ನಿಮ್ಮ ಮುಂದೆ ಹೇಳಿದನೆ? ಈ ದುಷ್ಟನು ಹೀಗೆಯೇ ಎಷ್ಟು ಜನ ಮುಸಲ್ಮಾನ ತರುಣಿಯರ ಲಜ್ಜಾಹರಣವನ್ನು ಮಾಡುವನೋ? ಇನ್ನು ಯಾವನು ಈ ದುಷ್ಟನ ಶಾಸನ ಮಾಡು ವನೋ, ಯಾವನು ಈ ವಿಜಯನಗರ ರಾಜ್ಯ ವನ್ನು ನಷ್ಟಪಡಿಸುವನೋ ಆ ಪುರುಷ ಶ್ರೇಷ್ಠನೇ ನನಗೆ ಬುರಕಿಯನ್ನುಹೊದಿಸಲಿಕ್ಕೆ ಅಧಿಕಾರಿಯಾ ಗುವನು. ಒಬ್ಬ ಸುಂದರಿಯ ಸಂಸಾರಗೇಡನ್ನು ಇದೇ ದುಷ್ಟನೇ ಇದೇ ಕುಂಜವನದಲ್ಲಿ ಮಾಡಿದ

ನೆಂದು ನಾನು ಕೇಳಿದ್ದೇನೆ. ಅಂದ ಬಳಿಕ ನಮ್ಮಂಥ ತರುಣಿಯರು ತಮ್ಮ ಜನ್ಮವನ್ನು ಹೀಗೆಯೇ ಅವಿವಾಹಿತ ಸ್ಥಿತಿಯಲ್ಲಿ ಯಾಕೆ ಕಳೆಯಬಾರದು ?" ಎಂದು ಹೇಳಿದಳು.

ಆಕೆಯ ಪ್ರತಿಯೊಂದು ಶಬ್ದವು ಕಾದಸೀಸದ ರಸದಂತೆ ಅವನ ಕಿವಿಯೊಳಗೆ ಹಾದು ಹೋದಂತಾಯಿತು. ಆತನು ನೂರಜಹಾನಳನ್ನು ಕುರಿತು- "ನೆಟ್ಟಗಾಯಿತು. ನೀನು ಇಂದು ನನ್ನ ಕಣ್ಣುಗಳನ್ನು ತೆರೆದೆ! ನನ್ನಲ್ಲಿ ಏನಾದರೂ ಸಾಮರ್ಥ್ಯವಿದ್ದದ್ದೇ ನಿಜವಿದ್ದರೆ, ಆ ದುಷ್ಟನ ಶಾಸನವನ್ನು ಮಾಡಿ ತೀರುವೆ. ನನ್ನ ಬರ್ಚಿಯ ತುದಿಗೆ ಆ ದುಷ್ಟನ ರುಂಡವನ್ನು ಚುಚ್ಚಿಕೊಂಡು ಬಂದು ನಿನ್ನ ಚರಣದ ಮೇಲೆ ಕೆಡವುವೆನು. ಈ ಅಧಮನ ರಾಜ್ಯವನ್ನು ಮಣ್ಣುಗೂಡಿಸಿದ ಬಳಿಕವೇ ನನ್ನ-ನಿನ್ನ ಪಾಣಿಗ್ರಹಣದ ಮಾತು. ನನ್ನ ಈ ಪ್ರತಿಜ್ಞೆಯು ಒಂದು ವರ್ಷದೊಳಗೆ ನಿಜವಾಗದಿದ್ದರೆ ನಿನಗೆ ಮೋರೆ ತೋರಿಸಲಿಕ್ಕಿಲ್ಲ" ಎಂದು ಹೇಳಿದನು. ಮಗನ ಈ ಪ್ರತಿಜ್ಞೆಯನ್ನು ಅಕಸ್ಮಾತ್ತಾಗಿ ಅಲ್ಲಿಗೆ ಬಂದಿದ್ದ ಮಾಸಾಹೇಬರು ಕೇಳಿ ಚಕಿತರಾದರು.

ನೂರಜಹಾನಳು ರಣಮಸ್ತಖಾನನನ್ನು ಮನಮುಟ್ಟಿ ಪ್ರೀತಿಸುತ್ತಿದ್ದಳೇನೋ ನಿಜ. ಅವಳ ಪ್ರತಿಜ್ಞೆಯೊಂದು ಅವನಿಗೆ ದೊಡ್ಡ ಕಂಟಕವಾಗಿತ್ತು. ಎಷ್ಟೋ ವರ್ಷಗಳಿಂದ ಯಾವತ್ತೂ ಬಾಮನೀ ಬಾದಶಹರು ಪ್ರಪ್ರಯತ್ನದಿಂದ ಸಾಧಿಸದೆ ಇದ್ದ ಕಾರ್ಯವು ತನ್ನಂಥ ಒಬ್ಬನಿಂದ ಹೇಗೆ ಸಾಧಿಸಬೇಕೆಂಬ ವಿಚಾರವು ಅವನ ತಲೆಯಲ್ಲಿ ಬರತೊಡಗಿತ್ತು.

ಇತ್ತ ಅವಳು ಬಹು ಕುಲೀನ ಮನೆತನದವಳಾದ್ದರಿಂದ ತನ್ನಂಥವನನ್ನು ಹೇಗೆ ವರಿಸಿಯಾಳೆಂದೂ ಅವನು ಚಿಂತಾಪರನಾದನು. ಆತನ ಕುಲದ ವೃತ್ತಾಂತವನ್ನು ಅವನ ತಾಯಿಯು ಹೇಳಿರಲೇ ಇಲ್ಲ. ಅದಕ್ಕಾಗಿ ಅವನು ಒತ್ತಾಯಿಸಲು ಮಾಸಾಹೇಬರ ವೃದ್ಧ ದಾಸಿಯಾದ ಲೈಲಿಯು "ಒಡೆಯರೇ, ನಿಮ್ಮ ತಂದೆ-ತಾಯಿಗಳಿಬ್ಬರೂ ದೊಡ್ಡ ಮನೆತನದವರಿರುತ್ತಾರೆ. ಆದರೆ ಅವರಿಬ್ಬರ ಮನೆತನಗಳಲ್ಲಿ ದ್ವೇಷವಿದ್ದುದರಿಂದ ಗುಪ್ತವಾಗಿ ಅವರ ಮದುವೆಯಾಯಿತು. ಆ ನಂತರ ನಿಮ್ಮ ತಂದೆಯವರು ಅನಾದರ ಮಾಡಿ ಬಿಟ್ಟುಹೋದರು. ಅವರ ಹೆಸರನ್ನು ಮಾತ್ರ ಕೇಳಬೇಡಿರಿ. ಅವರಾಗಿ ನಿಮ್ಮ ತಾಯಿಯವರನ್ನು ಕರೆಸಿಕೊಳ್ಳುವ ತನಕ ಅದನ್ನು ಗುಪ್ತವಾಗಿಡಬೇಕೆಂದು ಮಾಸಾಹೇಬರು ಪ್ರತಿಜ್ಞೆಗೈದಿರುತ್ತಾರೆ. ಅವರು ನಿಮ್ಮ ಸಲುವಾಗಿ ಎಷ್ಟು ಕಷ್ಟಪಟ್ಟಿರುವರೆಂಬುದು ನಿಮಗೆ ಗೊತ್ತೇ ಇದೆ. ಅವರ ಮನಸ್ಸನ್ನು ನೋಯಿಸಬಾರದೆಂದು ನಿಮ್ಮ ಇಚ್ಛೆ ಇದ್ದರೆ ಇನ್ನೊಮ್ಮೆ ಈ ಪ್ರಶ್ನೆ ಮಾಡಬೇಡಿರಿ" ಎಂದು ಹೇಳಿದಳು.

ಇತ್ತ ನೂರಜಹಾನಳನ್ನು ಕಳಿಸಲಿಕ್ಕೆಂದು ರಣಮಸ್ತಖಾನನು ವಿಜಾಪುರಕ್ಕೆ ಬಂದಾಗ, ಅಲ್ಲಿ ಗುಪ್ತವಾಗಿ ಯುದ್ಧದ ಸುದ್ದಿಯೇ ಕೇಳಬರುತ್ತಿತ್ತು. ವಿಜಯನಗರದ ಮೇಲೆ ದಂಡೆತ್ತಿ ಹೋಗಲಿಕ್ಕೆ ಪ್ರತಿಯೊಬ್ಬನೂ ಆತುರನಾಗಿದ್ದನು. ರಣಮಸ್ತಖಾನನು, ಕೂಡಿದ ದರ್ಬಾರದಲ್ಲಿ ರಾಮರಾಜನು ಮಾಡಿದ ಅಪಮಾನವನ್ನು ಆವೇಶದಿಂದ ನಿವೇದಿಸಿದನು. ಇತರ ಸರದಾರರು ಇದರ ಸೇಡು ತೀರಿಸಿಕೊಳ್ಳಬೇಕೆಂದು ಮಾತಾಡಹತ್ತಿದರು. ಆದರೆ ಬಾದಶಹನು ಶಾಂತನಾಗಿದ್ದುಕೊಂಡು, "ಈ ವಿಷಯದಲ್ಲಿ ರಾಮದೇವರಾಯನ ಹೇಳಿಕೆಯನ್ನೂ ಕೇಳಿಕೊಳ್ಳಬೇಕು" ಎಂದು ಅವನಿಗೆ ಪತ್ರ ಬರೆದನು. ಇದರಿಂದ ಬಾದಶಹನು ರಾಮರಾಜನಿಗೆ ಹೆದರುತ್ತಾನೆಂದು ಜನರು ಅನ್ನತೊಡಗಿದರು. ಕೆಲವು ದಿನಗಳಲ್ಲಿ ಬಾದಶಹನ ಪತ್ರಕ್ಕೆ ರಾಮರಾಜನ ಉತ್ತರ ಬಂದಿತು. ಅದರಲ್ಲಿ ಅವನು ತನ್ನ ಉದ್ದೇಶವು ಕೆಟ್ಟದಿದ್ದಿಲ್ಲೆಂತಲೂ ಅವರು ನಿರಪರಾಧಿಗಳೆಂದು ಕಂಡಕೂಡಲೇ ಮರ್ಯಾದೆಯಿಂದ ಕಳಿಸಿದ್ದಾಗಿಯೂ ವಕೀಲರಾದ ರಣಮಸ್ತಖಾನರು ತಾರುಣ್ಯ ಭರದಲ್ಲಿ ದುಡುಕಿದ್ದರಿಂದ ಇಷ್ಟೆಲ್ಲ ಆಯಿತೆಂತಲೂ ಬರೆದಿದ್ದನು. ಕೊನೆಯಲ್ಲಿ—"ಇದೆಲ್ಲ ಕಾಮದೇವರ ಆಟವಿರುತ್ತದೆ. ನೀವು ನಿಮ್ಮ ವಕೀಲರ ಲಗ್ನವನ್ನು ಆ ಕುಮಾರಿಕೆಯೊಡನೆ ಮಾಡಿಬಿಡಿರಿ" ಎಂದೂ ಬರೆದಿದ್ದನು.

ರಣಮಸ್ತಖಾನನು ಮುಂದೆ ಇಂಥ ತಪ್ಪು

ಗಳನ್ನು ಮಾಡದಂತೆ ಅವನ ಮೇಲೆ ಖಾನಬಖಾನನನ್ನು ವಿಜಯನಗರದ ಮುಖ್ಯ ವಕೀಲನನ್ನಾಗಿ ನೇಮಿಸಿರುತ್ತದೆಂತಲೂ ಅವನ ಕೈಕೆಳಗೆ ರಣಮಸ್ತಖಾನನು ಕೆಲಸಮಾಡಬೇಕೆಂತಲೂ ಬಾದಶಹನು ಆಜ್ಞಾಪಿಸಿದನು.

ಈ ರೀತಿಯಾಗಿ ಅಪಮಾನ ಹೊಂದಿ ಖಾನನು ಕುಂಜವನಕ್ಕೆ ತಿರುಗಿದನು. ಅವನ ವೃತ್ತಿಯು ಈಗ ಬಹಳ ಉದಾಸೀನವಾಯಿತು. ಆತನು ಬಹುತರ ಯಾರ ಸಂಗಡಲೂ ಮಾತನಾಡದಾದನು. ನೂರಜಹಾನಳು ದೂರವಾದಳೆಂದು ಅವನ ಚಿಂತೆಯು ಹೆಚ್ಚಿರುವದಾಗಿ ಮಾಸಾಹೇಬರು ಯೋಚಿಸಿ, ಅವನಿಗೆ ಕಕ್ಕುಲಾತಿಯಿಂದ ಸಮಾಧಾನ ಹೇಳಿ ನೋಡಿದರು. ಆದರೆ ಪ್ರಯೋಜನವಾಗಲಿಲ್ಲ. ಕೊನೆಗೆ ಅವರೇ ನೂರಜಹಾನಳಿಗಾಗಿ ಪ್ರಯತ್ನಿಸುವೆವೆಂದು ನಿರ್ಧಾರ ಮಾಡಿ ವಿಜಾಪುರಕ್ಕೆಹೊರಟುಬಿಟ್ಟರು.

ಅವರು ತಿರುಗಿ ಬರುವಾಗ, ಒಂದು ದೊಡ್ಡ ದುರ್ಧರ ಪ್ರಸಂಗವೇ ಕಾದಿತ್ತು. ತಾವು ಊರಲ್ಲಿಲ್ಲದಾಗ, ರಾಮರಾಜನು ಒಂದೆರಡು ಬಾರಿ ಬಂದಿದ್ದನೆಂತಲೂ ಅವರೊಳಗೆ ಗುಪ್ತಮಾತುಗಳು ಆದುವೆಂತಲೂ ಅನಂತರ ರಣಮಸ್ತಖಾನನೂ ದಿನ ಬಿಟ್ಟು ದಿನ ವಿಜಯನಗರಕ್ಕೆ ಎಡತಾಕುತ್ತಿರುವನೆಂತಲೂ ಸೇವಕರು ಸುದ್ದಿಯನ್ನು ಮುಟ್ಟಿಸಿದರು. ಅದನ್ನು ಕೇಳಿ, ಅವರ ಜಂಘಾಬಲವೇ ಉಡುಗಿದಂತಾಯಿತು.

ರಣಮಸ್ತಖಾನನು ತನ್ನನ್ನು ಬಂದು ಕೂಡಿಕೊಂಡದ್ದನ್ನು ತಿಳಿದು ರಾಮರಾಜನಿಗೆ ಮಹದಾನಂದವಾಗಿತ್ತು. ಇದುವರೆಗಿನ ತನ್ನ ವ್ಯೂಹರಚನೆಯ ಕಾರ್ಯಗಳಲ್ಲಿ ರಣಮಸ್ತನನ್ನು ತನ್ನ ಕಡೆಗೆ ಒಡಕೊಂಡದ್ದು ಹೆಚ್ಚಿನದೆಂದು ಭಾವಿಸಹತ್ತಿದನು. ಮುಸಲ್ಮಾನ ಬಾದಶಹರ ಮರ್ಮಸ್ಥಾನಗಳೂ, ಆ ಸೈನ್ಯಗಳು ಯುದ್ಧ ಮಾಡುವ ರೀತಿಯೂ ಗೊತ್ತಿದ್ದ ಒಬ್ಬ ಮುಸಲ್ಮಾನ್ ಸರದಾರನೇ ತನ್ನ ಕಡೆಗೆ ಬಂದಿದ್ದನು. ರಣಮಸ್ತಖಾನನನ್ನು ವಿಜಯನಗರದಲ್ಲಿಯ ಪಠಾಣ ಹಾಗೂ ಅರಬ ದಂಡಾಳುಗಳ ಅಧಿಕಾರಿಯನ್ನಾಗಿ ನೇಮಿಸಿ, ಆ ಸೈನ್ಯವನ್ನು ತರಬೇತುಗೊಳಿಸಬೇಕೆಂತಲೂ ಆ ಮೇಲೆ ನಾಲ್ವರು ಬಾದಶಹರೂ ಒಟ್ಟಾಗುವಂತೆ ತಾನೇ ಪೀಡಿಸಿ ಅವರನ್ನೆಲ್ಲ ಸಮೂಲ ನಾಶಗೊಳಿಸಬೇಕೆಂತಲೂ ಲೆಕ್ಕ ಹಾಕಹತ್ತಿದನು.

ಇತ್ತ ರಣಮಸ್ತಖಾನನು ತನ್ನ ತಾಯಿಗೂ ವಿಜಾಪುರದ ಬಾದಶಹನಿಗೂ ತಾನು ರಾಮರಾಜನ ನೌಕರಿಯನ್ನು ಸ್ವೀಕರಿಸಿದ ಬಗ್ಗೆ ಪತ್ರ ಬರೆದು ತಿಳಿಸಿಬಿಟ್ಟನು. ಅದಕ್ಕೆ ಬಾದಶಹನು ರಾಮರಾಜನಿಗೆ — "ನಮ್ಮ ನೌಕರಿಯಲ್ಲಿದ್ದ ರಣಮಸ್ತಖಾನನನ್ನು ನೀವು ನಮ್ಮನ್ನು ಕೇಳದೇ ಹೇಗೆ ಸೇರಿಸಿಕೊಂಡಿರಿ? ಇದರಿಂದ ನಮ್ಮ ನಿಮ್ಮ ಸ್ನೇಹಸಂಬಂಧಕ್ಕೆ ಕೊರತೆಯುಂಟಾಗಿರುತ್ತದೆ. ಅವನು ನಿಮ್ಮ ತಾಬೇದಾರನು. ನಮ್ಮ ಅಪರಾಧಿಯು. ಆದ್ದರಿಂದ ಅವನನ್ನು ಕೂಡಲೇ ನಮ್ಮ ವಶಕ್ಕೆ ಒಪ್ಪಿಸಬೇಕು" ಎಂದು ಪತ್ರ ಬರೆದನು.

ರಾಮರಾಜನು ಆ ಪತ್ರವನ್ನು ಓದಿ ನಕ್ಕು, ಅಲ್ಲಿಯೆ ಇದ್ದ ರಣಮಸ್ತಖಾನನಿಗೆ ಕೊಟ್ಟನು. ಅವನನ್ನು ಬೆನ್ನಿಗೆ ಹಾಕಿಕೊಂಡಿದ್ದರಿಂದ ತಾನು ಎಂಥ ವಿಪತ್ತಿಗೆ ಗುರಿಯಾಬೇಕಾಗುವುದು ಎಂಬುದನ್ನು ಖಾನನ ಮನಸ್ಸಿನಲ್ಲಿ ತುಂಬಬೇಕಾಗಿದ್ದಿತು.

ಪತ್ರವನ್ನು ಓದುವುದಾದ ಮೇಲೆ ಖಾನನು-- ಮಹಾರಾಜ, ನನ್ನ ಸಲುವಾಗಿ ನಿಮ್ಮ ಮೇಲೆಯೂ, ನಿಮ್ಮ ರಾಜ್ಯದ ಮೇಲೆಯೂ ಭಯಂಕರ ಪ್ರಸಂಗವನ್ನು ತಂದುಕೊಂಡು ನನ್ನನ್ನು ಕಾಪಾಡಿರೆಂದು ಹೇಗೆ ಹೇಳಲಿ? ಅತ್ತ ವಿಜಾಪುರದಲ್ಲಿದ್ದು ಒಂದರಹಿಂದೊಂದು ಅಪಮಾನವನ್ನು ಸಹಿಸಲಿಕ್ಕೆ ಮನಸ್ಸು ಒಪ್ಪದಾಯಿತು. ಇನ್ನು ನಿಮ್ಮ ಸವಿಮಾತುಗಳು ನನ್ನನ್ನು ಮರುಳು ಮಾಡಿದವು. ಆದ್ದರಿಂದ ತಾವು ಪೂರ್ಣ ವಿಚಾರ ಮಾಡಿ ನನಗೆ ಆಶ್ರಯವನ್ನು ಕೊಡಬೇಕು. ಇಲ್ಲವೆ ಬಾದಶಹರಿಗೆ ಒಪ್ಪಿಸಬೇಕು. ನಾನು ಕೇವಲ ರಾಜದ್ರೋಹವನ್ನಷ್ಟೆ ಮಾಡಲಿಲ್ಲ. ನನ್ನಿಂದ ಮಾತೃದ್ರೋಹವೂ ಘಟಿಸಿರುತ್ತದೆ. ನನ್ನ ತಾಯಿಯು ಅತ್ಯಂತ

ಧರ್ಮಿಷ್ಠೆಳು. ಅತ್ಯಂತ ದೃಢನಿಶ್ಚಯದವಳು. ಅವರ ಮನಸ್ಸಿಗೆ ಬಾರದ ಕೆಲಸವನ್ನು ನಾನು ಮಾಡಿಡೆನು. ನಾನು ತಮ್ಮ ಪಾಲಿಗೆ ಸತ್ತಿರುವೆನೆಂದೇ ಅವರು ತಿಳಿದಿರುವರು.

ರಾಮರಾಜ— (ಚಮತ್ಕಾರದ ಧ್ವನಿಯಿಂದ) ಅವರು ಇಷ್ಟು ದೃಢಸ್ವಭಾವದವರಿರುತ್ತಾರಲ್ಲವೆ?

ರಣಮಸ್ತಖಾನ—ಹೌದು. ನಿಮಗೆ ಅವರ ಸ್ವಭಾವ ಪರಿಚಯವಿಲ್ಲ. ಅವರ ಸ್ವಭಾವವು ಪ್ರೇಮಲವಿದ್ದಷ್ಟೆ ಕಠೋರವೂ ಆಗಿರುವದು.

ರಾಮರಾಜನು ಪ್ರೀತನಾಗಿ—"ಖಾನರೇ, ಕ್ಷತ್ರಿಯರು ಒಮ್ಮೆ ಬೆನ್ನಿಗ ಹಾಕಿಕೊಂಡರೆಂದರೆ ಬಿಟ್ಟುಕೊಡುವುದೆಂಬುದಿಲ್ಲ. ನೀವಂತು ನಾನು ಕರೆದದ್ದರಿಂದಲೇ ಬಂದವರು. ಇಂಥವರನ್ನು ಶತ್ರುವಿಗೆ ಹೇಗೆ ಒಪ್ಪಿಸಿಯೇನು? ಇನ್ನೊಮ್ಮೆ ನೀವು ಇಂಥ ಮಾತನಾಡಬೇಡಿರಿ" ಎಂದು ಹೇಳಿದನು. ಮತ್ತು ಅದೇ ಆಶಯದ ಉತ್ತರವನ್ನು ವಿಜಾಪುರದ ಬಾದಶಹನಿಗೆ ಬರೆದು ತಿಳಿಸಿದನು.

ಅದಕ್ಕೆ ಬಾದಶಹನು ರಾಮರಾಜನಿಗೆ ಒಂದು ನಿಗ್ರಹದ ಪ್ರತ್ಯುತ್ತರವನ್ನು ಬರೆದನು. ಅದರಲ್ಲಿ ಅವನು "ರಣಮಸ್ತಖಾನನಿಗೆ ನೀವು ಆಶ್ರಯ ಕೊಡುವುದೆಂದರೆ ನೀವು, ನಮ್ಮೊಡನೆ ಇದ್ದ ನಿಮ್ಮ ಸ್ನೇಹ ಸಂಬಂಧವನ್ನು ಬುದ್ಧಿಪೂರ್ವಕವಾಗಿ ಮುರಿಯೋಣವೆಂದು ನಾವು ತಿಳಕೊಳ್ಳುತ್ತೇವೆ. ಹಿಂದಕ್ಕೆ ಇದೇ ರಣಮಸ್ತಖಾನನೇ ನಿಮ್ಮ ದರಬಾರದಲ್ಲಿ ನಿಮ್ಮ ಅಪಮಾನ ಮಾಡಿದ್ದನ್ನು ಬರೆದಿದ್ದಿರಿ. ನಮ್ಮ ಗೌರವವನ್ನು ಕಾಯ್ದುಕೊಳ್ಳುವ ದೃಷ್ಟಿಯಿಂದ ಆಗ ಅವನನ್ನು ಸಮರ್ಥಿಸುವುದು ಯೋಗ್ಯವಿದ್ದರೂ ನಮ್ಮ ನಿಮ್ಮ ಸ್ನೇಹಸಂಬಂಧವನ್ನು ಕಾಯ್ದುಕೊಳ್ಳುವುದಕ್ಕಾಗಿ, ರಣಮಸ್ತಖಾನನ ಅಧಿಕಾರವನ್ನು ಕಡಿಮೆ ಮಾಡಲಿಕ್ಕೂ ನಾವು ಹಿಂಜರಿಯಲಿಲ್ಲ. ಮುಂದಿನ ಅನರ್ಥವನ್ನು ತಪ್ಪಿಸಬೇಕೆಂಬ ವಿಚಾರವಿದ್ದರೆ ಈ ಪತ್ರವನ್ನು ತಂದ ವಕೀಲರಿಗೆ ರಣಮಸ್ತಖಾನನನ್ನು ಒಪ್ಪಿಸಬೇಕು. ಇದರ ಮೇಲೆ ನಿಮ್ಮಿಷ್ಟ" ಎಂದು ತಿಳಿಸಿದ್ದನು.

ಈ ಪತ್ರವನ್ನು ರಾಮರಾಜನು ಖಾನನ ಕೈಗಿತ್ತನು. ರಣಮಸ್ತನು ಅದೇ ಬಗೆಯ ಮಾತುಗಳನ್ನಾಡಲು, ರಾಮರಾಜನು ಅವನ ಎರಡೂ ಭುಜಗಳ ಮೇಲೆ ಕೈಯಿಟ್ಟು, "ನೀನು ಹೀಗೆ ಮಾತನಾಡಬೇಕೆಂದು ನಾನು ನಿನ್ನ ಕಡೆಗೆ ಪತ್ರವನ್ನು ಕೊಡಲಿಲ್ಲ. ಬೆನ್ನುಬಿದ್ದವರನ್ನು ಹೊಟ್ಟೆಯ ಮಕ್ಕಳಂತೆ ನೋಡುವುದು ನಮ್ಮ ಹಿಂದೂ ಜನರ ಶೀಲವಾಗಿರುವುದು. ನಿನ್ನನ್ನು ಒಪ್ಪಿಸುವುದು ಒತ್ತಟ್ಟಿಗಿರಲಿ, ನಿನ್ನ ಅರಗಿಳಿಯಾದ ನೂರಜಹಾನಳನ್ನು ನಮಗೆ ಒಪ್ಪಿಸಬೇಕು. ಹಾಗೆ ಮಾಡದಿದ್ದರೆ ನಾವೇ ವಿಜಾಪುರದ ತನಕ ಸೈನ್ಯಸಮೇತ ಬರಬೇಕಾಗುವದೆಂತಲೂ ಬರೆಯುತ್ತೇನೆ" ಎಂದು ಹೇಳಿದನು.

.

ಹೀಗೆ ಪತ್ರಗಳು ಓಡಾಡುವ ಹಿನ್ನೆಲೆಯಲ್ಲಿ ಎರಡೂ ಕಡೆಗ ಸಮರಸನ್ನಾಹಗಳು ನಡೆಯ ತೊಡಗಿದುವು. ರಾಮರಾಜನು ಎಲ್ಲ ಮುಸಲ್ಮಾನ ಬಾದಶಹರನ್ನು ಒಬ್ಬೊಬ್ಬರನ್ನೇ ಒಮ್ಮೆ ಸೋಲಿಸಿದ್ದರಿಂದ ಅವನು ಮದಾಂಧನಾಗಿದ್ದನು. ಅಷ್ಟೇ ಅಲ್ಲದೆ ಎಲ್ಲ ಬಾದಶಹರೂ ಒಟ್ಟಾಗಿ ಒಮ್ಮೆ ಏರಿಬಂದರೆ ಎಲ್ಲರನ್ನೂ ಒಂದೇ ಪೆಟ್ಟಿಗೆ ಸದೆಬಡೆಯಲಿಕ್ಕಾಗುವದೆಂದು ಇಚ್ಛಿಸಹತ್ತಿದನು. ಅವನ ವಿಚಾರವು ಯೋಗ್ಯವಾದದ್ದಿದ್ದರೂ ತನ್ನ ಹಾಗೂ ತನ್ನ ಸೈನ್ಯದ ಸಾಮರ್ಥ್ಯದ ವಿಷಯವಾಗಿ ಇದ್ದ ಆತನ ವಿಶ್ವಾಸವು ಇರಬೇಕಾದ್ದಕ್ಕಿಂತ ಹೆಚ್ಚು ಇತ್ತು. ಈ ಮದದ ಜೊತೆಗೆ ರಣಮಸ್ತಖಾನನ ಮೇಲಿನ ಪುತ್ರವ್ಯಾಮೋಹವೂ ಅವನ ಜಾಗರೂಕತೆಯನ್ನು ಮಣ್ಣುಗೂಡಿಸಿತು.

ವಿಜಾಪುರದ ಅಲ್ಲಿ ಆದಿಲಶಹನು ಮಹಾ ಧೂರ್ತನಿದ್ದನು. ಉಳಿದ ಬಾದಶಹರ ವಿಶ್ವಾಸವು ಗಟ್ಟಿಮುಟ್ಟಾಗಿ ಉಳಿಯಲೆಂದು ಅವನು ತಂಗಿಯನ್ನು ಅಹಮ್ಮದನಗರದ ಹುಸೇನ ನಿಜಾಮಶಹನ ಮಗನಿಗೆ ಲಗ್ನ ಮಾಡಿಕೊಟ್ಟನು. ಅವನ ಮಗಳಾದ ಚಾಂದಬೀಬಿಯನ್ನು ತಾನು ಮದುವೆಯಾದನು. ಈ ಸುದ್ದಿಯು ರಾಮರಾಜನ ಕಿವಿಗೆ ಬಿದ್ದಾಗ, "ಮಾಡಲಿ. ಆ ಬಾದಶಹನು ಈ ಬಾದಶಹನ ಮಗಳನ್ನು ಲಗ್ನ ಮಾಡಿಕೊಂಡರೆ ಸೈನ್ಯದ ಸಾಮರ್ಥ್ಯವನ್ನು ಹೆಚ್ಚಿಸಿದ ಹಾಗಾಗು

ವುದೋ ? ಈ ಜಟ್ಟಿಗಳು ಮಾಡಬೇಕಾಗಿದ್ದ ಒಕ್ಕಟ್ಟನ್ನು ಗಟ್ಟಿಮುಟ್ಟಾಗಿ ಮಾಡಿಕೊಂಡು ನಮ್ಮನ್ನು ಕೆಣಕಬಾರದೆ ?" ಎಂದು ನುಡಿದನು.

ಈ ಮಧ್ಯೆ ರಾಮರಾಜನಿಗೆ ದಿನದಿನಕ್ಕೆ ರಣಮಸ್ತಖಾನನಲ್ಲಿ ವಾತ್ಸಲ್ಯವು ಹೆಚ್ಚುತ್ತ ಹೋಯಿತು. ರಾಮರಾಜನು ಈ ಪರಿ ತನ್ನನ್ನು ಪ್ರೀತಿಸುವದರಲ್ಲಿಯೂ ತನ್ನ ಹಿತವಿದೆಯೆಂದು ತಿಳಿದು ರಣಮಸ್ತನು ರಾಮರಾಜನಿಗೆ ಅಂದದ್ದೇನಂದರೆ—"ಮಹಾರಾಜ, ತನ್ನ ಒಡೆಯನ ಮೇಲೆ ತಿರುಗಿ ಬಿದ್ದು ಶತ್ರುಪಕ್ಷದ ಚಾಕರಿಗೆ ನಿಂತವನ ಸಂಗಡ ಬಹು ಎಚ್ಚರದಿಂದ ನಡೆಯಬೇಕಾಗುವದು. ಹೀಗಿದ್ದು ನೀವು ನನ್ನನ್ನು—" ಹೀಗೆ ನುಡಿಯುತ್ತಿರಲು, ರಾಮರಾಜನು ನಡುವೇ ಬಾಯಿ ಹಾಕಿ, "ಛೀ, ಛೀ, ಇಂಥ ವಿಚಾರವನ್ನು ನೀನು ತರಲೇ ಬಾರದು. ನಾನಂತೂ ನಿನ್ನನ್ನು ನನ್ನ ಅಂಗರಕ್ಷಕನನ್ನಾಗಿ ನಿಯಮಿಸಬೇಕೆಂದು ಮಾಡಿದ್ದೇನೆ" ಎನ್ನಲು—

"ಅಲಬತ್! ಅವಶ್ಯವಾಗಿ ಆಗಲಿ. ಅಂಗರಕ್ಷಕನಾಗಿರುವಾಗ ನಾನು ಮಾಡುವ ಕೆಲಸವು ಮಹಾರಾಜರ ಕಣ್ಣಿಗೆ ಬಿದ್ದಂತೆ ಬೇರೆ ಪ್ರಸಂಗದಲ್ಲಿ ಬೀಳಲಾರದು. ಆದರೆ ಒಮ್ಮೆಲೇ ನನ್ನನ್ನು ಆ ಸ್ಥಾನಕ್ಕೆ ಏರಿಸಿದರೆ ನಿಮ್ಮಜನರು ಮೆಚ್ಚುವರೆ? ಸದ್ಯಕ್ಕೆ ನಾನು ನಿಮ್ಮ ಪಠಾಣ ಸೈನ್ಯದ ವ್ಯವಸ್ಥೆಯನ್ನೆ ನೋಡುವೆನು" ಎಂಬುದಾಗಿ ರಣಮಸ್ತಖಾನನು ನುಡಿದನು.

ನಾಲ್ವರೂ ಬಾದಶಹರ ಸೈನ್ಯಗಳು ವಿಜಾಪುರದಲ್ಲಿ ಒಟ್ಟುಗೂಡಿವೆಯೆಂಬ ಸುದ್ದಿಯನ್ನು ಕೇಳಿ ರಾಮರಾಜನೂ ಅಣಿಯಾದನು. ಸೈನ್ಯದೊಳಗಿನ ವೀರರಲ್ಲಿ ತನಗೆ ಭೆಟ್ಟಿಯಾದವರಿಗೆಲ್ಲ "ಶ್ರೀ ವಿಜಯ ವಿಠ್ಠಲನು ನಮಗೆ ಅತ್ಯುತ್ತಮ ಪ್ರಸಂಗವನ್ನು ಒದಗಿಸಿ ಕೊಟ್ಟಿರುತ್ತಾನೆ. ಈ ಪ್ರಸಂಗದಲ್ಲಿ ನಾವು ವೀರರಂತೆ ಯುದ್ಧ ಮಾಡಿದರೆ ಭರತಖಂಡದ ತುಂಬ ನಮ್ಮ ರಾಜ್ಯವು ಹಬ್ಬುವುದು. ಮನುಷ್ಯನಿಗೇನು ರಾಜ್ಯಕ್ಕೇನು ಇಂಥ ಮಹತ್ವದ ಪ್ರಸಂಗವು ಒಂದೆಂದರೆ ಒಂದೇ ಸಾರೆ ಬರುವುದು" ಎಂಬುದಾಗಿ ಹುರಿದುಂಬಿಸುತ್ತಿದ್ದನು.

ಈ ಸಂದರ್ಭದಲ್ಲಿ ರಣಮಸ್ತಖಾನನ ಉತ್ಕಂಠೆ ಹೇಳತೀರದಷ್ಟಿತ್ತು. ಅವನ ಗುಪ್ತ ಚಾರರು ಬಂದು ರಾಮರಾಜನಿಗೆ ಏನೇನೊ ಸುದ್ದಿಗಳನ್ನು ಹೇಳುತ್ತಿದ್ದರು. ತನಗಾಗಿ ಅವನು ಇಷ್ಟೆಲ್ಲ ಮಾಡುತ್ತಿದ್ದಾನೆಂದು ತಿಳಿದು, "ರಕ್ತ ಸಂಬಂಧವಿದ್ದ ಕಡೆಗೆ ಮನಸ್ಸು ಒಲಿಯುತಕ್ಕದ್ದು" ಎಂದು ತರ್ಕಿಸಿ ಕೌತುಕಪಡುತ್ತಿದ್ದನು. ಅದರ ಭರದಲ್ಲಿ ರಣಮಸ್ತಖಾನನಿಗೆ ಅವನ ಜನ್ಮ ವೃತ್ತಾಂತವನ್ನು ಹೇಳಿಬಿಡಬೇಕೆಂದವನು, "ಈಗ ಬೇಡ, ಯುದ್ಧ ಮುಗಿಯಲಿ. ಅವನು ಥಕ್ಕನೆ ಸಿಟ್ಟಿಗೆದ್ದು ತಿರುಗಿಬಿದ್ದರೆ ಎಲ್ಲವೂ ಕೆಟ್ಟುಹೋಗುವುದು" ಎಂಬುದಾಗಿ ಸುಮ್ಮನಿದ್ದನು.

ಆದರೆ ರಣಮಸ್ತಖಾನನ ಕಪಟನಾಟಕವು ಪುತ್ರವ್ಯಾಮೋಹದಲ್ಲಿದ್ದ ರಾಮರಾಜನಿಗೆ ಗೊತ್ತೇ ಆಗಲಿಲ್ಲ. ಅವನ ಕೃತಿಗಳೆಲ್ಲವೂ ವಿಜಾಪುರದ ಬಾದಶಹನ ಅತಿ ಗುಪ್ತವಾದ ಆಲೋಚನೆಯಿಂದಲೇ ನಡೆದಿದ್ದುವು. ವಿಜಯನಗರದ ರಾಜಕಾರಣದ ಸುದ್ದಿಗಳೂ ಸೈನ್ಯದ ಚಲನವಲನಗಳೂ ಬಾದಶಹನ ಕಿವಿಗೆ ಮುಟ್ಟುತ್ತಿದ್ದುವು. ಇದರ ಗಂಧವು ಸಹಿತ ಯಾರಿಗೂ ಗೊತ್ತಿದ್ದಿಲ್ಲ. ಸ್ವತಃ ಉಳಿದ ಮೂವರು ಬಾದಶಹರು ರಣಮಸ್ತಖಾನನನ್ನು ದ್ರೋಹಿಯೆಂತಲೆ ಭಾವಿಸಿದ್ದರು.

ಇತ್ತ ಶತ್ರುಗಳು ಬೀಳುವುದಕ್ಕಾಗಿ ಕಾಯದೆ ವಿಜಯನಗರದ ಸೈನ್ಯವನ್ನೆಲ್ಲ ಮೂರು ತಂಡಗಳಾಗಿ ಮಾಡಿ, ತುಂಗಭದ್ರೆಯ ಕಾಲು ಹೊಳೆಯ ಸ್ಥಾನಗಳನ್ನು ದಾಟಿ, ಮುಂದೆ ಸಾಗಿದುವು. ಆ ಪ್ರಚಂಡ ಸೈನ್ಯದ ಎದುರು ನಿಲ್ಲುವುದು ತನಗಾಗದು ಎನ್ನುವಂತೆ ಶತ್ರುಗಳು ಹಿಂದೆಗೆಯತೊಡಗಿದರು. ಇದರಿಂದ ರಾಮರಾಜನೂ ಅವನ ಬಂಧುಗಳೂ ಬಹಳ ಸಂತೋಷಪಟ್ಟರು.

ಅಷ್ಟರಲ್ಲಿ ಚಾರರು, ಶತ್ರುಗಳು ಕೃಷ್ಣೆಯ ದಂಡೆಯಲ್ಲಿ ತಳವೂರಿದರೆಂಬ ಸುದ್ದಿಯನ್ನು ತಂದರು. ರಾಮರಾಜನು ಮೊದಲು ತನ್ನ ಸೈನ್ಯವನ್ನು ವಿಶ್ರಮಿಸಗೊಟ್ಟು, ರಾತ್ರಿ ರಣಮಸ್ತಖಾನನನ್ನು ಕರೆಸಿ ಹೇಳಿದನು. "ನಿನ್ನ ಅರಗಿಳಿಯಾದ ನೂರಜಹಾನಳು ಪುರುಷವೇಷದಲ್ಲಿ

ಹೊರಟಿದ್ದಾಗ ಅಕಸ್ಮಾತ್ ನಮ್ಮ ಕೈಗೆ ಸಿಕ್ಕಿದ್ದಾಳೆ. ಅವಳನ್ನು ಒಂದು ಗುಪ್ತ ಸ್ಥಳದಲ್ಲಿ ಇಟ್ಟಿದ್ದೇನೆ. ಅದನ್ನೀಗ ಹೇಳುವುದಿಲ್ಲ. ಯುದ್ಧ ಮುಗಿದ ಕೂಡಲೇ ಅವಳನ್ನು ನಿನಗೆ ಒಪ್ಪಿಸುವೆನು. ಇನ್ನು ನಿಶ್ಚಿಂತನಾಗಿರು." ರಾಮರಾಜನು ಸ್ತ್ರೈಣನಾದುದರಿಂದ ಅವಳನ್ನು ತನ್ನ ಅಂತರ್ಗೃಹದಲ್ಲಿ ಸೇರಿಸಿಕೊಂಡಿರಬಹುದು ಎಂದು ರಣಮಸ್ತಖಾನನು ಕ್ರುದ್ಧನಾದರೂ ಅದನ್ನು ತೋರಗೊಡದೆ ಯುದ್ಧವಾರ್ತೆಯ ಕಡೆಗೆ ವಿಷಯ ತಿರುಗಿಸಿದನು. ವಿಜಯನಗರದ ಸಮಸ್ತ ಸೈನ್ಯವು ಮುಸಲ್ಮಾನ್ ಸೈನ್ಯದ ಮೇಲೆ ಬಿದ್ದುದಾದರೆ ಅದರ ಗತಿ ನೆಟ್ಟಗಾಗಲಿಕ್ಕಿಲ್ಲವೆಂದು ರಣಮಸ್ತನು ತಿಳಿದೇ ಇದ್ದನು. ಅದಕ್ಕಾಗಿ ಅವನು,

"ಮಹಾರಾಜ, ಇದೀಗ ಒಂದು ಮಹತ್ವದ ವಾರ್ತೆಯು ಬಂದಿದೆ. ವೈರಿಗಳು ತೋರಿಕೆಗೆ ಇಲ್ಲಿ ಸ್ವಲ್ಪ ಸೈನ್ಯವನ್ನಿಟ್ಟು ಮುಖ್ಯ ಸೈನ್ಯವನ್ನು ತುಂಗಭದ್ರೆಯ ದಕ್ಷಿಣ ದಿಕ್ಕಿನ ಕಾಲು ಹೊಳೆಯಿಂದ ಸಾಗಿಸಿ ವಿಜಯನಗರದ ಮೇಲೆ ದಾಳಿ ಮಾಡುವ ವಿಚಾರದಲ್ಲಿದ್ದಾರೆ."

ಅದಕ್ಕೆ ರಾಮರಾಜನು "ನಾನು ಅವರನ್ನು ಹೋಗಗೊಟ್ಟರಷ್ಟೆ. ಇಲ್ಲಿಯೆ ಅವರ ದೂಳು ಹಾರಿಸಿಬಿಡುವೆನು" ಎಂದನು.

"ನನಗೆ ಬಹು ಪ್ರಯತ್ನದಿಂದ ಸಂಪೂರ್ಣ ಗೊತ್ತಾಗಿದ್ದ ಶತ್ರುಗಳ ಕಡೆಯ ಮಹತ್ವದ ಸುದ್ದಿಯನ್ನು ತಮ್ಮ ಮುಂದೆ ಹೇಳಿಯೂ ಹೇಳದ ಹಾಗಾಗಿರುತ್ತದೆ. ನನ್ನಮೇಲೆ ವಿಶ್ವಾಸವಿಲ್ಲವೆಂದು ಹೀಗಾಗುತ್ತದೆಯೇನೊ?" ಎಂದು ರಣಮಸ್ತಖಾನನು ಅನ್ನತೊಡಗಿದನು.

ಆಗ ರಾಮರಾಜನು ಕುಳಿತಲ್ಲಿಂದ ಎದ್ದು ಖಾನನ ಬಳಿಗೆ ಹೋಗಿ, "ತಮ್ಮಾ, ಹೀಗೆ ಯಾಕೆ ಅನ್ನುತ್ತೀ? ನಿನ್ನ ಮೇಲೆ ನನ್ನ ವಿಶ್ವಾಸವಿದ್ದಷ್ಟು ಇಡಿಯ ನನ್ನ ರಾಜ್ಯದಲ್ಲಿ ಬೇರೆ ಯಾರ ಮೇಲೂ ಇರುವದಿಲ್ಲ. ಒಳ್ಳೇದು. ನೀನಿಷ್ಟು ನಂಬಿಕೆಯಿಂದ ಹೇಳುತ್ತಿಯೆಂದಮೇಲೆ ಅರ್ಧ ಸೈನ್ಯದೊಡನೆ ತಿರುಮಲನನ್ನು ಅತ್ತ ಕಡೆಗೆ ಕಳಿಸುತ್ತೇನೆ" ಎಂದು ನುಡಿದನು. ಅಷ್ಟರಲ್ಲಿ ರಾಮರಾಜನ ಚಾರರೇ ಬಂದು, ಕೆಲವೊಂದು ಮುಸಲ್ಮಾನ ಸೈನ್ಯವು ಹಿಂದೆಗೆದು ಎಲ್ಲಿಗೂ ಸಾಗುತ್ತಿರುವುದೆಂದು ಹೇಳಿದರು. ರಣಮಸ್ತನ ತಂತ್ರದಿಂದಲೇ ಅವರು ಹೀಗೆ ಓಡಿಹೋಗುವ ಸೋಗು ಹಾಕಿದ್ದರು. ಆಗ ರಾಮರಾಜನು ತಡಮಾಡದೇ ತನ್ನ ಬಂಧುಗಳಿಗೆ ಕಾಗದ ಬರೆದು ಅವರನ್ನು ಕಳಿಸಿಕೊಟ್ಟನು.

ಮರುದಿನ ಚಾರರಿಬ್ಬರು ಓಡಿ ಬಂದು, "ಪ್ರಭುಗಳೇ, ಮೋಸವಾಯಿತು. ವೈರಿಗಳ ಪ್ರಚಂಡ ಸೈನ್ಯವು ನಮ್ಮ ಬೀಡಿನ ಕಡೆಗೇ ಹೊರಟಿದೆ. ತೀರ ಹತ್ತಿರ ಬಂದಿದೆ" ಎಂದು ತಿಳಿಸಿದರು.

ರಾಮರಾಜನು ಕೂಡಲೇ ಯುದ್ಧಸನ್ನದ್ಧನಾದನು. ಎಲ್ಲಕ್ಕೂ ಮುಂದುಗಡೆಯಲ್ಲಿ ಆನೆಗಳ ಮೇಲೆ ಕುಳಿತು ಯುದ್ಧಮಾಡುವ ಸೈನ್ಯವನ್ನು ನಿಲ್ಲಿಸಿದ್ದರು. ಅದರ ಹಿಂದೆ ಕುದುರೆಯ ಸವಾರರನ್ನೂ, ಅವರ ಹಿಂದೆ ಕಾಲಾಳುಗಳನ್ನೂ ನಿಲ್ಲಿಸಿದ್ದರು. ಕಾಲಾಳುಗಳಲ್ಲಿ ಕೆಲವರು ಬಿಲ್ಲು ಬಾಣಗಳನ್ನೂ ಕೆಲವರು ತುಬಾಕಿಗಳನ್ನೂ ಹಿಡಿದಿದ್ದರು. ಕೇವಲ ಧನುರ್ವಿದ್ಯೆಯಲ್ಲಿ ಪ್ರವೀಣವಾಗಿದ್ದೊಂದು ಸೈನ್ಯಪಡೆಯನ್ನು ರಾಯನು ಸಿದ್ಧಮಾಡಿದ್ದನು. ಹೀಗೆ ಶಸ್ತ್ರಾಸ್ತ್ರಗಳಿಂದ ಸಜ್ಜಾಗಿ ನಿಂತಿದ್ದ ತನ್ನ ಸೈನ್ಯವನ್ನು ಅಶ್ವಾರೋಹಿಯಾಗಿ ಸುತ್ತು ಹಾಕುತ್ತ ಇಂಥ ಪ್ರಚಂಡ ಸೈನ್ಯದ ಮುಂದೆ ವೈರಿಗಳ ಆಟವೇನೂ ಸಾಗದೆಂದು ಭಾವಿಸಿ ಆನಂದಭರಿತನಾದನು. ರಾಮರಾಜನು ಅರಬ ಮತ್ತು ಪಠಾಣ ದಂಡಾಳುಗಳ ಪಡೆಯತ್ತ ಬಂದು, ರಣಮಸ್ತಖಾನನ ರೂಪು ಮತ್ತು ಪೋಷಾಕನ್ನು ನೋಡಿ ಮೆಚ್ಚಿಕೆಯಿಂದ, ನಾಲ್ಕು ಉತ್ತೇಜನಪರ ಮಾತುಗಳನ್ನಾಡಿ, ಹೋಗುವಾಗ, ಇನ್ನೊಂದು ಬದಿಗೆ ಸೈನ್ಯ ತೆಗೆದುಕೊಂಡು ಹಿಂದಿನಿಂದ ಹೊರಟಿದ್ದ ತನ್ನ ಬಂಧುಗಳನ್ನು ಕರೆಸಬೇಕೆಂದು ಅಪ್ಪಣೆಯಿತ್ತನು. ಆದರೆ ರಾಮರಾಜನ ಮುಂದೆ ಹಾಗೆ ಮಾಡುವೆನೆಂದು ಹೇಳಿದರೂ ಆ ಘಾತಕಿಯು ತಿರುಮಲ ವೆಂಕಟಾದ್ರಿಗಳ ಕಡೆಗೆ ಸ್ವಾರರನ್ನು ಕಳಿಸಲೇ ಇಲ್ಲ.

ಮುಸಲ್ಮಾನ್ ಸೈನ್ಯದವರು ಮುಂದೆ ಬಿಲ್ಲಾ

ಪುಗಳನ್ನು ನಿಲ್ಲಿಸಿದ್ದರು. ಅವರ ಹಿಂದೆ ತೋಫು ಗಳಿದ್ದವು. ಬಾಣಗಳನ್ನು ಸುರಿಸಿ ಹಿಂದೂ ಸೈನಿಕರನ್ನು ತಮ್ಮ ಕಡೆಗೆ ಎಳೆದುಕೊಂಡು, ಅಲ್ಲಿಂದ ತೋಫು ಹಾರಿಸಹತ್ತಿದರು. ಕೂಡಲೇ ಹಿಂದೂ ಸೈನ್ಯದವರೂ ತೋಫುಗಳನ್ನು ಹಾರಿಸತೊಡಗಿದರು.

ರಾಮರಾಜನು ಸ್ವತಃ ಆನೆಯ ಮೇಲೆ ಕುಳಿತು ಸಂಚರಿಸುತ್ತ ತನ್ನ ದಂಡಾಳುಗಳಿಗೆ ಧೈರ್ಯ ಹೇಳುತ್ತಿದ್ದನು. ವೃದ್ಧ ರಾಮರಾಜನ ಆಗಿನ ಶೌರ್ಯವನ್ನು ಭಾರತೀಯ ವೀರಾಗ್ರಣಿ ಭೀಷ್ಮನ ಶೌರ್ಯಕ್ಕೆ ಹೋಲಿಸಬಹುದು. ಕೆಲಹೊಂದು ಕಾಲದ ನಂತರ ಮುಸಲ್ಮಾನರ ತೋಫಿನ ಅಬ್ಬರವು ನಿಂತುಹೋಯಿತು. ಇನ್ನು ನಮ್ಮ ಕೈಯೇ ಮೇಲಾಯಿತೆಂದು ರಾಮರಾಯನು ತಿಳಿದನು. ಆದರೆ ಏನಾಯಿತೋ ಏನೊ ರಾಮರಾಜನು ಹತ್ತಿದ್ದ ಆನೆಗೆ ಗಾಯವಾಗಿ ಅದು ದೊಪ್ಪನೆ ನೆಲಕ್ಕೆ ಕುಳಿತಿತು. ಇತ್ತ ಮುಸಲ್ಮಾನ ಗೋಲಂದಾಜಗಳು ತಮ್ಮ ತೋಫುಗಳಲ್ಲಿ ತಾಮ್ರದ ದುಡ್ಡುಗಳನ್ನೂ ಚೂರುಗಳನ್ನೂ ತುಂಬಿ ಹಾರಿಸಹತ್ತಿದರು. ಅವರ ಹೊಡೆತ ತಾಳದೇ ಹಿಂದೂ ಸೈನ್ಯವು ಸರಿಯಹತ್ತಿತು. ಹೀಗಾಗಿ ಸೈನ್ಯದ ಶಿಸ್ತು ಕೆಡಲು, ಯುದ್ಧದ ಗದ್ದಲದಲ್ಲಿ ಹುಸೇನ ನಿಜಾಮ ಶಹನ ಆನೆಯು ರಾಮರಾಜನ ಹತ್ತರಕ್ಕೆಯೇ ಬಂದಿತು. ಆಗ ರಾಮರಾಜನ ಜನರು ಹಟದಿಂದ ಅವನನ್ನು ರಥದಲ್ಲಿ ಕುಳ್ಳಿರಿಸಿ ವೇಗದಿಂದ ಹಿಂದೆ ಸಾಗುತ್ತ ನಡೆದರು.

ತಮ್ಮ ಒಡೆಯನೇ ಹೀಗೆ ಓಡಿಹೋಗುವದನ್ನು ನೋಡಿ ಆತನ ಸೈನಿಕರಿಗೂ ಓಡಿಹೋಗುವ ಬುದ್ಧಿಯು ಉತ್ಪನ್ನವಾಯಿತು. ಅಕಸ್ಮಾತ್ತಾಗಿ ಹೀಗೆ ಯಾಕಾಯಿತೆಂಬುದು ಯಾರಿಗೂ ತಿಳಿಯಲೊಲ್ಲದು. ಆದರೆ ಓಡಿಹೋಗುವದರ ಹೊರತು ಬೇರೆ ವಿಚಾರ ಹೊಳೆಯಲಿಲ್ಲ. ಆಗ ಮುಸಲ್ಮಾನ ಸೈನಿಕರು ಮಾಡಿದ ಸಂಹಾರ ಕಾರ್ಯವನ್ನು ವರ್ಣಿಸಲಸದಳ.

ಅಷ್ಟರಲ್ಲಿ ವಿಶ್ವಾಸಘಾತಕಿಯಾದ ರಣಮಸ್ತಖಾನನು ತನ್ನ ದಂಡಾಳುಗಳಿಗೆ ಹಿಂದೂಸೈನ್ಯದ ಮೇಲೆ ಎರಗಿಬೀಳಲು ಆಜ್ಞೆಯಿತ್ತನು. ಹೀಗೆ ಎರಡೂ ಕಡೆಗೆಸಿಕ್ಕು ಹಿಂದೂ ಸೈನ್ಯವು ಜಿಬ್ಬೆಯಾಗತೊಡಗಿತು. ತುಸುಹೊತ್ತಿನಲ್ಲಿ, ರಾಮರಾಜನ ರಥವು ಹೋಗುತ್ತಿರುವುದು ರಣಮಸ್ತಖಾನನ ಕಣ್ಣಿಗೆ ಬಿದ್ದಿತು. ರಾಮರಾಜನ ಕೆಲವು ಸ್ವಾಮಿಭಕ್ತರು ತಮ್ಮ ಒಡೆಯನನ್ನು ಮುದಗಲ್ ಕೋಟೆಯ ತನಕ ಸುರಕ್ಷಿತ ಸಾಗಿಸಿಕೊಂಡು ಹೋಗುವ ಯತ್ನದಲ್ಲಿದ್ದರು.

ಕೂಡಲೇ ಖಾನನು ತನ್ನ ದಂಡಾಳುಗಳೊಡನೆ ಅವರ ಬೆನ್ನು ಹತ್ತಿದನು. ಆ ನಿಕರದ ಕಾಳಗದಲ್ಲಿ ರಾಮರಾಜನ ರಥವು ಮುರಿದುಬಿತ್ತು. ಅವನ ಒಂದು ಕೈಯು ತುಂಡರಿಸಲ್ಪಟ್ಟಿತು. ರಣಮಸ್ತಖಾನನು ಅವನ ಮುಂದೆ ನಿಂತುಕೊಂಡಾಗ, ರಾಮರಾಜನು "ಎಲೋ ನನ್ನ ಮೇಲೆ ತಿರುಗಿ ಬೀಳುವಿಯಾ?" ಎಂದು ಕೇಳಿದನು.

" ಮೊದಲು ನೂರಜಹಾನಳನ್ನು ಎಲ್ಲಿ ಇಟ್ಟಿರುವೆ ಹೇಳು."

" ನೂರಜಹಾನಳೇ ? ಕುಂಜವನದಲ್ಲಿ."

" ಭೇಷ್. ಬಹಳೇ ಒಳ್ಳೆಯದಾಯಿತು. ಇನ್ನು ಮೇಲೆ ನೀನು ಈ ಜಗತ್ತಿನಲ್ಲಿ ಇರುವ ಅವಶ್ಯವಿಲ್ಲ. ಅವಳ ಪ್ರಾಪ್ತಿಗಾಗಿ ನಾನು ನಿನ್ನ ಶಿರಶ್ಛೇದ ಮಾಡಲೇಬೇಕಾಗಿರುವದು."

"ತಮ್ಮಾ ನೀನು ನನ್ನ ....." ಎಂದು ರಾಮರಾಜನು ಅನ್ನುತ್ತಿರುವಾಗಲೇ ರಣಮಸ್ತನು ಅವನ ರುಂಡವನ್ನು ದಿಂಡದಿಂದ ಬೇರೆಮಾಡಿ ರಕ್ತ ಸುರಿಯುತ್ತಿರುವ ಆ ಶಿರಸ್ಸನ್ನು ಕುದುರೆಯ ರಿಕೀಬಿಗೆ ಕಟ್ಟಿ ತನ್ನ ಜನರೊಡನೆ ಕುಂಜವನದತ್ತ ಭರದಿಂದ ಸಾಗಿದನು.

ಆ ಕೊಲೆಗಡುಕನು ಕುಂಜವನವನ್ನು ಮುಟ್ಟಿದಾಗ ಇಳಿಹೊತ್ತಿನ ಸಮಯವಾಗಿತ್ತು. ಅವನು ಕುದುರೆಯನ್ನಿಳಿದು, ರುಂಡವನ್ನು ತನ್ನ ಕರವಸ್ತ್ರದಲ್ಲಿ ಹಿಡಿದುಕೊಂಡು ಪುಷ್ಕರಿಣಿಗೆ ಬಂದನು. ಅಲ್ಲಿಯೆ ನೂರಜಹಾನ ಮೆಹೆರಜಾನರಿಬ್ಬರೂ ಮಾತನಾಡುತ್ತ ಕುಳಿತಿದ್ದರು.

ರಣಮಸ್ತಖಾನನು ರುಂಡವನ್ನು ದೊಪ್ಪನೆ ಅವರ ನಡುವೆ ಒಗೆದು, "ಇದೇ ಆ ರಾಮರಾಜನ ಶಿರಸ್ಸು ! ನನ್ನ ಪ್ರತಿಜ್ಞೆಯನ್ನು ಪೂರ್ಣಮಾಡಿದ

ನಿಶಾನೆಯಿದು! ಅರಗಿಳಿಯೇ, ಯಾವನು ನೆರೆದ ದರ್ಬಾರದಲ್ಲಿ ನಿನ್ನ ಮಾನಖಂಡನ ಮಾಡಿದನೋ ಅವನ ತಲೆಯಿದು! ಇದನ್ನು ಕೈಮುಟ್ಟಿ ನಾನು ಕೊಯ್ದು ತಂದಿರುತ್ತೇನೆ" ಎಂದು ನುಡಿಯುತ್ತಿರಲು ಮೆಹೆರಜಾನಳು ಅತ್ಯಂತ ದುಃಖದಿಂದ- "ನೀನು, ನೀನು ಕೈಮುಟ್ಟಿ ತುಂಡರಿಸಿದೆಯಾ?"

ರಣಮಸ್ತ: ಅಹುದಹುದು, ಮಾಸಾಹೇಬ. ಯಾವನ ದ್ವೇಷ ಮಾಡುವಂತೆ ನೀವು ಚಿಕ್ಕಂದಿನಿಂದ ನನಗೆ ಕಲಿಸಿದಿರೋ ಆ ದುಷ್ಟ ರಾಮರಾಜನ ಶಿರಸ್ಸನ್ನು ನಾನೇ ತುಂಡರಿಸಿದೆನು.

ಮೆಹೆರಜಾನ: ಅಲ್ಲೋ! ಅವನು ನಿಮ್ಮ ತಂದೆಯು! ಆದರೆ ಇನ್ನು ಪ್ರಯೋಜನವೇನು? ಈಗಾಗುವ ಪ್ರಯೋಜನವಿಷ್ಟೇ— ಎಂದು ಆ ರುಂಡವನ್ನು ಎತ್ತಿಕೊಂಡು ಪುಷ್ಕರಿಣಿಯಲ್ಲಿ ಹಾರಿಬಿಟ್ಟಳು.

ಇದನ್ನು ನೋಡಿ ಖಾನನು ದಂಗುಬಡಿದು ನಿಂತನು. ಇಷ್ಟು ಹೊತ್ತಿನ ತನಕ ಆತನ ಮುಖದಲ್ಲಿ ತೋರುತ್ತಿದ್ದ ಆನಂದ, ವಿಜಯ, ಕೃತಕೃತ್ಯತೆ ಮೊದಲಾದ ಲಕ್ಷಣಗಳು, ತಾಯಿಯ ಕಟ್ಟಕಡೆಯ ಮಾತಿನಿಂದಲೂ ಕೃತಿಯಿಂದಲೂ ಲಯ ಹೊಂದಿದುವು. ಇತ್ತ ಮಾರ್ಜೀನೆಯೂ ಪುಷ್ಕರಿಣಿಯಲ್ಲಿ ಹಾರಿಕೊಳ್ಳಬೇಕೆಂದು ಯತ್ನಿಸುರುವಾಗ, ರಣಮಸ್ತನು ಅವಳ ಕೈಹಿಡಿದನು. ನಿರಿಚ್ಛಳಾದ ಆಕೆಯು ರಣಮಸ್ತನ ಜನ್ಮವೃತ್ತಾಂತವನ್ನು ಸಾದ್ಯಂತವಾಗಿ ಹೇಳಿದಳು.

ಅದನ್ನು ಕೇಳಿದ ನೂರಜಹಾನಳು, ರಣಮಸ್ತಖಾನನು ಒಬ್ಬ ಹಿಂದೂ ರಾಜನ ವ್ಯಭಿಚಾರದಿಂದ ಹುಟ್ಟಿ, ಪಿತೃವಧದಂಥ ನೀಚ ಕಾರ್ಯ ಮಾಡಿದನೆಂದು ತಿಳಿದು ಅವನನ್ನು ತಿರಸ್ಕರಿಸಹತ್ತಿದಳು. ಇಲ್ಲಿಂದ ಹೇಗೆ ಪಾರಾಗಬೇಕೆಂದು ಯೋಚಿಸತೊಡಗಿದಳು. ಇತ್ತ ರಣಮಸ್ತಖಾನನು, "ಪ್ರತ್ಯಕ್ಷ ತಂದೆಯು ತನ್ನನ್ನು ಅಕೃತ್ರಿಮ ರೀತಿಯಿಂದ ಪ್ರೀತಿಸುತ್ತಿರಲು, ನಾನು ಈ ಕೈಯಿಂದ ಶಿರಚ್ಛೇದ ಮಾಡಿ ಪಾಪಕ್ಕೆ ಗುರಿಯಾದೆನಲ್ಲ!" ಎಂದು ವಿಚಾರ ಮಾಡುತ್ತ ಓಡಿಹೋಗಬೇಕೆನ್ನುವ ನೂರಜಹಾನಳ ಕೈಯನ್ನು ಬಿಗಿಯಾಗಿ ಹಿಡಿದು, "ನಿನ್ನ ಸಲುವಾಗಿ ನಾನು ಇದನ್ನೆಲ್ಲ ಮಾಡಿದೆನು. ಇನ್ನು ಈ ಮಂಗಲ ಭೂಮಿಯಲ್ಲಿ ತಾಯಿತಂದೆಗಳ ಸಮಕ್ಷಮ ಲಗ್ನವಾಗಿ ಬಿಡಲಿ" ಎನ್ನುತ್ತ ಅವಳನ್ನು ಎತ್ತಿಹಿಡಿದು ಗಟ್ಟಿಯಾಗಿ ಅವಚಿಕೊಂಡು ಪುಷ್ಕರಿಣಿಯಲ್ಲಿ ಹಾರಿದನು.

ಇತ್ತ ಯುದ್ಧಭೂಮಿಯಿಂದ ಹತಾಶರಾಗಿ ರಾಜಧಾನಿಗೆ ಸೈನಿಕರು ಬಂದರು. ಅಲ್ಲಿನ ದುಃಸ್ಥಿತಿಯನ್ನು ವರ್ಣಿಸಲಸಾಧ್ಯ. ಎಲ್ಲ ಕಡೆಗೆ ಹಾಹಾಕಾರವು ಉತ್ಪನ್ನವಾಯಿತು. ಒಂದೇ ದಿನದಲ್ಲಿ ರಾಜಧಾನಿಯ ಸ್ಥಿತಿಯು ಕೆಟ್ಟುಹೋಯಿತು. ಮುಸಲ್ಮಾನ ಸೈನಿಕರು ಬರುವ ಮುಂಚೆ ಲಮ್ಮಾಣಿಗಳು, ಕೊರಚರು ಮುಂತಾದ ಕಾಡು ಜನರು, ಹಗಲು ಹಾಡೇ ಸಾಹುಕಾರರ ಮನೆಗೆ ದರವಡೆಗಳನ್ನಿಕ್ಕಹತ್ತಿದರು. ನಾಲ್ಕನೆಯ ದಿನ ಶತ್ರುಗಳು ಪ್ರವೇಶಿಸಿ ಘೋರ ಕೃತ್ಯಗಳನ್ನು ಎಸಗಹತ್ತಿದರು. ಕೊಲೆ, ಸುಲಿಗೆ, ಸ್ತ್ರೀಯರ ಮಾನಭಂಗಗಳಲ್ಲದೆ, ತೋಫುಗಳನ್ನು ಹೊಡಿ ಅರಮನೆಯನ್ನು ನಾಶಮಾಡಿದರು; ದೇವಸ್ಥಾನಗಳನ್ನು ಕೆಡವಿದರು. ಕೋಟಿಗಟ್ಟಲೆ ವೆಚ್ಚ ಮಾಡಿ ಕಟ್ಟಿಸಿದ ಕಲಾಕೌಶಲ್ಯಗಳನ್ನು ನಾಶಮಾಡಲಿಕ್ಕೆ ಮುಸಲ್ಮಾನರಿಗೆ ಎಂಟು ದಿನಗಳು ಸಹ ಹತ್ತಲಿಲ್ಲ.

ಆ ನಗರದಲ್ಲಿ ಸಂಪತ್ತು ಎಷ್ಟು ತುಂಬಿರುವದೆಂಬುದರ ಕಲ್ಪನೆಯು, ಈ ಸುಲಿಗೆಯ ಪ್ರಸಂಗ ಒದಗುವವರೆಗೆ ಯಾರಿಗೂ ಆಗಿದ್ದಿಲ್ಲ. ಕೋಟೋ ಎಂಬ ಇತಿಹಾಸಕಾರನು ಹೇಳುವದೇನೆಂದರೆ, "ಈ ಸುಲಿಗೆಯಲ್ಲಿ ಅಗಣಿತ ಸಂಪತ್ತು ಸುಲಿಯಲ್ಪಟ್ಟಿತು. ಅದರಲ್ಲಿ ಸಿಕ್ಕ ಒಂದು ರತ್ನವು ಕೋಳಿತತ್ತಿಯಷ್ಟು ಇತ್ತು. ಈ ರತ್ನವನ್ನು ರಾಮರಾಜನು ತನ್ನ ಕುದುರೆಯ ಶಿರೋಭೂಷಣದಲ್ಲಿ ಕೂಡ್ರಿಸಿದ್ದನು." ಕುದುರೆಯ ಶಿರೋಭೂಷಣದಲ್ಲಿಯೆ ಇಷ್ಟು ದೊಡ್ಡ ರತ್ನವು ಇದ್ದ ಬಳಿಕ, ರಾಜಗೃಹದಲ್ಲಿಯೂ ಧನಿಕರ ಮನೆಗಳಲ್ಲಿಯೂ ಎಷ್ಟು ಸಂಪತ್ತು ಕೂಡಿಬಿದ್ದಿತ್ತೆಂಬುದನ್ನು ನಮ್ಮಂಥವರು ಕಲ್ಪಿಸುವದು ಅಸಾಧ್ಯವೇ ಸರಿ. ಅರಸರೇನು, ದರಿದ್ರರೇನು, ಕರ್ಮಫಲವನ್ನು ಭೋಗಿಸಿಯೇ ತೀರಬೇಕು!

# ನೀವು ಮಿತ್ರರನ್ನು ಪಡೆಯಬಲ್ಲಿರಾ ?

"ಸೈಕಾಲಜಿಸ್ಟ್" ಆಧಾರದಿಂದ

ತಮಗೆ ಗೆಳೆಯರಿಲ್ಲೆಂದು ಎಷ್ಟೋ ಜನ ದೂರುವುದುಂಟು. ಸಿಕ್ಕಿದರೂ ಅವರು ತಮಗೆ ಎಲ್ಲ ವೇಳೆಗಳಲ್ಲಿ ನೆರವಾಗುವುದಿಲ್ಲೆಂದು ಅವರು ಹೇಳುತ್ತಾರೆ. ಆದರೆ ಮಿತ್ರಪ್ರಾಪ್ತಿಗೂ ನಮ್ಮಲ್ಲಿ ಕೆಲ ಗುಣಗಳಿರಬೇಕು. ಮಿತ್ರಪ್ರಾಪ್ತಿಗೆ ಅಗತ್ಯ ಗುಣಗಳು ನಿಮ್ಮಲ್ಲಿವೆಯೇ ಎಂದು, ಈ ಕೆಳಗಿನ ಪ್ರಶ್ನೆಗಳಿಗೆ ಪ್ರಾಮಾಣಿಕ ಉತ್ತರವಿತ್ತು ನೀವೇ ಕಂಡುಕೊಳ್ಳಬಹುದು.

೧. ನೀವು ವೇಷ ಭೂಷಣ ಮತ್ತು ಆಕೃತಿಯಲ್ಲಿ ಶಿಸ್ತಾಗಿದ್ದು ಇತರರೊಡನೆ ಹೊರಬಿದ್ದಾಗ ಚೆನ್ನಾಗಿ ಕಾಣಿಸುವಂತಿರುತ್ತೀರಾ ?

೨. ಯಾರನ್ನಾದರೂ ಭೆಟ್ಟಿಯಾದಾಗ ನಿಮಗಾದ ಸಂತೋಷವನ್ನು ಪ್ರದರ್ಶಿಸುತ್ತೀರಾ ?

೩. ಮಿತ್ರರ ಮೈತ್ರಿಗೆ ನೀವು ಮರ್ಯಾದೆಕೊಡುತ್ತೀರೆಂದು ಅವರಿಗನಿಸುವಂತೆ ವರ್ತಿಸುತ್ತೀರಾ ?

೪. ಬಹುಸಂಖ್ಯಾಕ ಜನರು ಹೆಚ್ಚು ಮೆಚ್ಚುವ ವಿಷಯಗಳಲ್ಲಿ ನಿಮಗೆ ಅಭಿರುಚಿಯಿದೆಯೆ ?

೫. ಪತ್ರಗಳಿಗೆ ಸಕಾಲದಲ್ಲಿ ಉತ್ತರ ಕೊಡುವ, ವೇಳೆ ಗೊತ್ತುಮಾಡಿದ ಮೇಲೆ ಅದನ್ನು ಪಾಲಿಸುವ, ಗೆಳೆಯರನ್ನು ಮನೆಗೆ ಕರೆಯುವ ಹಾಗು ಅವರಲ್ಲಿ ಹೋಗಿ ಬರುವ ಅಭ್ಯಾಸ ನಿಮಗಿದೆಯೆ ?

೬. ಸಾಮಾಜಿಕ ಕಾರ್ಯಗಳಲ್ಲಿ ಭಾಗವಹಿಸಿ ಜನರಿಗೆ ಅವರ ಕೆಲಸದಲ್ಲಿ ನೆರವಾಗುತ್ತೀರಾ ?

೭. ಹಣದ ವಿಷಯದಲ್ಲಿ ಸ್ವಲ್ಪಾದರೂ ಧಾರಾಳಬುದ್ಧಿ ನಿಮ್ಮಲ್ಲಿದೆಯೇ ?

೮. ಪರರಿಗೆ ಕೈಲಾದ ಸಹಾಯಮಾಡಲು ನೀವು ಸದಾ ಸಿದ್ಧರಿರುತ್ತೀರಾ ?

೯. ಪರರ ಉತ್ಸಾಹ ಮಹತ್ವಾಕಾಂಕ್ಷೆಗಳನ್ನು ಹತ್ತಿಕ್ಕದೆ ಅವುಗಳಿಗೆ ಉತ್ತೇಜನವೀಯುತ್ತೀರಾ ?

೧೦. ಮಂದಿಯ ಮೇಲೆ ಹುಕುಂ ಚಲಾಯಿಸುವ ನಿಮ್ಮ ಪ್ರವೃತಿಯನ್ನು ನೀವು ತಡೆದುಕೊಳ್ಳಬಲ್ಲಿರಾ ?

೧೧. ನಿಮ್ಮ ಮಿತ್ರರ ಪರಿಚಯವನ್ನು ಇತರರಿಗೆ ಮಾಡಿಕೊಡುವ ಸ್ವಭಾವ ನಿಮಗುಂಟೆ ?

೧೨. ಪರರ ಗುಟ್ಟನ್ನು ಕೇಳಿಕೊಂಡು ಅದನ್ನು ನೀವು ಗುಟ್ಟಾಗಿಯೆ ಇಡಬಲ್ಲಿರಾ ?

೧೩. ನೀವು ಕೊಟ್ಟ ಮಾತನ್ನು ನಡೆಸಿಕೊಡುವಿರೆಂದು ಜನರಿಗೆ ವಿಶ್ವಾಸವುಂಟೆ ?

೧೪. ಅಪವಾದಗಳನ್ನು ಹಬ್ಬಿಸದೆ, ಒಬ್ಬರ ಚಾಡಿ ಇನ್ನೊಬ್ಬರಿಗೆ ಬೆಸೆಯದೆ, ಸಮಾಜದಲ್ಲಿ ಸುಖಶಾಂತಿ ಹಬ್ಬಿಸಲು ನೀವು ನೆರವಾಗುತ್ತೀರಾ?

೧೫. ನಿಮ್ಮ ಅಹಂಕಾರ ಕ್ರೋಧಗಳನ್ನು ಹತ್ತಿಕ್ಕಿಕೊಳ್ಳಬಲ್ಲಿರಾ ?

೧೬. ನಿಮ್ಮ ಕಷ್ಟ-ಅಸ್ವಸ್ಥಗಳ ಪಲ್ಲವಿಯನ್ನು ಜನರ ಮುಂದೆ ಹಾಡದೆ ಇರುವದು ನಿಮಗೆ ಸಾಧ್ಯವೆ ?

೧೭. ಇನ್ನೊಬ್ಬರ ಮಾತನ್ನು ಸಹಾನುಭೂತಿಯಿಂದ ಕೇಳುತ್ತೀರಾ ?

೧೮. ಇತರರ ಗುಣಗ್ರಹಣ ಮಾಡಿ ಪ್ರಶಂಸಿಸುವ ಔದಾರ್ಯ ನಿಮಗಿದೆಯೆ ?

೧೯. ಜನರ ಸಂಗಡ ವ್ಯವಹರಿಸುವಾಗ ಪ್ರೀತಿಯನ್ನು ಪ್ರಕಟಿಸುತ್ತೀರಾ ?

೨೦. ಯಾವಾಗಲೂ ಉದಾರ ಮತ್ತು ವಿನಯಶೀಲರಾಗಿರುತ್ತೀರಾ ?

ಈ ಪ್ರಶ್ನೆಗಳಿಗೆ ನೀವೀಯುವ ಪ್ರತಿಯೊಂದು "ಹೌದು" ಉತ್ತರಕ್ಕೆ ೫ ರಂತೆ ಗುಣಗಳನ್ನು ಎಣಿಸಿರಿ. ೭೦ ಕ್ಕಿಂತ ಹೆಚ್ಚು ಗುಣ ದೊರಕಿದರೆ ನೀವು ಮಿತ್ರರನ್ನು ಖಂಡಿತ ಆಕರ್ಷಿಸಬಲ್ಲಿರಿ. ೬೦-೭೦ ಗುಣ ಸಿಕ್ಕಿದರೆ ಮಧ್ಯಮ. ಅದಕ್ಕೂ ಕಡಿಮೆ ಸಿಕ್ಕಿದರೆ "ಇಲ್ಲ" ಗಳಿಂದ ಸೂಚಿಸಲ್ಪಟ್ಟ ದುರ್ಗುಣಗಳನ್ನು ತಿದ್ದಿಕೊಳ್ಳಲು ಹೆಣಗುವುದು ಅಗತ್ಯ.

Edited, printed and published by H. R. Moharay at

# ಈ ಸಂಚಿಕೆಯಲ್ಲಿ

ಓದದೆ ಬಿಡಲಾರದ ಲೇಖಗಳಲ್ಲಿ ಕೆಲವು........

ಕಾಶ್ಮೀರದ ಮೇಲೆ ಪಾಕಿಸ್ತಾನ ಹೇಗೆ ದಾಳಿ ಮಾಡಿತು?

ಮಾಸ್ಕೋದಲ್ಲಿ ಮಗು ಹುಟ್ಟಿದಾಗ—

ಗುಲಾಮ ವ್ಯಾಪಾರ ಇನ್ನೂ ಸಾಗಿದೆ

೧೨೫ ವರ್ಷಗಳ ಹಿಂದೆ ಸಹಗಮನ

೧೮ ಎಕರೆಗಳಲ್ಲಿ ೭೦ ರಾಷ್ಟ್ರಗಳು

ಜೇನೆಂದರೆ ಅಮೃತ!

ನನ್ನ ಅದ್ಭುತ ಉಪವಾಸ

ಮಹಾಮಹೋಪಾಧ್ಯಾಯರೆಂದರಾರು?

ನೋಬಲ್ ಬಹುಮಾನಗಳ ಕಥೆ

.... .... .... ಇತ್ಯಾದಿ ಇತ್ಯಾದಿ

ಪುಸ್ತಕ ವಿಭಾಗ

ಗಳಗನಾಥರ "ಕನ್ನಡಿಗರ ಕರ್ಮಕಥೆ"

ಮಾರ್ಶಲ್ ಜುಕೋವ್

ಶರಚಂದ್ರರ ವಿಕ್ಷಿಪ್ತತೆ

March,



As.

ಲೋಕಶಿಕ್ಷಣ